# ನಮ್ಮ ಹಳ್ಳಿಗಳು



ಎ. ಶೇಷಯ್ಯಂಗಾರ್ಯ್, ಎಂ. ಎ.,
ಸಹಾಯೋಪಾಧ್ಯಾಯ,
ಮಹಾರಾಜರ ಹೈಸ್ಕೂಲ್, ಮೈಸೂರು.

ಮೈಸೂರು :
ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್,
1936

 [ ಬೆಲೆ 1-4-0

# ಪ್ರಸ್ತಾವನೆ

ನಮ್ಮ ಹಳ್ಳಿಯ ರೈತರ ಜೀವನವನ್ನು ಉತ್ತಮಪಡಿಸುವವರೆಗೂ ನಮ್ಮ ನಾಡು ಅಭಿವೃದ್ಧಿಗೆ ಬರಲಾರದೆಂಬ ಅಂಶವು ಸರ್ವವಿದಿತವಾಗಿದೆ. ಸಾರ್ವಭೌಮ ಸರ್ಕಾರದವರೂ, ಆಶ್ರಿತ ರಾಷ್ಟ್ರಗಳ ಸರ್ಕಾರದವರೂ, ಕಾಂಗ್ರೆಸ್ ಮೊದಲಾದ ಸಂಸ್ಥೆಗಳೂ ಗ್ರಾಮಪುನರುದ್ಧಾರಕ್ಕಾಗಿ ಬಹಳವಾಗಿ ಕಷ್ಟಪಡುತ್ತಿರುವರು. ಆದರೆ ರೈತರ ಸಹಕಾರವಿಲ್ಲದೆ ಇಂತಹ ಪ್ರಯತ್ನಗಳು ಸಫಲವಾಗಲಾರವು. ಆದುದರಿಂದಲೇ ಗ್ರಾಮಪಂಚಾಯತಿಗಳು, ಗ್ರಾಮ ಪರಸ್ಪರಸಹಾಯಕಸಂಘಗಳು, ಗ್ರಾಮ ಪಾಠಶಾಲೆಗಳು—ಇವುಗಳ ಮೂಲಕ ರೈತರಲ್ಲಿಯೇ ಹೆಚ್ಚು ಜಾಗೃತಿಯನ್ನು ಉಂಟುಮಾಡಬೇಕೆಂಬುದು. ನಮ್ಮ ಹಳ್ಳಿಗಳ ವಾಸ್ತವಿಕಚಿತ್ರವನ್ನು ಈ ಸಂಸ್ಥೆಗಳಿಗೆ ಒದಗಿಸಿಕೊಡುವುದೇ ಈ ಗ್ರಂಥದ ಮುಖ್ಯೋದ್ದೇಶ. ನಮ್ಮ ಹಳ್ಳಿಗಳ ದುಸ್ಥಿತಿ, ಇತರ ದೇಶಗಳಲ್ಲಿ ರೈತರು ತಮ್ಮ ಕಷ್ಟವನ್ನು ಹೇಗೆ ನಿವಾರಿಸಿಕೊಳ್ಳುತ್ತಿರುವರು, ನಮ್ಮ ಸನ್ನಿವೇಶವನ್ನು ನಾವು ಬದಲಾಯಿಸಬೇಕಾದರೆ ಯಾವ ಉಪಕರಣಗಳು ಆವಶ್ಯಕ—ಮುಂತಾದ ವಿಷಯಗಳನ್ನು ಸ್ವಲ್ಪಮಟ್ಟಿಗೆ ವಿಶದಪಡಿಸಲು ಈ ಗ್ರಂಥದಲ್ಲಿ ಯತ್ನಿಸಲಾಗಿದೆ.

ಗ್ರಂಥಕರ್ತನ ಪ್ರಥಮಕರ್ತವ್ಯವು ತನ್ನ ಪೂಜ್ಯಗುರುಗಳಾದ ಶ್ರೀಮಾನ್ ಎ. ಎಸ್. ಸುಬ್ಬರಾವ್, ಎಂ.ಎ., (ಕ್ಯಾಂಟಬ್) ಬಾರ್-ಅಟ್-ಲಾ, ಅವರಿಗೆ ಭಕ್ತಿಪೂರ್ವಕವಾದ ವಂದನೆಗಳನ್ನರ್ಪಿಸುವುದು. ಗ್ರಂಥಕರ್ತನಿಗೆ ಅರ್ಥಶಾಸ್ತ್ರದ ಪ್ರಥಮ ಪರಿಚಯವನ್ನು ಮಾಡಿಕೊಟ್ಟವರು ಅವರು; ಶಿಕ್ಷಣಶಾಲೆಗಳ ವಿದ್ಯಾರ್ಥಿಗಳೊಡನೆ ಗ್ರಾಮಜೀವನದ ವಿಷಯವನ್ನು ಚರ್ಚಿಸುವ ಅವಕಾಶವನ್ನು ಒದಗಿಸಿದವರೆವರು ; ವಿದ್ಯಾವಂತರು ಬಹುಮಟ್ಟಿಗೆ ರೈತರ ಋಣಿಗಳೆಂಬುದನ್ನು ಮನವರಿಕೆಮಾಡಿ

ಕೊಟ್ಟವರವರು. ಆದುದರಿಂದ ಸಕಲ ವಿಷಯದಲ್ಲಿಯೂ ಗ್ರಂಥಕರ್ತನು ಅವರಿಗೆ ಋಣಿಯಾಗಿರುವನು.

ಗ್ರಂಥರಚನೆಯಲ್ಲಿಯೂ ಪ್ರಕಟಣದಲ್ಲಿಯೂ ಗ್ರಂಥಕರ್ತನಿಗೆ ಬಹುಮಂದಿ ನೆರವಾಗಿರುವರು. ಶ್ರೀಮಾನ್ ಆರ್. ಎ. ಸಂಪತ್ಕುಮಾರಾಚಾರ್ಯ, ಬಿ.ಎ., ಅವರ ಉದಾರಸಹಾಯವೂ ಉತ್ತೇಜನವೂ ದೊರೆಯದಿದ್ದರೆ ಗ್ರಂಥವು ಹೊರಬೀಳಲು ಅವಕಾಶವಿರುತ್ತಿರಲಿಲ್ಲ. ಅದೇ ರೀತಿಯಲ್ಲಿ ಶ್ರೀಮಾನ್ ಕೆ. ಶ್ರೀಕಂಠಶಾಸ್ತ್ರಿಗಳು ಗ್ರಂಥದ ಹಸ್ತಪ್ರತಿಯನ್ನೂ ಅಚ್ಚು ಪ್ರತಿಯನ್ನೂ ಆಮೂಲಾಗ್ರವಾಗಿ ಶೋಧಿಸಿ, ಗ್ರಂಥದ ಶೈಲಿಯನ್ನು ಬಹುವಾಗಿ ಕ್ರಮಪಡಿಸಿರುವರು. ಶ್ರೀಮಾನ್ ಸಿ. ಎಸ್. ಶ್ರೀನಿವಾಸರಾವ್, ಬಿ.ಎ., ಬಿ.ಟಿ., ಅವರು ಅನೇಕ ಉಪಯುಕ್ತವಾದ ಸಲಹೆಗಳನ್ನು ಕೊಟ್ಟಿರುವರು. ಶ್ರೀಮಾನ್ ಕೆ. ಸುಬ್ರಹ್ಮಣ್ಯಂ, ಎಂ.ಎ., ಅವರು ಗ್ರಂಥದ ಕೆಲವು ಪ್ರಕರಣಗಳ ರಚನೆಯಲ್ಲಿ ನೆರವಾಗಿರುವರು. ಇವರೆಲ್ಲರಿಗೂ ಗ್ರಂಥಕರ್ತನ ಅನಂತ ವಂದನೆಗಳು. ತಮ್ಮ ಸುಂದರವಾದ ಅಕ್ಷರದಲ್ಲಿ ಗ್ರಂಥದ ಹಸ್ತಪ್ರತಿಯನ್ನು ತಯಾರಿಸಿಕೊಟ್ಟ ಶ್ರೀಮಾನ್ ಟಿ. ಟಿ. ಶರ್ಮ ಅವರಿಗೂ, ತ್ವರೆಯಿಂದ ಮುದ್ರಣಕಾರ್ಯವನ್ನು ಮುಗಿಸಿಕೊಟ್ಟ ಪಂಚಾಚಾರ್ಯ ಪ್ರೆಸ್ ಮಾಲಿಕರಿಗೂ, ತಮ್ಮ ಪತ್ರಿಕೆಯಲ್ಲಿ ಈ ಮೊದಲೇ ಪ್ರಕಟವಾಗಿದ್ದ ಗ್ರಂಥಕರ್ತನ 'ರೈತರ ಸಾಲ' ವೆಂಬ ಲೇಖನವನ್ನು ಉಪಯೋಗಿಸಿಕೊಳ್ಳಲು ಅನುಮತಿಯಿತ್ತ ಜಯಕರ್ಣಾಟಕದ ಸಂಪಾದಕರಿಗೂ ವಂದನೆಗಳು.

ಮಹಾರಾಜರವರ ಹೈಸ್ಕೂಲು,
ಮೈಸೂರು.
ಧಾತೃಸಂವತ್ಸರದ ವಿಜಯದಶಮಿ,
ಭಾನುವಾರ
(ತಾ|| 25-10-1936.)

**ಅಘಲಯಂ. ಶೇಷಯ್ಯಂಗಾರ್.**

'The problem (of rural reconstruction) is one of great dimensions, as will be plain to any one, who examines the conditions prevailing in a typical village and studies the life of the different sections of its inhabitants. There are some countries in which similar problems are being tackled through the drastic action of socialistic state. I hope that it may never be necessary for us in Mysore to try to dragoon people into different habits of living by state-action; but the alternative is to recognise that village reconstruction is the work of every one of us, and we must never forget that the raiyats in the countryside are the backbone of Mysore, and must never lose an opportunity of taking steps to assist them to prosperity, to improve their knowledge or to help to induce that local pride in their villages which is such a powerful incentive to healthier and wiser living.'—

*From Sir Mirza M. Ismail's address to the Representative Assembly, Mysore, 30th September 1933.*

# ವಿಷಯಸೂಚಿ

# ಪೀಠಿಕಾಪ್ರಕರಣ

---

ಭಾರತಭೂಮಿಯು ರೈತರನಾಡು, ನೇಗಿಲ ಯೋಗಿಗಳ ನೆಲೆವೀಡು. ಇಲ್ಲಿಯ ಜನಗಳಲ್ಲಿ ಶೇಕಡ 81ಕ್ಕೆ ಮೀರಿ ಹಳ್ಳಿಗಳಲ್ಲಿ ವಾಸಮಾಡುವವರು; ಅವರಲ್ಲಿಯೂ ಬಹುಮಂದಿ 500 ಜನಗಳಿಗಿಂತ ಕಡಿಮೆಯಾಗಿರುವ ಹಳ್ಳಿಗಳಲ್ಲಿಯೇ ವಾಸಮಾಡುವವರು. (1931 ನೆಯ ಇಸವಿಯಲ್ಲಿ ಇಡೀ ಇಂಡಿಯಾ ದೇಶದ ಪ್ರತಿಹಳ್ಳಿಯಲ್ಲಿಯೂ ಸರಾಸರಿ 450.4 ಜನಗಳೂ, ಮೈಸೂರಿನಲ್ಲಿ 334 ಜನಗಳೂ ವಾಸಮಾಡುತ್ತಿದ್ದರು.[1]) ಪಾಶ್ಚಾತ್ಯ ಸಂಸ್ಕೃತಿಯು ಹೇಗೆ ನಗರಸಂಸ್ಕೃತಿಯೋ, ಹಾಗೆಯೇ ಭಾರತಸಂಸ್ಕೃತಿಯು ಗ್ರಾಮಸಂಸ್ಕೃತಿ. ಆದುದರಿಂದ ರೈತರ ಹಿತವೇ ನಾಡಿನ ಹಿತ; ರೈತರ ಅವನತಿಯೇ ನಾಡಿನ ಅವನತಿ. ರೈತರು ಉಳಿದರೆ, ಬೆಳೆದರೆ ನಮ್ಮ ಸಂಸ್ಕೃತಿಯು ಉಳಿವುದು, ಬೆಳೆವುದು; ರೈತರು ಅಳಿದರೆ ನಮ್ಮ ಸಂಸ್ಕೃತಿಯೂ ಅಳಿವುದು.

ಈ ದೃಷ್ಟಿಯಿಂದ ಭಾರತಭೂಮಿಯನ್ನು ಸಿಂಹಾವಲೋಕನ ಮಾಡಿದಲ್ಲಿ ನಮಗೆ ಗೋಚರವಾಗುವ ದೃಶ್ಯವು ಅತಿ ಭೀಕರವಾದುದು; ಕಲ್ಲೆದೆಯನ್ನೂ ನೀರಾಗಿಸುವ ದೃಶ್ಯ. ನಮ್ಮ ರೈತರು "ಬಡತನದ ಪಂಕದಲಿ ಮಿಳಮಿಳನೆ ಪುಳುಗಳಂತುದಿಸುವರು, ಸಾಯುವರು.[2]" ಎತ್ತನೋಡಿದರತ್ತ ಬಡತನ—ಮುಡ್ಡಿನಲ್ಲಿ ಬಡತನ, ಧೈರ್ಯದಲ್ಲಿ ಬಡತನ, ದೇಶಭಕ್ತಿಯಲ್ಲಿ ಬಡತನ. ನಿರ್ವೀರ್ಯತೆ, ನಿರುತ್ಸಾಹ, ನಿರುದ್ಯೋಗ—ಇವುಗಳ ಹಾವಳಿ. ಈ ಬಡತನದ ಬಂಧನದಿಂದ ಭಾರತಮಾತೆಯನ್ನು ಬಿಡಿಸಬೇಕಾದರೆ, ಭಾರತಸಂಸ್ಕೃತಿಯನ್ನು ಪುನಃ ಬೆಳೆಯಿಸಬೇಕಾದರೆ ಸಮಾಜನೇತೃಗಳ ದೃಷ್ಟಿಯು ನಮ್ಮ ಹಳ್ಳಿಗಳ ಮೇಲೆ ಬೀಳಬೇಕು; ರೈತರನ್ನು ಉದ್ಧಾರಮಾಡಬೇಕು; ಅವರ ಕಷ್ಟಪರಂಪರೆಯನ್ನು ನಿವಾರಿಸಬೇಕು.

ಕನ್ನಡಿಗರ ಹೃದಯುವನ್ನು ರೈತರ ಬಾಳಿನ ಶೋಚನೀಯಚಿತ್ರವು ಸೆಳೆಯು ಲೆಂಬುದೇ ಈ ಗ್ರಂಥದ ಮುಖ್ಯಗುರಿ.

ನಮ್ಮ ಹಳ್ಳಿಗಳ ಇಂದಿನ ಸ್ಥಿತಿಯನ್ನು ನಾವು ತಿಳಿಯಬೇಕಾದರೆ, ಅವು ಹಿಂದೆ ಎಷ್ಟು ಉತ್ತಮವಾಗಿದ್ದುವೆಂಬುದನ್ನು ಮನಗಾಣಬೇಕು. ಸಾಮಾಜಿಕರೋಗಗಳ ನಿಜವಾದ ಪರಿಚಯುವು ನಮಗೆ ದೊರೆವುದು ಐತಿಹಾಸಿಕವಿಮರ್ಶೆಯಿಂದಲೇ.

ನಮ್ಮ ಸಂಸ್ಕೃತಿಯು ನಮ್ಮ ಹಳ್ಳಿಗಳಲ್ಲಿಯೂ ನಮ್ಮ ಆಶ್ರಮಗಳಲ್ಲಿಯೂ ಉದ್ಭವವಾಯಿತಷ್ಟೆ. ಈ ಕಾರಣದಿಂದಲೇ ಅನೇಕ ಪುರಾತನ ಸಂಸ್ಕೃತಿಗಳು ನಾಶವಾದರೂ, ನಮ್ಮ ಸಂಸ್ಕೃತಿಯು ಇನ್ನೂ ಜೀವಂತವಾಗಿದೆ. ನಮ್ಮ ದೇಶದಲ್ಲಿ ಚಕ್ರಾಧಿಪತ್ಯಗಳು ಏರಿದುವು, ಉರುಳಿದುವು. ಗ್ರೀಕರು, ಕುಶಾನರು, ಪರ್ಷಿಯನರು, ಮುಹಮ್ಮದೀಯರು ಮೊದಲಾದ ಪರದೇಶದವರು ಪದೇ ಪದೇ ಬಂದು ನಮ್ಮ ನಗರಗಳನ್ನು ದೋಚಿಕೊಂಡು ಹೋದರು ; ನಾಶಮಾಡಿದರು ; ಹೊಸ ನಗರಗಳನ್ನು ಕಟ್ಟಿದರು ; ಹೊಸ ಮತಗಳನ್ನು ಹರಡಿದರು ; ಹೊಸಸಂಸ್ಕೃತಿಗೆ ತಳಪಾಯುಹಾಕಿದರು. ಆದರೇನು ? ನಮ್ಮ ಸಂಸ್ಕೃತಿಯು ಮಾತ್ರ ನಮ್ಮ ಹಳ್ಳಿಗಳಲ್ಲಿ ಬೆಳಗುತ್ತಲೇ ಬಂದಿತು. ಆಗಾಗ್ಗೆ ಬರುತ್ತಿದ್ದ ದರೋಡೆಕಾರನಿಗೂ, ಯಾವಾಗಲೂ ಬರುತ್ತಿದ್ದ ಕಂದಾಯ ವಸೂಲ್ಮಾಡುವವನಿಗೂ ತಾವು ತೆರಬೇಕಾದ ಪೊಗದಿಯನ್ನು ತೆತ್ತರಾಯಿತು ; ಇತರವಿಧದಲ್ಲಿ ನಮ್ಮ ಹಳ್ಳಿಗೂ ಬಾಹ್ಯಪ್ರಪಂಚಕ್ಕೂ ಯಾವ ವಿಧವಾದ ಸಂಪರ್ಕವೂ ಇರುತ್ತಿರಲಿಲ್ಲ.

ಇಂತಹ ಹಳ್ಳಿಗಳಲ್ಲಿ ವಾಸಮಾಡುತ್ತಿದ್ದ ಜನಗಳು ಇತರರ ಸಹಾಯವಿಲ್ಲದೆ ಬದುಕಲು ಎಲ್ಲ ಸಿದ್ಧತೆಗಳನ್ನೂ ಮಾಡಿಕೊಂಡಿದ್ದರು. ಪ್ರತಿ ಹಳ್ಳಿಯೂ ಸ್ವಸಂಪೂರ್ಣತೆ (Self Sufficiency) ಯನ್ನು ಹೊಂದಿದ್ದ ಒಂದು ಪ್ರಜಾಪ್ರಭುತ್ವವಾಗಿದ್ದಿತು. (ಪುರಾತನ ಗ್ರೀಕರ ನಗರಪ್ರಭುತ್ವಗಳು ನೆನಪಿಗೆ ಬರುವುವು.) ಸ್ವಸಂಪೂರ್ಣತೆಯ ಅಂಗವಾಗಿ ಹಳ್ಳಿಯು

ಆರ್ಥಿಕಜೀವನದಲ್ಲಿ ಒಂದು ವಿಧವಾದ ಹಂಚಿಕೆ (Economic Planning) ಇದ್ದಿತು. ರೈತರು ತಮ್ಮ ಮುಖ್ಯವಾದ ಕಸಬಿನೊಡನೆ ವಿರಾಮಕಾಲವನ್ನು ಉಪಯೋಗಿಸಲು ತಕ್ಕ ಉಪವೃತ್ತಿಗಳನ್ನಿಟ್ಟುಕೊಂಡಿದ್ದರು. ಇವರಿಗೆ ಸಹಾಯಕರಾಗಿ ಬಡಗಿ, ಕಮ್ಮಾರ, ಕುಂಬಾರ, ಹಜಾಮ ಮೊದಲಾದ ಕಸಬುದಾರರೂ ಇದ್ದರು. ಇವರ ಪರಸ್ಪರ ಸಂಬಂಧವು ಸಂಪ್ರದಾಯಬದ್ಧವಾಗಿದ್ದಿತು. ಜನಗಳು ಕಷ್ಟಪಟ್ಟು ದುಡಿದರೆ ಅಪಮಾನವೆಂದು ತಿಳಿದಿರಲಿಲ್ಲ. ಊರೊಟ್ಟಿನ ಕೆಲಸಗಳಿಗೆ ಎಲ್ಲರೂ ಕೈಹಚ್ಚುತ್ತಿದ್ದರು. ಕೆರೆ, ಕುಂಟೆ, ತೋಪುಗಳ ರಿಪೇರಿಯು ಎಲ್ಲರಿಗೂ ಸೇರಿದ್ದಿತು. ಪ್ರತಿಯೊಬ್ಬರಿಗೂ ತಮ್ಮ ಹಳ್ಳಿಯ ಸೊಬಗಿನಲ್ಲಿ ಹೆಮ್ಮೆಯಿದ್ದಿತು; ಅಭಿಮಾನವಿದ್ದಿತು. ಪರಸ್ಪರ ಮೈತ್ರಿಯಿದ್ದುದರಿಂದ ಕಳ್ಳತನ, ಸುಳ್ಳು, ಮುಂತಾದುವು ಬಹಳ ಕಡಿಮೆಯಾಗಿದ್ದುವು. ಸರ್ಕಾರದವರ ನಿಬಂಧನೆಗಳಿಗಿಂತಲೂ ಜಾತಿ, ಪಂಚಾಯತಿ ಮೊದಲಾದುವುಗಳ ಸಂಪ್ರದಾಯ ನಿಯಮಗಳು ರೈತರನ್ನು ಹತೋಟಿಯಲ್ಲಿಟ್ಟಿದ್ದುವು.

ನಮ್ಮ ಪುರಾತನ ಗ್ರಾಮಗಳ ಸ್ವರೂಪವನ್ನು ಸ್ವಲ್ಪ ವರ್ಣಿಸಿರುವೆವಷ್ಟೆ. ಇಂತಹ ಸ್ವರೂಪದ ಫಲವಾಗಿ ಪ್ರತಿ ಹಳ್ಳಿಯಲ್ಲಿಯೂ ಒಂದು ವಿಧವಾದ ಸಂತೋಷವಿದ್ದಿತು. ಅಂದರೆ ಎಲ್ಲರೂ ಕುಬೇರಪುತ್ರರಾಗಿದ್ದರೆಂದಲ್ಲ; ಹಳ್ಳಿಯ ಜೀವನವನ್ನು ಕಂಡರೆ ಯಾರೂ ಜುಗುಪ್ಸೆಪಡುತ್ತಿರಲಿಲ್ಲ; ಎಲ್ಲೆಲ್ಲಿಯೂ ಸಂತೋಷವಿರುತ್ತಿದ್ದಿತೇ ವಿನಾ ನಿರುತ್ಸಾಹವಿರಲಿಲ್ಲ; ಧೈರ್ಯಸ್ಥೈರ್ಯಗಳಿಂದ ಭರಿತರಾಗಿ ದೃಢಕಾಯರಾಗಿ ಯಾವುದಕ್ಕೂ ಹೆದರದೆ, ಸುಖಸಂಕಥಾ ವಿನೋದದಿಂದ ಕಾಲಕಳೆಯುತ್ತಿದ್ದರು. ಹಳ್ಳಿಯ ಹಬ್ಬ, ಹಳ್ಳಿಯ ಕುಣಿತ, ಹಳ್ಳಿಯ ಆಡಂಬರ, ಹಳ್ಳಿಯ ಗಾನ, ಹಳ್ಳಿಯ ಆಟಪಾಟಗಳು—ಎಷ್ಟೇ ಹಿಂದಿನಕಾಲದುವಾದರೂ, ಅವು ರೈತರಲ್ಲಿ ಒಂದು ವಿಧವಾದ ಹುರುಪನ್ನುಂಟುಮಾಡುತ್ತಿದ್ದುವು. ಅಂದಿನ ಹಳ್ಳಿಗಳು ತಮ್ಮ ಯೌವನದ ಸಿರಿಯಲ್ಲಿದ್ದುವೆಂದು ನಿರ್ಭಯವಾಗಿ ಹೇಳಬಹುದು. ಚಿಂತೆಯೇ ಮುಪ್ಪು, ಸಂತೋಷವೇ ಯೌವನ.

ಪಾಶ್ಚಾತ್ಯ ಸಂಸ್ಕೃತಿಯ ಸಂಪರ್ಕವು ಕಳೆದ ಒಂದು ಶತಮಾನ ದಿಂದ ನಮ್ಮ ಹಳ್ಳಿಗಳ ಸುಖಜೀವನವನ್ನು ಬಹುಮಟ್ಟಿಗೆ ತೊಲಗಿಸಿವೆ. ಪ್ರಯಾಣಸೌಕರ್ಯವು ಬೆಳೆದಷ್ಟೂ ಆಡಳಿತವು ಕೇಂದ್ರೀಕೃತವಾಗುತ್ತಿದೆ. ಜನಜೀವನದ ಪ್ರತಿಯೊಂದು ಶಾಖೆಯಲ್ಲಿಯೂ ಸರ್ಕಾರದವರು ಪ್ರವೇಶಿಸ ಬೇಕಾಗಿದೆ. ಇಂತಹ ಪ್ರವೇಶದಿಂದ ರೈತರ ಉದ್ಧಾರವಾಗಬೇಕೆಂಬ ಆಸೆಯು ಸರ್ಕಾರದವರಲ್ಲಿ ಪ್ರಬಲವಾಗಿದ್ದರೂ, ಅದರಿಂದ ಇಲ್ಲಿಯವರೆಗೆ ಹೆಚ್ಚು ಉಪಯೋಗವಿಲ್ಲವಾಗಿದೆ. ಇದಕ್ಕೆ ಎರಡು ಕಾರಣಗಳುಂಟು. ಬ್ರಿಟಿಷರು ನಗರಸಂಸ್ಕೃತಿಯ ಲಕ್ಷಣವನ್ನು ಬಲ್ಲವರೇ ವಿನಾ ಗ್ರಾಮ ಸಂಸ್ಕೃತಿಯ ಲಕ್ಷಣವನ್ನು ಅರಿತವರಲ್ಲ. ಮೊದಮೊದಲು ಅವರೊಡನೆ ಸಂಪರ್ಕಬೆಳೆಯಿಸಿದ ಭಾರತೀಯರೂ ಅಂತಹ ನಗರಸಂಸ್ಕೃತಿಗೆ ಮನ ಸೋತು ನಮ್ಮ ಸಂಸ್ಕೃತಿಯಲ್ಲಿ ಜುಗುಪ್ಸೆ, ಉಪೇಕ್ಷೆಗಳನ್ನು ಪ್ರದರ್ಶಿಸು ತ್ತಿದ್ದರು. ಈಚೆಗೆ ಬ್ರಿಟಿಷರೂ ನಮ್ಮ ಹಳ್ಳಿಗಳ ಸ್ಥಿತಿಯನ್ನರಿಯುತ್ತಿ ದ್ದಾರೆ; ಭಾರತೀಯರೂ ನಮ್ಮ ಸಂಸ್ಕೃತಿಯಲ್ಲಿ ಹೆಮ್ಮೆಪಡಬಹುದಾದ ಅಂಶಗಳು ಅನೇಕವಿವೆ ಎಂಬುದನ್ನು ಅರಿಯುತ್ತಿದ್ದಾರೆ. ಆದುದರಿಂದ ಗ್ರಾಮಸಂಸ್ಕೃತಿಗಳ ಪುನರುದ್ಧಾರಕ್ಕೆ ಕೈಹಚ್ಚುತ್ತಿರುವರು. ಆದರೆ ಒಂದು ಶತಮಾನದಿಂದ ಬೆಳೆದುಬಂದಿರುವ ಮಹಾಜಾಡ್ಯವೊಂದು ಇಂತಹ ಉದ್ಧಾರಕ್ಕೆ ಅಡ್ಡಿಯಾಗಿದೆ. ಆ ಜಾಡ್ಯವಾವುದೆಂದರೆ—ನಮ್ಮ ರೈತರು ತಮ್ಮ ಬಾಹುಬಲದಲ್ಲಿ ನಂಬುಗೆಯನ್ನು ತೊರೆದು, ತಮ್ಮ ಕೆಲಸವನ್ನು ತಾವು ಮಾಡಿಕೊಳ್ಳಲಾರದೆ, ಎಲ್ಲವನ್ನೂ ಸರ್ಕಾದವರೇ ಮಾಡಲಿ ಎಂಬ ಹೊಸ ಅಭಿಪ್ರಾಯವನ್ನು ಹೊಂದುತ್ತಿರುವುದು. ಹಳ್ಳಿಗಳಿಗೆ ಹೋಗಿ ನಿಮ್ಮ ಬೀದಿಗಳನ್ನು ಶುಚಿಯಾಗಿಟ್ಟಿರಿ ಎಂದು ಹೇಳಿದರೆ "ನಾವೇಕೆ ಗುಡಿಸಬೇಕು, ಸರ್ಕಾರದವರಿಲ್ಲವೆ?" ಎಂಬುವು ಪ್ರತ್ಯುತ್ತರ ಬರುವುದು. ಹೀಗೆ ರೈತರು ಸರ್ಕಾರದ ಬಾಯ್ದೊಂಬುಲಕ್ಕೆ ಕೈಯಾನುತ್ತಿರುವರು.

ಈ ಮನೋರೋಗದ ಜೊತೆಗೆ ಆರ್ಥಿಕ ಜೀವನದಲ್ಲಿ ಅದ್ಭುತವಾದ ಬದಲಾವಣೆಗಳಾಗುತ್ತಿವೆ. ರೈತರ ಸ್ವಸಂಪೂರ್ಣತೆಯು ಕಾವ್ಯಗಳಲ್ಲಿ ಮಾತ್ರ ನಿಂತು ದಿನಚರಿಯ ವ್ಯವಹಾರದಿಂದ ಮಾಯವಾಗಿದೆ. ಯಂತ್ರಗಳ ಪೈಪೋಟಿಯು ಹಳ್ಳಿಗಳಲ್ಲಿದ್ದ ಕೈಗಾರಿಕೆಗಳನ್ನು ನಿರ್ನಾಮಮಾಡಿದೆ. ತತ್ಫಲವಾಗಿ ರೈತರ ವಿರಾಮಕಾಲವೆಲ್ಲವೂ ವ್ಯರ್ಥವಾಗುತ್ತಿದೆ. ಈ ಮಧ್ಯೆ ಜನಸಂಖ್ಯೆಯು ವಿಶೇಷವಾಗಿ ಬೆಳೆಯುತ್ತ ಬಂದಂತೆಲ್ಲ ರೈತರ ವಿರಾಮ ಕಾಲವೂ ಬೆಳೆಯುತ್ತ ಬಂದಿದೆ. ಏಕಂದರೆ ಪಾಶ್ಚಾತ್ಯದೇಶಗಳಂತೆ ಇಲ್ಲಿ ಕಾರ್ಖಾನೆಗಳು ಹೆಚ್ಚುತ್ತಲಿಲ್ಲವಾದುದರಿಂದ ನಮ್ಮ ದೇಶದಲ್ಲಿ ಬಹುಮಂದಿ ಬೇಸಾಯದಿಂದಲೇ ಜೀವಿಸಬೇಕಾಗಿದೆ. ಒಂದು ಕುಟುಂಬದಲ್ಲಿರುವವರ ಸಂಖ್ಯೆಯು ಹೆಚ್ಚಿದಹಾಗೆಲ್ಲಾ ಕುಟುಂಬದ ಪಾಲಿಗೆ ಬರುವ ಜಮೀನಿನ ತಾಕೂ ಕೃಶವಾಗುತ್ತಿದೆ.

ಕಾರಣಗಳಾವುವಾದರೂ ಇರಲಿ. ಇಂದು ನಮ್ಮ ಹಳ್ಳಿಗಳು ಬಡ ತನದ ತವರುಮನೆಗಳಾಗಿವೆ. ಅಂದರೆ ಹಿಂದಿನ ಹಳ್ಳಿಗಳು ಸಿರಿತನದಿಂದ ತುಂಬಿತುಳುಕುತ್ತಿದ್ದುವೆಂದು ಅರ್ಥವಲ್ಲ; ಸಂತೋಷಭರಿತವಾಗಿದ್ದುವು. ಇಂದಿನ ಹಳ್ಳಿಗಳು ದುಃಖಸಾಗರಗಳಾಗಿವೆ. ಎಲ್ಲೆಲ್ಲಿ ನೋಡಿದರೂ ಬಡ ತನ. ಪ್ರಾಯಃ ನಮ್ಮ ನಾಡಿನಲ್ಲಿರುವಷ್ಟು ಬಡತನವು ಇನ್ನಾವ ನಾಡಿನ ಲ್ಲಿಯೂ ಇರಲಾರದು. ನಮ್ಮ ರೈತರಿಗೆ ಸಾಕಾಗುವಷ್ಟು ಆಹಾರವೂ ದೊರೆವುದಿಲ್ಲ; ಬಹುಮಂದಿ ಅಲ್ಪಾಹಾರದಿಂದಲೇ ಜೀವಿಸಿರಬೇಕಾಗಿದೆ. ಹೆಚ್ಚು ಆಹಾರ ಸಿಕ್ಕುವವರಿಗೂ ಪುಷ್ಟಿಕರವಾದ ಆಹಾರವು ದೊರೆಯುತ್ತಾ ಇಲ್ಲ. ಉಡಲು ಬಟ್ಟೆಯಿಲ್ಲ; ವಾಸಿಸಲು ಶುಚಿಯಾದ ಗಾಳಿಬೆಳಕುಗಳಿಂದ ಕೂಡಿದ ಮನೆಗಳಿಲ್ಲ. ಎಲ್ಲರೂ "ಋಣದಲ್ಲಿ ಹುಟ್ಟಿ ಋಣದಲ್ಲಿ ಬೆಳೆದು ಋಣದಲ್ಲಿಯೇ ಮಡಿಯುತ್ತಿದಾರೆ."

ಅಸಾರವಾದ ಅಹಾರ, ಅನಾರೋಗ್ಯಕರವಾದ ಮನೆ, ಅನಾವಶ್ಯಕ ವಾದ ಸಂಪ್ರದಾಯಗಳು, ನಿರುತ್ಸಾಹ—ಇವುಗಳ ಫಲವಾಗಿ ದೃಢಕಾಯ

ರಾಗಿದ್ದ ನಮ್ಮ ಜನಗಳು ಇಂದು ಇತರ ಎಲ್ಲ ಜನಾಂಗದವರಿಗಿಂತಲೂ ಬಲಹೀನರಾಗುತ್ತಿದ್ದಾರೆ. ಇವರ ದೇಹದ ಬೆಳವಣಿಗೆಯೂ ಕಡಿಮೆ, ಸಾಯುವವರ ಸಂಖ್ಯೆಯು ಇತರ ಎಲ್ಲಾದೇಶಕ್ಕಿಂತಲೂ ಹೆಚ್ಚು; ಆಯುಃ ಪರಿಮಿತಿಯೂ ತೀರಕಡಿಮೆ. ಈ ಕೆಳಗಿನ ಅಂಕಿಗಳನ್ನು ನೋಡಿರಿ.

## ಜನನಕಾಲದಲ್ಲಿ ಊಹಿಸಬಹುದಾದ ಆಯುಃ ಪರಿಮಿತಿ

## (Expectation of life at Birth).

| | ಗಂಡಸರು | | ಹೆಂಗಸರು | |
|---|---|---|---|---|
| ಇಂಡಿಯ | 22.59 | ವರ್ಷಗಳು | 23.3 | ವರ್ಷಗಳು |
| ಆಸ್ಟ್ರೇಲಿಯ | 55.20 | ,, | 58.84 | ,, |
| ಡೆನ್ಮಾರ್ಕ್ | 54.9 | ,, | 57.9 | ,, |
| ಇಂಗ್ಲೆಂಡ್ | 48.53 | ,, | 52.38 | ,, |
| ಜಪಾನ್ | 43.97 | ,, | 44.83 | ,, |

ದೈಹಿಕವಾಗಿಯೂ, ಆರ್ಥಿಕವಾಗಿಯೂ ದಾರಿದ್ರ್ಯದಿಂದಾವೃತರಾದ ನಮ್ಮ ರೈತರು, ಮಾನಸಿಕ ದಾರಿದ್ರ್ಯಕ್ಕೂ ತುತ್ತಾಗುತ್ತಿರುವರು. ಮನೋಹರವಾಗಿದ್ದ ನಮ್ಮ ಸಮಾಜ ಜೀವನವು ಇಂದು ಅಸಹ್ಯವಾಗುತ್ತಿರುವುದು. ಹಳ್ಳಿಯ ಕೇಂದ್ರಗಳಾಗಿದ್ದ ದೇವಸ್ಥಾನಗಳು ಇಂದು ಪಾಳು ದೇಗುಲಗಳಾಗಿರುವುವು. ರೈತರಿಗೆ ದೈವಭಕ್ತಿಯೂ ಕಡಮೆಯಾಗಬೇಕೇಕೆ? ಇದು ನಿರುತ್ಸಾಹದ ಫಲವಲ್ಲವೆ? ಭಕ್ತಿಮಾರ್ಗವು ನಾಶವಾಗಿ ಇಂದು ನಿರುತ್ಸಾಹಮಾರ್ಗವು ತಲೆಯೆತ್ತಿರುವುದು. ಪುರಾಣಶ್ರವಣ, ಹರಿಕಥೆ, ಯಕ್ಷಗಾನ, ಕೀರ್ತನೆಗಳು, ಲಾವಣಿಗಳು—ಇವೇ ಇಂದಿನವರೆಗೆ ನಮ್ಮ ಹಳ್ಳಿಗಳಲ್ಲಿ ಸಂಸ್ಕೃತಿಯನ್ನು ಹರಡುತ್ತಿದ್ದ ಉಪಕರಣಗಳು. ಇಂದು ಇವು ನಾಶವಾಗಿವೆ. ಆದರೆ ಆಧುನಿಕಪ್ರಪಂಚದಲ್ಲಿ ಸಂಸ್ಕೃತಿಯನ್ನು ಹರಡಲಿರುವ, ಸಿನಿಮಾ, ರೇಡಿಯೋ, ಬ್ರಾಡ್‌ಕ್ಯಾಸ್ಟಿಂಗ್, ಗ್ರಾಮಾಫೋನ್ ಮೊದಲಾದ ಹೊಸಉಪಕರಣಗಳು ಪ್ರಚಾರಕ್ಕೆ ಬಂದಿಲ್ಲ.

ಅಂದರೆ ನಮ್ಮ ಹಳ್ಳಿಯವರು ತಮ್ಮಲ್ಲಿದ್ದ ಹಳೆಯ ಹಣತೆಗಳನ್ನು ಬಿಸಾಡಿರುವರು; ವಿದ್ಯುಚ್ಛಕ್ತಿಯ ದೀಪಗಳು ಅವರಿಗೆ ದೊರೆತಿಲ್ಲ. ಈ ಸಂದಿಗ್ಧಕಾಲದಲ್ಲಿ ಅವರು ಕತ್ತಲೆಯ ಕೋಣೆಯಲ್ಲಿ ತಾನೆ ಇರಬೇಕು!

ನಮ್ಮ ಹಳ್ಳಿಗಳ ಇಂದಿನ ದುಃಸ್ಥಿತಿಯನ್ನು ನಾವು ವಿಮರ್ಶಿಸಿರುವೆವಷ್ಟೆ. ಹಳ್ಳಿಗಳಲ್ಲಿ ಜೀವನಮಾಡುವದು ಅಸಾಧ್ಯವಾಗಿದೆ; ಅಸಹ್ಯವಾಗಿದೆ. ನಗರಗಳ ಆರ್ಭಟಗಳಿಂದ ತಪ್ಪಿಸಿಕೊಂಡು ಎಲ್ಲಿಯ ಶಾಂತಸನ್ನಿವೇಶದಲ್ಲಿ ವಾಸಮಾಡುವುದು ಸ್ವರ್ಗಸಮಾನವೆಂದು ಕವಿವರ್ಯರನೇಕರಿಂದ ಉಪಪಾದಿತವಾಗಿದ್ದಿತೋ ಅಂತಹ ಹಳ್ಳಿಗಳು ಇಂದು ಪಾಪದ ತವರೂರು. ನಾಕವಲ್ಲ; ನರಕ. ಆದುದರಿಂದಲೇ ಪಾಶ್ಚಾತ್ಯ ಸಂಸ್ಕೃತಿಯ ಬೆರಗಿಗೆ ಮನಸೋತ ತರುಣರನೇಕರು ನಮ್ಮ ಹಳ್ಳಿಗಳನ್ನು ಬಿಟ್ಟು ನಗರಗಳಿಗೆ ಹೋಗುತ್ತಿದಾರೆ. ವಿದ್ಯಾವಂತರಾದ, ದೃಢಕಾಯರಾದ ಯುವಕರು ನಗರಗಳಿಗೆ ಹೋಗಿ, ಅಶಕ್ತರಾದ ಬಾಲಕರೂ ವೃದ್ಧರೂ ಹಳ್ಳಿಗಳಲ್ಲಿ ನಿಂತರೆ, ಹಳ್ಳಿಗಳ ಉದ್ಧಾರವಾದರೂ ಎಂತು?

ಮೈಸೂರಿನ ಹಳ್ಳಿಗಳಿಂದ ನಗರಗಳಿಗೆ ಪ್ರತಿ ವರ್ಷವೂ ಎಷ್ಟು ಮಂದಿ ಒಲಸೆಹೋಗುತ್ತಿರುವರೆಂಬುದನ್ನು ನಿರ್ಣಯವಾಗಿ ಹೇಳಲಾಗುವುದಿಲ್ಲ. ಪ್ರತಿಯೊಂದು ಹಳ್ಳಿಯಲ್ಲಿಯೂ ಪ್ರತ್ಯೇಕವಾಗಿ ಲೆಕ್ಕಮಾಡಿದ ಹೊರತು ಈ ಸಂಖ್ಯೆಯು ನಮಗೆ ದೊರೆಯುವುದಿಲ್ಲ. ಆದರೆ ಸಾಮಾನ್ಯವಾಗಿ ಎಷ್ಟಿರಬಹುದೆಂಬುದನ್ನು ಊಹಿಸಲು ಕೆಲವು ಸಾಧನಗಳಿವೆ. 1921 ನೆಯ ಇಸವಿಯ ಸೆನ್ಸಸ್ ಲೆಕ್ಕದಲ್ಲಿ ಗ್ರಾಮವಾಸಿಗಳಿಗೂ ನಗರವಾಸಿಗಳಿಗೂ ಇದ್ದ ಪ್ರಮಾಣವನ್ನು 1931 ನೆಯ ಇಸವಿಯ ಇದೇ ಪ್ರಮಾಣದೊಡನೆ ಹೋಲಿಸಿರಿ 1921 ರಲ್ಲಿ ಮೈಸೂರಿನ ಪ್ರಜೆಗಳಲ್ಲಿ 1 ಸಾವಿರಕ್ಕೆ 148 ಜನಗಳಂತೆ ನಗರವಾಸಿಗಳಿದ್ದರು. 1931 ರಲ್ಲಿ ಅದು 160 ಕ್ಕೆ ಏರಿತು. ಕಳೆದ ಹತ್ತು ವರ್ಷಗಳಲ್ಲಿ ಈ ಪ್ರಮಾಣವು ಹೆಚ್ಚಿರುವುದಕ್ಕೆ ಹಳ್ಳಿಗಳಿಂದ ನಗರಗಳಿಗೆ ಕೆಲವರು ಒಲಸೆ

ನುಗ್ಗುತ್ತಿರುವುದಕ್ಕೆ ಪ್ರಧಾನಕಾರಣಗಳನ್ನು ಒಂದು ಸಮಿತಿಯವರು ಈ ಕೆಳಗೆ ಹೇಳುವಂತೆ ವಿವರಿಸಿರುವರು.

(1) ಬಡತನ ಮತ್ತು ಹರ್ಷವನ್ನು ಕೊಡದ ಕೆಲಸ.

(2) ಸೌಂದರ್ಯರಹಿತವಾದ ಮತ್ತು ಮನೋಹರವಲ್ಲದ ಸನ್ನಿವೇಶ—ಮನಸ್ಸಿಗೆ ಹೆಮ್ಮೆಯನ್ನುಂಟುಮಾಡಲಾರದ ಸನ್ನಿವೇಶ.

(3) ಅನಾರೋಗ್ಯಕರವಾದ ಜೀವನ, ತತ್ಫಲವಾದ ರೋಗರುಜಿನಗಳು.

(4) ವಿದ್ಯಾಭ್ಯಾಸಕ್ಕಿರುವ ಅನನುಕೂಲ.

(5) ವಿನೋದಕ್ಕೆ ಅವಕಾಶವಿಲ್ಲದಿರುವಿಕೆ.

ಮುಂದುವರಿದಿರುವ ಸಂಯುಕ್ತರಾಷ್ಟ್ರದ ಹಳ್ಳಿಗಳಲ್ಲಿಯೇ ಜೀವನವು ಅಸಹ್ಯವಾಗಿದೆಯೆಂದಮೇಲೆ, ನಮ್ಮ ಹಳ್ಳಿಗಳ ಪಾಡೇನು? ಇವು ಅವುಗಳಿಗಿಂತ ಸಾವಿರಪಾಲು ಹೆಚ್ಚು ಹೊಲಸಾಗಿವೆ. ನಮ್ಮ ಹಳ್ಳಿಗಳ ದುಃಸ್ಥಿತಿಯನ್ನು ಚೆನ್ನಾಗಿ ಅರಿತವರಾದ ಶ್ರೀಮಾನ್ ಎ. ಎಸ್. ಸುಬ್ಬರಾಯರವರು ನಮ್ಮ ಗ್ರಾಮಜೀವನದ ಸಮಸ್ಯೆಯನ್ನು ತಮ್ಮ ಅಮೋಘವಾದ ಒಂದು ಭಾಷಣದಲ್ಲಿ ಕೆಳಗೆ ಕಂಡಂತೆ ವಿವರಿಸಿರುವರು.[6]

"ನಾವು ಗ್ರಾಮೋದ್ಧಾರಕಾರ್ಯಕ್ಕೆ ಕೈಹಚ್ಚುವ ಮೊದಲು, ಗ್ರಾಮವಾಸಿಗಳಿಗಿರುವ ನಿಜವಾದ ತೊಂದರೆಯನ್ನು ಅರಿತುಕೊಳ್ಳಬೇಕು; ಗ್ರಾಮವಾಸಿಗಳ ಸರಳಜೀವನವು ಸುಖಮಯವಾದುದೆಂದು ಆತ್ಮವಂಚನೆಯನ್ನು ಮಾಡಿಕೊಳ್ಳಬಾರದು. ಗ್ರಾಮಸ್ಥರ ಕಷ್ಟವನ್ನು ಹೀಗೆ ವಿವರಿಸಬಹುದು.

(1) ಹಳ್ಳಿಗಳಲ್ಲಿ ಗಾಳಿ ಮತ್ತು ಬೆಳಕಿಗೆ ಅಭಾವವಿಲ್ಲದಿದ್ದರೂ ಕುಡಿಯಲು ಒಳ್ಳೆಯ ನೀರಿಲ್ಲ. ಸಾಂಕ್ರಾಮಿಕರೋಗಗಳೂ ಅನಾರೋಗ್ಯ

ಕರವಾದ ಸನ್ನಿವೇಶಗಳೂ ರೈತರ ಜೀವನವನ್ನು ಸದಾ ಅಪಾಯಕ್ಕೆ ಒಳಗುಮಾಡಿವೆ.

(2) ರೈತರ ಬಡತನವೂ, ರೈತರ ಸಾಲವೂ ಬಹು ತೊಡಕಾದ ಸಮಸ್ಯೆಗಳಾಗಿವೆ.

(3) ರೈತರ ನಿರುತ್ಸಾಹ—ಇದರ ಫಲವಾಗಿ ರೈತರಿಗೆ ತಮ್ಮ ಹಕ್ಕುಬಾಧ್ಯತೆಗಳಾಗಲೀ ಜವಾಬ್ದಾರಿಯಾಗಲೀ ತಿಳಿಯದು.

(4) ಹಳ್ಳಿಗಳಲ್ಲಿ ವಿಹಾರಕ್ಕೆ ಅವಕಾಶವೇ ಇಲ್ಲ.

(5) ಮೇಲ್ಕಂಡ ತೊಂದರೆಗಳಿಗಿಂತಲೂ ಪ್ರಬಲವಾದ ತೊಂದರೆ ಯೆಂದರೆ ರೈತರ ಅಜ್ಞಾನ."

ನಾವು ಮೊದಲೇ ಹೇಳಿರುವಂತೆ, ನಮ್ಮ ಸಂಸ್ಕೃತಿಯು ಉಳಿಯ ಬೇಕಾದರೆ, ನಾವೂ ಇತರ ಜನಾಂಗಗಳ ನಡುವೆ ತಲೆಯೆತ್ತಿ ಬಾಳ ಬೇಕಾದರೆ, ನಮ್ಮ ಹಳ್ಳಿಗಳ ಉದ್ಧಾರವಾಗಬೇಕು. ರೈತರ ಆರ್ಥಿಕ ಜೀವನವನ್ನು ಉತ್ತಮವಾದ ಅಂತಸ್ತಿಗೆ ಎಳೆದೊಯ್ಯಬೇಕು. ಆಹಾರ, ಉಡುಪು, ಮನೆ—ಇವುಗಳ ವಿಷಯದಲ್ಲಿ ಹೆಚ್ಚು ಬದಲಾವಣೆಯಾಗಬೇಕು. ಗ್ರಾಮಾರೋಗ್ಯವಿಷಯಕ್ಕೆ ತಕ್ಕ ಗಮನವನ್ನು ಕೊಟ್ಟು ನಿವಾರಣೀಯ ವಾದ ಖಾಯಿಲೆಗಳಿಗೆ ಜನರು ತುತ್ತಾಗದಂತೆ ಮಾಡಬೇಕಲ್ಲದೆ, ದೇಹ ದಾರ್ಢ್ಯಕ್ಕೂ ದೇಹಸೌಂದರ್ಯಕ್ಕೂ ನಮ್ಮ ಜನಗಳು ಹೆಚ್ಚು ಗಮನ ವನ್ನು ಕೊಡುವಂತೆ ಪ್ರೋತ್ಸಾಹಿಸಬೇಕು. ನಮ್ಮ ಪುರಾತನ ಆರ್ಯರೂ ಪಾಶ್ಚಾತ್ಯರಲ್ಲಿ ಗ್ರೀಕರೂ ಪರಮಾರ್ಥದೃಷ್ಟಿಯನ್ನು ಮುಂದವಾಗಿ ಮಾಡದೆ, ಐಹಿಕಸುಖಸಂತೋಷಗಳಿಗೂ ತಕ್ಕ ಮಾನ್ಯತೆಯನ್ನು ಕೊಡು ತ್ತಿದ್ದುದನ್ನು ಮರೆಯಬಾರದು. ಅಂತು, ಸಾವಿರಾರುವರ್ಷಗಳಿಂದ ಸಂಪ್ರ ದಾಯವೆಂಬ ಕೊರಕಲಿಗೆ ಬಿದ್ದು ನರಳುತ್ತಿರುವ ನಮ್ಮ ಗ್ರಾಮದ ಸಮಾಜ ಜೀವನವನ್ನು ಉತ್ತಮಗೊಳಿಸುವುದು ಅತಿಮುಖ್ಯವಾಗಿದೆ. ವಿಹಾರಕ್ಕೆ

ಅವಕಾಶವಿಲ್ಲದೆ ಯಾವಾಗಲೂ ಒಂದೇವಿಧವಾಗಿ ದುಡಿಯುತ್ತ, ಸಂಕುಚಿತ ಭಾವನೆಯನ್ನೇ ವೃದ್ಧಿಮಾಡಿಕೊಂಡು ನರಳುತ್ತಿರುವ ರೈತರ ಜೀವನವನ್ನು ಸಂತೋಷಭರಿತವಾಗಿಯೂ ರಸಭರಿತವಾಗಿಯೂ ಮಾಡುವುದು ನಮ್ಮ ಪ್ರಥಮಕರ್ತವ್ಯ. ಅಮೆರಿಕದ ನ್ಯಾಷನಲ್ ಚೈಲ್ಡ್ ಲೇಬರ್ ಕಮಿಟಿಯವರು ಹೇಳುವಂತೆ "Here is one of our greatest problems: how to increase the fullness of social life in rural communities, so as to make country life and living, everywhere more attractive."[7]



# ೧. ರೈತರ ಬಡತನ

ಪೀಠಿಕಾಪ್ರಕರಣದಲ್ಲಿ ಪ್ರಸ್ತಾಪಿಸಿರುವಂತೆ ನಮ್ಮ ಗ್ರಾಮಜೀವನದ ಕೇಂದ್ರಸಮಸ್ಯೆಯು ರೈತರ ಬಡತನ. ನಮ್ಮ ಸಮಾಜದ ಮುಂದಿರುವ ಇತರ ಸಮಸ್ಯೆಗಳ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿದ್ದರೂ ನಾವು ಬಡವರೆಂಬುದನ್ನು ಯಾರೂ ನಿಷೇಧಿಸಲಾರರು; ನಿಷೇಧಿಸಿಯೂ ಇಲ್ಲ. ("The extreme poverty of India is undeniable and undenied–' Vera Anste in Modern India, p. 381[1]) ಅದು ಕೈಯೊಳಗಿನ ಹುಣ್ಣು; ಅದೊಂದು ಭೀಕರಸತ್ಯ. ಬಹುಮಂದಿ ಸುಖವೆಂಬುದನ್ನೇ ಅರಿಯದೆ ಬಡತನದ ಪಂಕದಲ್ಲಿ ಬಿದ್ದು ನರಳುತ್ತಿರುವರು. ಅದರಲ್ಲೂ ಬೇಸಾಯವನ್ನೇ ನಂಬಿರುವ ನಮ್ಮ ರೈತರು ದರಿದ್ರನಾರಾಯಣನ ಪ್ರಿಯಭಕ್ತರೆಂಬುದನ್ನು ಹೇಳಕೆಲಸವಿಲ್ಲ. ಅವರು ಗೆಯ್ಯುವುದು "ಚೋಟುದ್ದ ಹೊಟ್ಟೆಗಾಗಿ, ಗೇಣುದ್ದ ಬಟ್ಟೆಗಾಗಿ." ಅವರ ಬದುಕು ಬದುಕಲ್ಲ; ಅವರು ಬರಿಯ ಜೀವಚ್ಛವಗಳು.

ರೈತರ ಬಡತನದ ಈ ಸಾಮಾನ್ಯಚಿತ್ರವೇ ಸಾಕು, ನಮ್ಮ ಹೃದಯವನ್ನು ಚುಚ್ಚುವುದಕ್ಕೆ. ಆ ಚಿತ್ರದ ಶಾಖೋಪಶಾಖೆಗಳನ್ನು ವಿವರವಾಗಿ ಪರೀಕ್ಷಿಸ ತೊಡಗಿದರೆ ನಮಗೆ ಎದೆ ನಡಗುವುದರಲ್ಲಿ ಸಂದೇಹವೇ ಇಲ್ಲ. ಬಡತನದ ನಿಜಸ್ವರೂಪವನ್ನರಿಯಬೇಕಾದರೆ ಅಂತಹ ಪರೀಕ್ಷೆಯು ಆವಶ್ಯಕ. ರೈತರ ಬಡತನದ ಆಳವನ್ನು ಅಳೆಯಬೇಕು; ಇದು ಸಾಧ್ಯವೇ?

ಅರ್ಥಶಾಸ್ತ್ರಜ್ಞರು ಬಡತನವನ್ನು ಎರಡುವಿಧವಾಗಿ ವರ್ಣಿಸುವರು. ಒಂದು ಕೇವಲ ದಾರಿದ್ರ್ಯ (absolute poverty); ಇನ್ನೊಂದು ಇತರರೊಡನೆ ಹೋಲಿಸಿದಾಗಿನ ಬಡತನ. ತಿನ್ನಲೂ, ಹೊದಿಯಲೂ ಸಾಕಾದಷ್ಟು ಇಲ್ಲದವನ ಬಡತನವನ್ನು ಕೇವಲ ಬಡತನವೆನ್ನಬಹುದು.

ವರ್ಷಕ್ಕೆ 100 ರೂ. ಸಂಪಾದನೆಮಾಡುವವನನ್ನು ತಿಂಗಳಿಗೆ 100 ರೂ. ಸಂಪಾದನೆಮಾಡುವವನೊಡನೆ ಹೋಲಿಸಿ ಮೊದಲನೆಯವನನ್ನು ಬಡವನೆಂದರೆ ಅದನ್ನು "ತುಲಿತದಾರಿದ್ರ್ಯ" (relative poverty) ಎಂದು ಕರೆಯಬಹುದು.

ಸಾಮಾನ್ಯವಾಗಿ ನಮ್ಮ ದೇಶದ ಜನಗಳ ವಾರ್ಷಿಕಾದಾಯವನ್ನು ಪಾಶ್ಚಾತ್ಯದೇಶದ ಜನಗಳ ವಾರ್ಷಿಕಾದಾಯದೊಡನೆ ಹೋಲಿಸುವುದು ವಾಡಿಕೆ. ಪಾಶ್ಚಾತ್ಯರು ಆರ್ಥಿಕಜೀವನದ ಶಿಖರದಲ್ಲಿರುವರು; ನಾವು ಬಡತನದ ಕೂಪದಲ್ಲಿ ಬಿದ್ದು ಹೋಗಿರುವೆವು. ಆದುದರಿಂದ ನಮ್ಮ ಸ್ಥಿತಿಯನ್ನು ಪಾಶ್ಚಾತ್ಯರೊಡನೆ ಹೋಲಿಸುವುದು ಸಮಂಜಸವೂ ಅಲ್ಲ, ಉಪಯುಕ್ತವೂ ಅಲ್ಲ, ಎಂಬುದಾಗಿ ವೆರಾ ಆನ್ಸ್ಟ (Vera Anste) ಮೊದಲಾದವರು ಅಭಿಪ್ರಾಯಪಡುವರು.[2]

ಇಂತಹ ಹೋಲಿಕೆಯಿಂದ ಒಂದು ಉಪಯೋಗವುಂಟು. ನಮ್ಮ ದೇಶದ ಬಡತನಕ್ಕೂ ಇತರ ರಾಷ್ಟ್ರಗಳ ಸಿರಿಗೂ ಇರುವ ಅಂತರವು ನಾವು ಎಷ್ಟರಮಟ್ಟಿಗೆ ಕೆಲಸಮಾಡಬೇಕೆಂಬ ಎಚ್ಚರಿಕೆಯನ್ನು ನಮಗೆ ಕೊಡುವುದು. ಪಾಶ್ಚಾತ್ಯರ ಉನ್ನತಿಯು ನಮಗೆ ಮಾರ್ಗದರ್ಶಿಯಾಗುವುದು; ನಮ್ಮ ಆರ್ಥಿಕಪ್ರಯತ್ನದ ಧ್ಯೇಯವು ನಿರ್ದಿಷ್ಟವಾಗುವುದು. ಇದಕ್ಕಾಗಿಯೇ ಇಂತಹ ಹೋಲಿಕೆಗಳಲ್ಲಿ ಕೈಹಾಕುವುದು; ಬರಿಯ ಈರ್ಷ್ಯೆಯಿಂದಲ್ಲ; ಬ್ರಿಟಿಷರ ಆಳ್ವಿಕೆಯನ್ನು ಅಲ್ಲಗಳೆಯುವುದಕ್ಕೂ ಅಲ್ಲ.

ನಮ್ಮವರ ವಾರ್ಷಿಕಾದಾಯವೆಷ್ಟು? ಇದು ಸುಲಭವಾದ ಪ್ರಶ್ನೆಯಲ್ಲ. ರೈತರು ಲೆಕ್ಕಪತ್ರಗಳನ್ನಿಟ್ಟಿಲ್ಲ; ಸರ್ಕಾರದವರೂ ಇತರ ರಾಷ್ಟ್ರಗಳಂತೆ ಆದಾಯದ ಗಣನೆಯನ್ನು ರಚಿಸುತ್ತಾ ಇಲ್ಲ. ಆದರೂ ಕೆಲವು ಮಹನೀಯರು ನಮ್ಮ ಜನಗಳ ಆದಾಯವನ್ನು ಊಹಿಸಲು ಯತ್ನಿಸಿರುವರು; ಕೆಲವು ಆಧಾರಗಳನ್ನೂ ಇಟ್ಟುಕೊಂಡಿರುವರು. ಅಂತಹ ಅಂದಾಜಿನ ಪಟ್ಟಿಯೊಂದನ್ನು ಕೆಳಗೆ ಕೊಟ್ಟಿದೆ.

## ಇಂಡಿಯಾದೇಶದ ವಾರ್ಷಿಕಾದಾಯ ತಲೆಯೊಂದಕ್ಕೆ

| ಅಂದಾಜುಮಾಡಿದವರು | | | ಇಸವಿ | ಆದಾಯ | | |
|---|---|---|---|---|---|---|
| ದಾದಾಬಾಯಿನವರೋಜಿ | .... | .... | 1870 | 20 | 0 | 0 |
| ಬೇರಿಂಗ್ ಮತ್ತು ಬಾರ್ಬರ್ | .... | .... | 1882 | 27 | 0 | 0 |
| ಡಿಗ್ಬಿ | .... | .... | 1898-99 | 18 | 9 | 0 |
| ಕರ್ಸನ್ | .... | .... | 1900 | 30 | 0 | 0 |
| ವಾಡಿಯ ಮತ್ತು ಜೋಷಿ | .... | .... | 1913-14 | 44 | 5 | 6 |
| ಷಾ ಮತ್ತು ಕಾಂ ಭಟ್ಟ | .... | .... | 1921-22 | 67 | 0 | 6 |
| ಷಿರಾಸ್ | .... | .... | 1922 | 116 | 0 | 0 |

ಸ್ಲೇಟರ್, ಜ್ಯಾಕ್, ಲ್ಯೂಕಾಸ್, ಮ್ಯಾನ್, ಕೇಶವಯ್ಯಂಗಾರ್, ಥಾಮಸ್ ಮೊದಲಾದ ಮಹನೀಯರು ಇತ್ತೀಚಿಗೆ ಅನೇಕ ಹಳ್ಳಿಗಳ ಆರ್ಥಿಕ ಗಣನೆಯನ್ನು ಹವಣಿಸಿರುವರು. ಅಂತಹ ಲೆಕ್ಕಗಳನ್ನು ಶೋಧಿಸಿದಲ್ಲಿ ನಮ್ಮ ರೈತರ ವಾರ್ಷಿಕಾದಾಯವು ಎಷ್ಟು ಕಡಿಮೆ ಎಂಬುದು ಇನ್ನೂ ಸ್ಪಷ್ಟವಾಗುವುದು.

ಮದರಾಸು ವಿಶ್ವವಿದ್ಯಾನಿಲಯದ ಅರ್ಥಶಾಸ್ತ್ರದ ಅಧ್ಯಾಪಕರಾದ ಪ್ರೊಫೆಸರ್ ಥಾಮಸ್‌ರವರ ನೇತೃತ್ವದಲ್ಲಿ ತಿರುವೆಲ್ಲೂರ್ ತಾಲ್ಲೂಕಿನ 114 ಹಳ್ಳಿಗಳು ಪರೀಕ್ಷಿಸಲ್ಪಟ್ಟುವು. ಅದರ ಫಲಿತಾಂಶವಾದ ಗಣನೆಯನ್ನು ನೋಡಿರಿ.[3]

ಕುಟುಂಬವೊಂದಕ್ಕೆ ವಾರ್ಷಿಕಾದಾಯ—

| ರೂಪಾಯಿಂದ ರೂಪಾಯಿವರೆಗೆ | | ಶೇಕಡ ಕುಟುಂಬ |
|---|---|---|
| 0— 25 | .... | 7·6 |
| 25— 50 | .... | 14·6 |
| 50— 100 | .... | 31·2 |
| 100— 200 | .... | 25·2 |
| 200— 500 | .... | 15·2 |
| 500—1000 | .... | 4·6 |
| 1000—2000 | .... | 1·4 |
| 2000— ಮೇಲೆ | | ·2 |

ಈ ಗಣನೆಗಳನ್ನು ವಿಮರ್ಶಿಸುವಾಗ ಒಂದು ವಿಷಯವನ್ನು ನೆನಪಿನಲ್ಲಿಡುವುದು ಆವಶ್ಯಕ. ಸರಾಸರಿ ವಾರ್ಷಿಕಾದಾಯವೆಂದರೆ, ಬಡ ಭಿಕ್ಷುಕನಿಂದ ಹಿಡಿದು ವೈಸ್‌ರಾಯಿಯುವರೆಗೆ ಪ್ರತಿಯೊಬ್ಬನ ಆದಾಯವನ್ನೂ ಒಟ್ಟುಗೂಡಿಸಿ ಒಟ್ಟು ಜನಗಳಿಗೆ ಸಮವಾಗಿ ಹಂಚಿದರೆ ಬರುವ ಆದಾಯ. ಸಮವಾಗಿ ಹಂಚುವರಾರು ? ದೇಶದ ಒಟ್ಟು ಆದಾಯದಲ್ಲಿ ಬಹುಭಾಗವು ಕೇವಲ ಅಲ್ಪಸಂಖ್ಯೆಯ ಐಶ್ವರ್ಯವಂತರ ಪಾಲಿನದು. ಬಡ ಬೋರೇಗೌಡನ ಪಾಲು ತೀರ ಕೊಂಚವೆಂಬುದನ್ನು ಮರೆಯಬೇಡಿ. ಸರಾಸರಿ ಆಳದಮೇಲೆ ಭರವಸೆಯನ್ನಿಟ್ಟು ಹೊಳೆಯನ್ನು ದಾಟಲು ಹೊರಟ ಗಣಿತಶಾಸ್ತ್ರಜ್ಞನ ಪಾಡನ್ನು ಬಲ್ಲಿರಷ್ಟೆ !

ಇತರ ದೇಶಗಳಲ್ಲಿ ಜನರ ವಾರ್ಷಿಕಾದಾಯವು ನಮ್ಮ ಆದಾಯಕ್ಕಿಂತ ಎಷ್ಟು ಹೆಚ್ಚೆಂಬುದನ್ನು ಕೆಳಗಿನ ಅಂಕಿಗಳು ವಿಶದಪಡಿಸುವುವು.[4]

| ದೇಶದ ಹೆಸರು | | | ವಾರ್ಷಿಕ ವರಮಾನ (ತಲೆಯೊಂದಕ್ಕೆ) | |
|---|---|---|---|---|
| ಸಂಯುಕ್ತರಾಷ್ಟ್ರ | .... | .... | 2053 ರೂ. | 1928 |
| ಬ್ರಿಟನ್ | .... | . .. | 1092 ರೂ. | 1931 |
| ಫ್ರಾನ್ಸ್ | .... | .... | 636 ರೂ. | 1929 |
| ಕೆನಡ | .... | .... | 1269 ರೂ. | 1930 |
| ಜಪಾನ್ | .... | .... | 271 ರೂ. | 1928 |

(ಸರ್ ಎಂ. ವಿಶ್ವೇಶ್ವರಯ್ಯನವರು ಮೈಸೂರಿನವರ ವಾರ್ಷಿಕಾದಾಯವು 60 ರೂಪಾಯಿಗಿಂತ ಕಡಿಮೆ ಎಂಬುದಾಗಿ ಹೇಳುತ್ತಾರೆ.[5])

## ಜೀವನದ ಅಂತಸ್ತು.

ನಮ್ಮ ಜೀವನದ ಅಂತಸ್ತನ್ನು ಇತರ ಜನಾಂಗದವರ ಜೀವನದ ಅಂತಸ್ತಿನೊಡನೆ ಹೋಲಿಸಿ ನೋಡುವುದು ಬಡತನವನ್ನು ಅಳೆಯುವ ಇನ್ನೊಂದು ಮಾರ್ಗ. ಇದರಲ್ಲಿಯೂ ಕೆಲವು ತೊಂದರೆಗಳಿವೆ. ಜನ

ಜೀವನದ ಅಂತಸ್ತು ದೇಶ, ಕಾಲ, ವಾಯುಗುಣ, ಸಾಮಾಜಿಕಪದ್ಧತಿ— ಇವುಗಳನ್ನನುಸರಿಸಿ ವ್ಯತ್ಯಸ್ತವಾಗುವುದು ಸಹಜ. ಅಲ್ಲಿಯ ಹವೆಗನು ಗುಣವಾಗಿ ಇಂಗ್ಲೆಂಡಿನ ಜನರಿಗೆ ನಮಗಿಂತ ಶಾಖವಾದ ಉಡುಪು, ಆಹಾರ, ವಾಸಸ್ಥಳಗಳು ಬೇಕು. ನಮ್ಮ ದೇಶದಲ್ಲಿ ಚಳಿಗಾಲದಲ್ಲಿಯೂ ಕೂಡ ಬಡವರನೇಕರು ಹೊದೆಯಲು ಬಟ್ಟೆಯಿಲ್ಲದೆ, ಮಲಗಲು ಶಾಖ ವಾದ ಸ್ಥಳಗಳಿಲ್ಲದೆ ವಾಸಿಸಬಲ್ಲರು. ಇಂಗ್ಲೆಂಡಿನಲ್ಲಿ ಇಂತಹ ಸಂದರ್ಭವು ಒದಗಿದಲ್ಲಿ ಆ ಜನಗಳು ಬದುಕಲಾರರು. ನಮ್ಮ ಜಾತಿಯ ಮತ್ತು ಸಮಾ ಜದ ಪದ್ಧತಿಗಳು, ನಮ್ಮ ಊಟಉಪಚಾರವನ್ನೂ ಮನೆಮಠಗಳ ಸ್ಥಿತಿ ಯನ್ನೂ ಬಹುಮಟ್ಟಿಗೆ ನಿರ್ಣಯಿಸುವುವು. ಇಹಲೋಕವು ನಶ್ವರ; ಐಹಿಕಸುಖಗಳು ಕ್ಷಣಿಕ; ನಮ್ಮ ಇಹಲೋಕಯಾತ್ರೆಯು ಪರಲೋಕಕ್ಕೆ ಹಾದಿ ಎಂಬ ಮನವರಿಕೆಯನ್ನು ಹೊಂದಿರುವ ಭಾರತೀಯರಿಗೂ, ಐಹಿಕ ಸುಖಸಂಪತ್ತಿನ ಲೋಲುಪ್ತಿಯಲ್ಲಿ ಮುಳುಗಿರುವ ಪಾಶ್ಚಾತ್ಯರಿಗೂ ಹೋಲಿ ಕೆಯೆಂಥದು? ಆದರೂ ಇಂತಹ ಹೋಲಿಕೆಯಿಂದ ನಮಗೆ ಸ್ವಲ್ಪ ಪ್ರಯೋಜನವುಂಟು. ನಮ್ಮ ದೇಶದ ಆರ್ಥಿಕಸ್ಥಿತಿಯನ್ನು ಉತ್ತಮಗೊಳಿ ಸಲು ಆ ಹೋಲಿಕೆಯು ಮಾರ್ಗದರ್ಶಿಯಾಗುವುದು. ಆದುದರಿಂದ ನಮ್ಮ ಜನತೆಯ ಜೀವನದ ಅಂತಸ್ತನ್ನು ನಾವು ಸ್ವಲ್ಪಮಟ್ಟಿಗೆ ಪರೀಕ್ಷಿಸೋಣ.

ವಾರ್ಷಿಕಾದಾಯದ ವಿಷಯದಲ್ಲಿ ಹೇಗೋ ಹಾಗೆಯೇ ಜೀವನದ ಅಂತಸ್ತಿನ ವಿಷಯದಲ್ಲಿಯೂ ನಮ್ಮದೇಶದಲ್ಲಿ ಸರಿಯಾದ ಲೆಕ್ಕಪತ್ರಗಳಾ ಗಿಲ್ಲ; ಅದರಲ್ಲಿಯೂ ರೈತರ ಜೀವನದ ಚಿತ್ರವನ್ನು ಶಾಸ್ತ್ರೀಯವಾಗಿ ಶೋಧಿಸಿರುವವರು ಅತಿವಿರಳ. ಆಗಿರುವ ಕೆಲವು ಶೋಧನೆಗಳ ಫಲಿತಾಂಶ ವನ್ನು ನಾವು ಸ್ವಲ್ಪಮಟ್ಟಿಗೆ ಗಮನಿಸೋಣ.

ಪಿ. ಜೆ. ಥಾಮಸ್‌ರವರು ಮದರಾಸಾಧಿಪತ್ಯದ ಕೆಲವು ಹಳ್ಳಿಗಳ ವಿಷಯವಾಗಿ ಬರೆದಿರುವರಷ್ಟೆ. ಅವರು ಸುಮಾರು ಇನ್ನೂರೈವತ್ತು ರೈತರ ಕುಟುಂಬಗಳ ಖರ್ಚಿನ ಪಟ್ಟಿಯನ್ನು ಪರೀಕ್ಷಿಸಿರುವರು. ಅದರ ಫಲಿತಾಂಶವಿದು.

(1) **ಆಹಾರ**—ಪ್ರತಿಯೊಂದು ಕುಟುಂಬದ ಖರ್ಚಿನಲ್ಲಿ ಶೇಕಡ 75 ರಷ್ಟು ಆಹಾರಕ್ಕಾಗಿ. ಸ್ವಲ್ಪ ಜನರು ಅಕ್ಕಿಯನ್ನೂ ಬಹುಮಂದಿ ರಾಗಿಯನ್ನೂ ಮುಖ್ಯಾಹಾರವಸ್ತುವಾಗಿ ಉಪಯೋಗಿಸುತ್ತಾರೆ. ಎಲ್ಲರೂ ಮಾಂಸಾಹಾರಿಗಳಾದರೂ ಸಾಮಾನ್ಯವಾಗಿ ನೂರರಲ್ಲಿ ಒಬ್ಬನು ಮಾತ್ರ ಮೀನು ಅಥವಾ ಮಾಂಸವನ್ನು ಉಪಯೋಗಿಸುತ್ತಾನೆ. ಪ್ರಾಯಃ ಉಳಿದವರಿಗೆ ಹಬ್ಬಗಳಲ್ಲಿ ಮಾತ್ರವೇ ಮಾಂಸವು ದೊರೆಯಬಹುದು. (ದೇಹದ ಆರೋಗ್ಯಕ್ಕೂ ಬೆಳವಳಿಗೆಗೂ ಬೇಕಾಗುವ ಹಾಲು, ತುಪ್ಪ, ತರಕಾರಿ ಮೊದಲಾದ ಪದಾರ್ಥಗಳು ಈ ಹಳ್ಳಿಗಳ ಆಹಾರದ ಪಟ್ಟಿಯಲ್ಲಿ ಸೇರುವುದೇ ಇಲ್ಲ. ನಮ್ಮ ಜನಗಳಿಗೆ ನಿಜವಾಗಿಯೂ ಅಗತ್ಯವಾದ ಆಹಾರಕ್ಕೂ ಅವರು ತೆಗೆದುಕೊಳ್ಳುವ ಆಹಾರಕ್ಕೂ ಇರುವ ಅಂತರವನ್ನು ಬೇರೆ ಕಡೆಯಲ್ಲಿ ವಿವರಿಸಲಾಗಿದೆ.[7])

(2) **ಬೆಂಕಿ ಮತ್ತು ದೀಪ**—ಪ್ರಾಯಃ 0–5 ವರೆಗೆ.

(3) **ಉಡುಪು**—ಶೇಕಡ 10 ರಿಂದ 20 ರ ವರೆಗೆ.

(4) **ವಾಸಸ್ಥಳ**—ಹುಲ್ಲು ಹೊದಿಸಿರುವ, ಮಣ್ಣುಗೋಡೆಯ ಕಿರುಮನೆಗಳು ; ಶೇಕಡ 2 ಮನೆಗಳಿಗೆ ಮಾತ್ರ ಹೆಂಚನ್ನು ಹೊದಿಸಿರುವರು ; ಮಾಳಿಗೆಯ ಮನೆಗಳು ವಿರಳ; ದನಗಳ ಕೊಟ್ಟಿಗೆಯು ಪ್ರತ್ಯೇಕವಾಗಿಲ್ಲ.

ಶ್ರೀಮಾನ್ ಕೇಶವಯ್ಯಂಗಾರ್ಯರು ಮೈಸೂರು ಮಲೆನಾಡಿನ 9 ಹಳ್ಳಿಗಳ ಜನಜೀವನವನ್ನು ವಿಮರ್ಶಿಸಿ ಹೇಳುವ ಅಂಕಿಗಳು ಇನ್ನೂ ಸ್ಪಷ್ಟವಾಗಿವೆ. ಅಲ್ಲಿಯ ಒಂದು ಗುಂಪಿನ ಹಳ್ಳಿಗಳಲ್ಲಿ ತಲೆಯೊಂದಕ್ಕೆ ರೂ. 68–11–8 ಇನ್ನೊಂದು ಗುಂಪಿನ ಹಳ್ಳಿಗಳಲ್ಲಿ ರೂ. 80–14–7 ಖರ್ಚೆಂಬುದಾಗಿ ಹೇಳುತ್ತಾರೆ.[8]

ಇಂತಹ ಜನಗಳ ಜೀವನದೊಡನೆ ನಮ್ಮ ದೇಶದಲ್ಲಿ ಕಠಿಣ ಸಜವನ್ನು ಅನುಭವಿಸುತ್ತಿರುವ ಖೈದಿಗಳ ಜೀವನವನ್ನು ಹೋಲಿಸಿ ನೋಡಿದರೆ ನಮಗೆ ವಿಸ್ಮಯವಾಗದಿರದು. ಖೈದಿಗಳಿಗೆ ಕೊಡುವ ಆಹಾರ

ಮತ್ತು ಉಡುಪು, ಅವರು ಜೀವಂತರಾಗಿರುವುದಕ್ಕೆ ಎಷ್ಟು ಬೇಕೋ ಅಷ್ಟಕ್ಕಿಂತ ಸ್ವಲ್ಪವೂ ಹೆಚ್ಚಾಗಿಲ್ಲವೆನ್ನಬಹುದು. 1924 ರಲ್ಲಿ ಬೆಂಗಳೂರು ಸೆಂಟ್ರಲ್‌ಜೈಲಿನಲ್ಲಿ ಖೈದಿಯೊಬ್ಬನಿಗೆ ಆಹಾರ ಮತ್ತು ಉಡುಪಿಗಾಗಿ ರೂ. 131–4–4 ಖರ್ಚಾಗಿದೆ. ಎಂದರೆ ಹಳ್ಳಿಯ ರೈತರಿಗಿಂತ ಜೈಲಿನ ಖೈದಿಗಳ ಜೀವನದ ಅಂತಸ್ತು ಉತ್ತಮವೆನ್ನಬಹುದು.[9]

ಇದೇ ವಿಷಯವನ್ನು ಚರ್ಚೆಮಾಡುತ್ತಾ ಶ್ರೀವರ್ಸ್ ಮಾಸ್ತಿ ವೆಂಕಟೇಶಯ್ಯಂಗಾರ್ಯರು ನಮ್ಮ ರೈತರಿಗೆ ಆಹಾರ ಮತ್ತು ಉಡುಪಿಗಾಗಿ ಕೊನೆಯಪಕ್ಷ ತಿಂಗಳಿಗೆ ರೂ. 4 ಗಳಾದರೂ ಬೇಕೆಂಬುದಾಗಿಯೂ ಮತ್ತು ಮೈಸೂರು ರೈತರ ವಾರ್ಷಿಕಾದಾಯವು ತಲೆಯೊಂದಕ್ಕೆ 30 ರೂಪಾಯಿಗೆ ಹೆಚ್ಚಿಲ್ಲವೆಂಬುದಾಗಿಯೂ ಬರೆಯುತ್ತಾರೆ.[10] ಅದರ ಫಲವೇನೆಂಬುದನ್ನು ಹೇಳಬೇಕೆ! "ನಮ್ಮ ಬಡರೈತರ ಜೀವನದ ಅಂತಸ್ತಿನ ವಿಷಯವಾಗಿ ಹೇಳಬಹುದಾದ ಅಂಶ ಒಂದೇ. ಅದು ಏನೆಂದರೆ—ಅಂತಹ ಜೀವನದ ಅಂತಸ್ತೇ ಇಲ್ಲವೆನ್ನುವುದು.[11]"

ಹಳ್ಳಿಯವರ ಜೀವನದ ಅಂತಸ್ತು ಮಹಾತ್ಮಾ ಗಾಂಧಿಯವರಿಗೆ ತಿಳಿದಿರುವುದಕ್ಕಿಂತ ಚೆನ್ನಾಗಿ ಇನ್ನಾರಿಗೂ ತಿಳಿಯದು. ಅವರು ದರಿದ್ರ ನಾರಾಯಣನ ವರ್ಣನೆಯನ್ನು ಮಾಡಿರುವಂತೆ ಇನ್ನಾರೂ ಮಾಡಲಾರರು. ಆದುದರಿಂದ ಅವರು ಹೇಳಿರುವ ಒಂದು ಸಣ್ಣ ಪ್ರಸಂಗವನ್ನು ನಾವು ನೆನಪಿಗೆ ತಂದುಕೊಳ್ಳೋಣ. ಒಮ್ಮೆ ಮಹಾತ್ಮರು ಹಳ್ಳಿಗಳಲ್ಲಿ ಪ್ರವಾಸ ಮಾಡುತ್ತಿದ್ದಾಗ, ಕೆಲವು ಹೆಂಗಸರು ಬಂದು ಅವರ ದರ್ಶನವನ್ನು ತೆಗೆದು ಕೊಂಡರು. ಆ ಹೆಂಗಸರ ಕೊಳಕು ಮಹಾತ್ಮರ ಹೃದಯವನ್ನು ಚುಚ್ಚ ಲಾಗಿ ಅವರು 'ನೀವೇಕೆ ನಿಮ್ಮ ಬಟ್ಟೆಗಳನ್ನು ಒಗೆಯುವುದಿಲ್ಲ' ಎಂಬು ದಾಗಿ ಕೇಳಿದರಂತೆ. ಇದಕ್ಕೆ ಪ್ರತ್ಯುತ್ತರವಾಗಿ ಒಬ್ಬ ಮುದುಕಿಯು ಮಹಾ ತ್ಮರನ್ನು ತನ್ನ ಗುಡಿಸಲಿಗೆ ಕರೆದೊಯ್ದಳು. ಅಲ್ಲಿ ಪರೀಕ್ಷಿಸಲಾಗಿ ಆಕೆಯ ಮೈಮೇಲಿದ್ದ ಚಿಂದಿಯು ವಿನಾ ಆ ಮನೆಯಲ್ಲಿ ಬೇರೊಂದು ಚಿಂದಿಯೂ

ಇರಲಿಲ್ಲ. "ಮಹಾತ್ಮರೇ, ನನಗೆ ಇನ್ನೊಂದೇ ಒಂದು ಬಟ್ಟೆಯನ್ನು ಕೊಡಿ; ಅಂದು ನಾನು ಎಷ್ಟು ಶುಚಿಯಾಗಿರಬಲ್ಲೆನೆಂಬುದು ತಿಳಿಯುವುದು." ಎಂದು ಮುದುಕಿಯು ಹೇಳಲು, ಮಹಾತ್ಮರು ಕಂಬನಿದುಂಬಿ, ತಲೆಬಾಗಿ ನಿಂತರಂತೆ.[12]

ಈ ವಿವರಗಳಿಂದ ನಮಗೆ ತಿಳಿದುಬರುವ ಅಂಶಗಳಾವುವೆಂದರೆ: ನಮ್ಮ ರೈತರಲ್ಲಿ ಬಹುಮಂದಿಗೆ ಎರಡುಹೊತ್ತಿನ ಊಟವೂ ಕೂಡ ಪೂರ್ತಿಯಾಗಿ ಸಿಕ್ಕುವುದಿಲ್ಲ. ಸಾರವಾದ ಊಟವಂತೂ ದೊರೆಯುವುದೇ ಇಲ್ಲ. ಅಕ್ಕಿ, ರಾಗಿ, ಹುರುಳಿ—ಇವುಗಳೇ ಮುಖ್ಯವಾದ ಆಹಾರಪದಾರ್ಥಗಳು. ತರಕಾರಿ, ಹಾಲು, ಮೊಸರು, ತುಪ್ಪ—ಇವುಗಳು ಇಲ್ಲವೇ ಇಲ್ಲವೆನ್ನಬಹುದು. ಉಡುಪಿನಲ್ಲಿಯೂ ಇದೇ ಕೊರತೆ. ಮನೆಯ ವಿಷಯವನ್ನು ಹೇಳತೀರದು; ದನದ ಕೊಟ್ಟಿಗೆಗೂ ಮನುಷ್ಯನ ವಾಸಕ್ಕೂ ಒಂದೇ ಮನೆ. ಗಂಜಲದ ವಾಸನೆಯೇ ಪರಿಮಳದ್ರವ್ಯ. ಇದೂ ಇರಲಿ; ರೈತನ ಬೇಸರವನ್ನು ಪರಿಹರಿಸುವುದಕ್ಕಾಗಿ ವಿನೋದದ ಅವಕಾಶವಾದರೂ ಉಂಟೆ? ವ್ಯಾಜ್ಯವೇ ವಿನೋದ! ನಮ್ಮ ರೈತರ ಜೀವನವು ಬಾವಿಯಲ್ಲಿರುವ ಕೂರ್ಮದ ಜೀವನವೇ ಸರಿ.

ಹೀಗೆ ನಮ್ಮ ರೈತರ ಬಡತನವನ್ನಳೆಯಲು ನಾವು ಎರಡು ಉಪಕರಣಗಳನ್ನು ಉಪಯೋಗಿಸಿರುವೆವು. (ಇನ್ನೂ ಅನೇಕ ಉಪಕರಣಗಳಿವೆ.) ಆದರೆ ಕೈಯೊಳಗಿನ ಹುಣ್ಣಿಗೆ ಕನ್ನಡಿಯೇಕೆ? ಆದುದರಿಂದ ಬಡತನದ ಅಳತೆಯನ್ನು ಇಲ್ಲಿಗೆ ಬಿಡೋಣ. ಮುಂದಿನ ಪ್ರಕರಣಗಳಲ್ಲಿ ಬಡತನದ ಕಾರಣವನ್ನೂ ಪರಿಹಾರೋಪಾಯಗಳನ್ನೂ ವಿಮರ್ಶಿಸೋಣ.



*

# ೨. ಬಡತನದ ಕಾರಣಗಳು

---

ಒಬ್ಬ ಗ್ರಂಥಕರ್ತನು "ಇಂಡಿಯಾದೇಶವು ಕಡುಬಡವರ ನೆಲೆವೀಡಾದ ಸಿರಿನಾಡು." ಎಂಬುದಾಗಿ ವರ್ಣಿಸಿರುವನು. ಫಲವತ್ತಾದ ಭೂಮಿ, ಅಸಹ್ಯವಲ್ಲದ ವಾಯುಗುಣ, ನೀರನ್ನು ಒದಗಿಸುವ ನದಿಗಳು, ಬೇಸಾಯಕ್ಕೆ ಬೇಕಾಗುವ ಇತರ ಸೌಕರ್ಯಗಳು—ಇವೆಲ್ಲ ನಮ್ಮ ನಾಡಿನಲ್ಲಿವೆ. ಅಲ್ಲದೆ, ಕಾರ್ಖಾನೆಗಳನ್ನು ಸ್ಥಾಪಿಸಲು ಬೇಕಾದ ಸಾಮಗ್ರಿಗಳು—ಕಬ್ಬಿಣ, ಕಲ್ಲಿದ್ದಲು, ಮುಂತಾದ ಲೋಹಗಳೂ ಬೇಕಾದಷ್ಟು ಕೂಲಿಯವರೂ ವಿದ್ಯುಚ್ಛಕ್ತಿಯನ್ನು ಉತ್ಪತ್ತಿಮಾಡುವ ಅನುಕೂಲವೂ ಅಂದವಾದ ಮತ್ತು ಉಪಯುಕ್ತವಾದ ಕಾಡುಗಳೂ ಇವೆ. ಆದರೂ ಬಡತನದಲ್ಲಿ ನಾವು ಮೊದಲಿಗರು.

ನಮ್ಮ ಬಡತನದ ಕಾರಣಗಳಾವುವು? ಇದು ಇಂತಹದು; ಇದೊಂದೇ ಎಂದು ನಿರ್ದಿಷ್ಟವಾಗಿ ಹೇಳುವುದು ಕಷ್ಟ. ಕಾರಣಗಳನೇಕಗಳು ಹಾಸುಹೊಕ್ಕಿನಂತೆ ಬೆರೆದು ನಮ್ಮನ್ನು ದಾರಿದ್ರ್ಯದಲ್ಲಿ ಮುಳುಗಿಸಿವೆ. ಅವುಗಳಲ್ಲಿ ಕೆಲವನ್ನು ಈಗ ವಿಮರ್ಶಿಸೋಣ.

ವೆರಾ ಆನ್ಸ್ಟೇಯವರು ಬಡತನದ ಕಾರಣಗಳನ್ನು ಈ ಬಗೆಯಲ್ಲಿ ವರ್ಣಿಸುವರು. "ಇಂಡಿಯಾದೇಶದ ಬಡತನಕ್ಕೆ ಕಾರಣಗಳು ಆರ್ಥಿಕವಲ್ಲ; ಸಾಮಾಜಿಕ. ಸಾಮಾಜಿಕ ಕಾರಣಗಳಲ್ಲಿ (1) ಜನಸಂಖ್ಯೆಯು ಹೆಚ್ಚುತ್ತಿರುವುದು (2) ಜಾತಿವಿಭಜನೆ (3) ಸಂಪ್ರದಾಯಬದ್ಧತೆ (4) ಆರ್ಥಿಕಜೀವನದ ಮೇಲೆ ಇವುಗಳಿಂದಾಗಿರುವ ಪರಿಣಾಮ—ಇವೇ ಮುಖ್ಯವಾದುವು.[1] "

1931ನೇ ಇಸವಿಯ ಸೆನ್ಸಸ್ ವರದಿಯು ಒಂದು ಭೀಕರ ದೃಶ್ಯವನ್ನು ನಮ್ಮ ಸಮಾಜದ ಮುಂದೆ ಚಿತ್ರಿಸಿದೆ. ನಮ್ಮ ದೇಶದ ಪ್ರಜಾಭಿ

ವೃದ್ಧಿಯು ಈಗ ಬೆಳೆಯುವಂತೆಯೇ ಬೆಳೆಯುತ್ತಿದ್ದರೆ ನಾವು ಇನ್ನೂ ಬಡವರಾಗುವೆವಲ್ಲದೆ ನಮ್ಮ ನಾಗರಿಕತೆಯು ಮಾಯವಾಗುವುದೆಂಬುದರಲ್ಲಿ ಸಂದೇಹವಿಲ್ಲ. ಜನಸಂಖ್ಯೆಯಲ್ಲಿ ಇಂದು ನಮ್ಮ ದೇಶವೇ ಅಗ್ರಸ್ಥಾನವನ್ನು ಹೊಂದಿದೆ. ಕಳೆದ ಸೆನ್ಸಸ್‌ವರದಿಯ ಪ್ರಕಾರ ಇಂಡಿಯಾ ಚಕ್ರಾಧಿಪತ್ಯದಲ್ಲಿ 3530 ಲಕ್ಷ ಪ್ರಜೆಗಳು ಇರುವರು. ಎಂದರೆ ಹತ್ತು ವರ್ಷಗಳಲ್ಲಿಯೇ 340 ಲಕ್ಷ ಪ್ರಜೆಗಳು ಹೆಚ್ಚಿದಂತಾಯ್ತು. ನಮ್ಮ ದೇಶದಲ್ಲಿ ಹತ್ತು ವರ್ಷಗಳಲ್ಲಾದ ಪ್ರಜಾಭಿವೃದ್ಧಿಯು ಸ್ವಲ್ಪಕಡಿಮೆಯಾಗಿ ಫ್ರಾನ್ಸ್‌ದೇಶದ ಒಟ್ಟು ಜನಸಂಖ್ಯೆಯಷ್ಟಾಗುವುದು. ಅಮೇರಿಕದ ಸಂಯುಕ್ತರಾಷ್ಟ್ರವು ನಮ್ಮ ದೇಶಕ್ಕೆ ಎರಡರಷ್ಟು ವಿಶಾಲವಾಗಿದೆ ; ಅಲ್ಲದೆ ಅಲ್ಲಿಯ ಪ್ರಕೃತಿಯ ಸಿರಿಯು ನಮ್ಮಲ್ಲಿಲ್ಲ. ಆದರೂ ಅಲ್ಲಿ 1250 ಲಕ್ಷ ಜನಗಳು ಮಾತ್ರ ಇರುವರು. ರಷ್ಯದ ಜನಸಂಖ್ಯೆಯು 1470 ಲಕ್ಷ; ಯೂರೋಪಿನ ಇತರ ರಾಷ್ಟ್ರಗಳನ್ನೆಲ್ಲ ಕೂಡಿಸಿದರೂ ಅಲ್ಲಿ 3750 ಲಕ್ಷ ಜನಗಳು ಮಾತ್ರ ಇರುವರು. ಬಹುಕಾಲದವರೆಗೆ ಚೈನಾದೇಶವು ಜನಸಂಖ್ಯೆಯಲ್ಲಿ ಅಗ್ರಸ್ಥಾನವನ್ನು ಹೊಂದಿದ್ದಿತು ; ಇಂದು ಅಲ್ಲಿ 3420 ಲಕ್ಷ ಜನಗಳು ಮಾತ್ರ ಇರುವರು.[2]

ನಮ್ಮ ಜನತೆಯ ಜೀವನದ ಅಂತಸ್ತು ಎಷ್ಟು ಕಡಿಮೆಯೆಂಬುದನ್ನು ಈ ಮೊದಲೇ ಚಿತ್ರಿಸಿರುವೆವು. ಊಟಮಾಡುವವರು ಹೆಚ್ಚಿದಷ್ಟೂ ಸಂಪಾದನೆಯು ಹೆಚ್ಚದಿದ್ದಲ್ಲಿ ಉಪವಾಸಮಾಡುವವರು ಹೆಚ್ಚಲೇ ಬೇಕಲ್ಲವೆ ? ಜನಸಂಖ್ಯೆಯು ಈಗಿನ ಪ್ರಮಾಣದಲ್ಲಿ ಬೆಳೆದರೆ ಮುಂದಿನ ಸೆನ್ಸಸ್ ವೇಳೆಗೆ ಭಾರತಮಾತೆಯು 40 ಕೋಟಿಗಿಂತ ಹೆಚ್ಚು ಮಕ್ಕಳ ಭಾರವನ್ನು ಹೊರಬೇಕಾಗುವುದು. ಈಗಾಗಲೇ ಕೆಲವು ಸಮಾಜಶಾಸ್ತ್ರಜ್ಞರು, “ನಮ್ಮ ದೇಶದಲ್ಲಿ ಇನ್ನು ಹೆಚ್ಚು ಜನಗಳನ್ನು ಕಾಪಾಡಲು ತಕ್ಕ ಆಹಾರಪದಾರ್ಥಗಳನ್ನು ಬೆಳೆಯಲಾಗುವುದಿಲ್ಲ.” ಎಂದು ಸಾರುತ್ತಿರುವರು. ವಿಜ್ಞಾನಶಾಸ್ತ್ರಜ್ಞರೇನೋ ಹೀಗೆ ಹೆದರಬೇಕಾದುದಿಲ್ಲವೆಂದು ಅಭಯವನ್ನು ಕೊಡುತ್ತಿರುವರು. ಅದು ಹೇಗಾದರೂ ಇರಲಿ.

ಪ್ರಜಾಭಿವೃದ್ಧಿಯೊಂದೇ ನಮಗಿರುವ ನಿಜವಾದ ತೊಂದರೆಯಲ್ಲ; ಇರುವ ಮತ್ತು ಹೆಚ್ಚುತ್ತಿರುವ ಜನಸಂಖ್ಯೆಯಲ್ಲಿ ಬಹುಮಂದಿ ಒಂದೇ ಉದ್ಯೋಗವನ್ನು ನಂಬಿಕೊಂಡಿರುವುದೂ ಅದಕ್ಕೆ ಸಹಕಾರಿಯಾಗಿದೆ. "1931 ನೆಯ ಇಸವಿಯ ಸೆನ್ಸಸ್ಸಿನಿಂದ ಹುಟ್ಟುವ ಪ್ರಶ್ನೆಯು ನಮ್ಮ ದೇಶದಲ್ಲಿ ದೊರೆಯುವ ಆಹಾರದ ಮಿತಿಗೆ ಸಂಬಂಧಿಸಿದುದಲ್ಲ; ಉದ್ಯೋಗದ ಮಿತಿಗೆ ಸಂಬಂಧಿಸಿದುದು.[3]" ಎಂದರೆ, ನಮ್ಮ ಜನಗಳಲ್ಲಿ ಬಹುಮಂದಿ ಬೇಸಾಯವೊಂದನ್ನೇ ನಂಬಿರುವುದು. ಕಳೆದ ಸೆನ್ಸಸ್ಸಿನಿಂದ ಹೊರಬಿದ್ದ ಈ ಕೆಳಗಿನ ಅಂಕಿಗಳು ಈ ವಿಷಯವನ್ನು ಸ್ಪಷ್ಟಪಡಿಸುವುವು.[4]

| | | ಉದ್ಯೋಗ | | 10,000 ಕೆಲಸಗಾರರಲ್ಲಿ |
|---|---|---|---|---|
| I | (1) | ಬೇಸಾಯ ಮತ್ತು ಪಶುಪಾಲನೆ | ... | 6711 |
| | (2) | ಗಣಿಗಳು .... | .... | 23 |
| II | (1) | ಕೈಗಾರಿಕೆ .... | .... | 997 |
| | (2) | ರೈಲು ಮೊದಲಾದ ವಾಹನಗಳು | .... | 153 |
| | (3) | ವ್ಯಾಪಾರ .... | .... | 515 |
| III | | ಸರ್ಕಾರಿ ಉದ್ಯೋಗ, ಸೈನ್ಯ, ಡಾಕ್ಟರು ಲಾಯರು ಇತ್ಯಾದಿ | .... | 269 |
| IV | (1) | ತಮ್ಮ ಆದಾಯದಿಂದ ಜೀವನ | .... | 14 |
| | (2) | ಮನೆಗೆಲಸ .... | .... | 708 |
| | (3) | ಕಸಬು ತಿಳಿಯದು .... | .... | 505 |
| | (4) | ಸಂಪಾದನೆಯಿಲ್ಲದ ಉದ್ಯೋಗ | .... | 105 |

ಈ ಪಟ್ಟಿಯಂತೆ ನಮ್ಮ ನಾಡಿನಲ್ಲಿ ಒಂದನೆಯ ಪಂಗಡಕ್ಕೆ ಸೇರಿದವರೇ ಶೇಕಡ 70 ಮಂದಿಗೆ ಮೀರಿರುವರು. ಕೈಗಾರಿಕೆ ಮೊದಲಾದುವುಗಳಲ್ಲಿ ಎಷ್ಟು ಕಡಿಮೆ ಮಂದಿ ಇರುವರೆಂಬುದನ್ನು ನೋಡಿರಿ. ಅಲ್ಲದೆ ನಮ್ಮ ದೇಶದ ಹಳ್ಳಿಗಳಲ್ಲಿ ಬೇಸಾಯಗಾರರಲ್ಲದವರೂ ಕೆಲವರಿರುವರು. ಪೂರ್ವಕಾಲದಲ್ಲಿ ಬಡಗಿ, ಕಮ್ಮಾರ, ನೆಯ್ಗೆಯವನು ಮುಂತಾದವರು ತಮ್ಮ ಕಸಬುಗಳಿಂದ ಜೀವನಮಾಡುತ್ತಿದ್ದರು; ಇಂದು ಅವರ ಕೈಗಾರಿ

ಕೆಗಳೆಲ್ಲವೂ ಮಲಿನವಾಗಿರುವುದರಿಂದ ಅವರಲ್ಲಿಯೂ ಬಹುಮಂದಿ ಬೇಸಾಯದಿಂದಲೇ ಜೀವನಮಾಡಬೇಕಾಗಿದೆ. ಆದುದರಿಂದ ನಮ್ಮ ಹಳ್ಳಿಗಳಲ್ಲಿ ವಾಸಮಾಡುವವರೆಲ್ಲರೂ ಬೇಸಾಯವನ್ನೇ ನಂಬಿರುವರೆಂದರೆ ಅತಿಶಯೋಕ್ತಿಯಾಗಲಾರದು. ಒಟ್ಟಿನಲ್ಲಿ ಶೇಕಡ 80 ಕ್ಕಿಂತ ಮಿಗಿಲಾಗಿ ಆರಂಬವನ್ನೇ ನಂಬಿಕೊಂಡಿರುವರೆಂದು ನಾವು ಧಾರಾಳವಾಗಿ ಹೇಳಬಹುದು.

ಪಾಶ್ಚಾತ್ಯದೇಶಗಳಲ್ಲಿ ಔದ್ಯೋಗಿಕ ವಿಭಜನೆಯು ಈ ರೀತಿಯಾಗಿಲ್ಲ. ಒಂದು ದೋಣಿಯಲ್ಲಿರುವವರೆಲ್ಲರೂ ಆ ದೋಣಿಯ ಒಂದೇ ಮೂಲೆಯಲ್ಲಿ ನಿಂತರೆ ಅದರ ಪಾಡೇನಾಗುವುದೆಂಬುದು ತಿಳಿಯದೆ ? ಇದನ್ನರಿತು ಪಾಶ್ಚಾತ್ಯರು ಒಂದೇ ಕಸಬಿಗೆ ಎಲ್ಲರೂ ಗಂಟುಬೀಳದೆ, ಸಾಧ್ಯವಾದಮಟ್ಟಿಗೆ ಬೇರೆ ಬೇರೆ ಕಸಬುಗಳಿಗೆ ನುಗ್ಗುವರು. ಅಮೆರಿಕದ ಸಂಯುಕ್ತರಾಷ್ಟ್ರಕ್ಕೆ ಅನ್ವಯಿಸುವ ಈ ಕೆಳಗಿನ ಅಂಕಿಗಳು ಈ ವಿಷಯವನ್ನು ಸ್ಪಷ್ಟಪಡಿಸುವುವು[6]. 1930 ರಲ್ಲಿ ಅಲ್ಲಿಯ 1370 ಲಕ್ಷ ಪ್ರಜೆಗಳಲ್ಲಿ ಲಾಭದಾಯಕವಾದ ಉದ್ಯೋಗದಲ್ಲಿದ್ದವರು 48829920 ಮಂದಿ. ಇವರಲ್ಲಿ—

| | | | |
|---|---|---|---|
| (1) | ಬೇಸಾಯಗಾರರು | ... | 10471998 |
| (2) | ಕೈಗಾರಿಕೆಯವರು | .... | 14119652 |
| (3) | ರೈಲು, ಪೋಸ್ಟು—ಇವುಗಳಲ್ಲಿದ್ದವರು | .... | 3843147 |
| (4) | ವ್ಯಾಪಾರಿಗಳು | .... | 6081467 |
| (5) | ಪ್ರೊಫೆಷನಲ್ ಸರ್ವಿಸ್‌ನವರು | .... | 3253884 |
| (6) | ಮನೆಗೆಲಸದವರು | .... | 4952451 |
| (7) | ಮತಸಂಸ್ಥೆಗಳಲ್ಲಿದ್ದವರು | .... | 4025324 |

ಈ ಪಟ್ಟಿಯನ್ನು ನಮ್ಮ ದೇಶದ ಔದ್ಯೋಗಿಕ ವಿಭಜನೆಯ ಪಟ್ಟಿಯೊಡನೆ ಹೋಲಿಸಿನೋಡಿದರೆ ವ್ಯತ್ಯಾಸವು ಚೆನ್ನಾಗಿ ತಿಳಿಯುವುದು. ಸಂಯುಕ್ತರಾಷ್ಟ್ರದ ಕೆಲಸಗಾರರು ಎಲ್ಲಾ ಶಾಖೆಗಳಲ್ಲಿಯೂ ಹರಡಿಕೊಂ

ಡಿರುವರು. ಬಾಗಿಲುತೆಗೆದಿರುವ ರೈಲುಗಾಡಿಗೆ ನುಗ್ಗುವ ಪ್ರಯಾಣಿಕ ರಂತೆ ನಮ್ಮ ದೇಶೀಯರೆಲ್ಲರೂ ಬೇಸಾಯಗಾರರೇ ಆಗಿರಲು ಯತ್ನಿಸು ವರು. ತತ್ಪರಿಣಾಮವಾಗಿ ಪ್ರತಿಯೊಬ್ಬ ಬೇಸಾಯಗಾರನ ಪಾಲಿಗೂ ಬರುವ ಜಮೀನಿನ ತಾಕುಗಳು ಕೃಶವಾಗುತ್ತಿರುವುವು. 1931 ರಲ್ಲಿ ಪ್ರತಿ ಯೊಬ್ಬ ರೈತನ ಪಾಲಿಗೂ 2·9 ಎಕರೆ ಮಾತ್ರ ಜಮೀನು ದೊರೆತಿತ್ತು.[6] ಜಮೀನಿನ ತಾಕು ಚಿಕ್ಕದಾದಷ್ಟೂ ಅದರಿಂದ ರೈತನಿಗೆ ಬರುವ ಉತ್ಪತ್ತಿಯು ಕಡಿಮೆಯಾಗುತ್ತಿದೆ. ಇದಲ್ಲದೆ ನಮ್ಮ ದಾಯಭಾಗದ ಪದ್ಧತಿಯಿಂದ ಪ್ರತಿಯೊಬ್ಬ ಪಾಲುಗಾರನಿಗೂ ಊರಿನ ನಾನಾಕಡೆಗಳಲ್ಲಿ ಜಮೀನು ದೊರೆಯುವುದು. ಹೀಗೆ ಜಮೀನು ಚದುರಿರುವುದರಿಂದ ನಮ್ಮ ತೊಂದರೆಯು ಇನ್ನೂ ಹೆಚ್ಚುತ್ತಿರುವುದು.

ಹೀಗೆ ಬೇಸಾಯಗಾರರ ಸಂಖ್ಯೆಯು ಬೆಳೆಯುತ್ತ ಬಂದಂತೆಲ್ಲ ನಿರುದ್ಯೋಗಿಗಳ ಸಂಖ್ಯೆಯೂ ಜಮೀನಿಲ್ಲದ ಕೂಲಿಗಾರರ ಸಂಖ್ಯೆಯೂ ಬೆಳೆಯುವುದರಲ್ಲಿ ಅಡ್ಡಿಯೇ ಇಲ್ಲ. 1931 ರಲ್ಲಿ ನಮ್ಮ ಹಳ್ಳಿಗಳಲ್ಲಿ ಜಮೀನಿಲ್ಲದೆ ಕೂಲಿಯಿಂದಲೇ ಜೀವನಮಾಡುತ್ತಿದ್ದವರು 2492535 ಮಂದಿ.[7] ಈ ಕೂಲಿಯವರ ಮಾತಿರಲಿ. ಜಮೀನಿರುವ ರೈತರಿಗು ವರ್ಷವೆಲ್ಲ ಕೆಲಸವಿರುವುದಿಲ್ಲ. ಅಗ್ರಿಕಲ್ಚರಲ್ ಕಮಿಷನಿನವರ ಹೇಳಿ ಕೆಯಂತೆ ರೈತರಿಗೆ ಎರಡರಿಂದ ನಾಲ್ಕು ತಿಂಗಳ ವರೆಗೆ ವಿರಾಮ ವಿರುವುದು. ನಮ್ಮದೇಶದಲ್ಲಿ ಪೂರ್ವದಿಂದ ಬಳಕೆಯಲ್ಲಿದ್ದ ಕೈಗಾರಿಕೆಗಳು ಇಂದು ನಾಶವಾಗಿರುವುದರಿಂದ ರೈತರ ವಿರಾಮಕಾಲವು ನಿಷ್ಪ್ರಯೋಜಕ ವಾಗಿ ವ್ಯರ್ಥವಾಗುತ್ತಿರುವುದು.

ಜಾತಿಪದ್ಧತಿ, ಅವಿಭಕ್ತಕುಟುಂಬ, ಬಾಲ್ಯವಿವಾಹ, ಅಸ್ಪೃಶ್ಯತೆ ಮುಂತಾದ ಸಮಾಜಸಂಪ್ರದಾಯಗಳೂ ನಮ್ಮ ಬಡತನಕ್ಕೆ ಕಾರಣಗಳಾ ಗಿವೆ. "ನಮ್ಮ ಮತಸಂಬಂಧವಾದ ಸಂಸ್ಥೆಗಳು ಐಹಿಕಸುಖಕ್ಕೆ ಪ್ರಾಶ ಸ್ತ್ಯವನ್ನು ಕೊಡದೆ, ಪೂರ್ವಾರ್ಜಿತ ಕರ್ಮದಲ್ಲಿ ನಂಬುಗೆಯನ್ನು ಅಭಿ

ವೃದ್ಧಿಮಾಡಿ, ನಮ್ಮಲ್ಲಿ ನಿರುತ್ಸಾಹವನ್ನು ಹರಡುತ್ತಿರುವುದರಿಂದ ನಮ್ಮ ಬಡತನವು ಬೆಳೆಯುತ್ತಿದೆ; ಇದೇ ನಮ್ಮ ಬಡತನಕ್ಕೆ ಪ್ರಬಲವಾದ ಕಾರಣ.'' ಎಂದು ಕೆಲವರು ವಾದಿಸುವರು.

ನಮ್ಮ ಬಡತನವು ಹೊಸರೋಗವಲ್ಲ; ಬಹುಕಾಲದಿಂದಲೂ ನಮ್ಮನ್ನು ಬೆನ್ನಟ್ಟಿ ಬಂದಿರುವ ಬೇತಾಳ. ಅದರ ಪರಿಣಾಮವಾಗಿ ನಮ್ಮ ರೈತರಲ್ಲಿ ಬಹುಮಂದಿ ಸಾಲಗಾರರಾಗಿರುವರು; ಸಾಹುಕಾರರ ಬಲೆಯಲ್ಲಿ ಸಿಕ್ಕಿ ತಮ್ಮ ಬಡತನವನ್ನು ಇನ್ನೂ ವೃದ್ಧಿಮಾಡಿಕೊಳ್ಳುತ್ತಿರುವರು. ಬಡತನದ ಫಲವಾಗಿದ್ದ ಸಾಲವು, ಇಂದು ಬಡತನಕ್ಕೆ ಪ್ರಬಲವಾದ ಕಾರಣವೂ ಆಗುತ್ತಿರುವುದು.

ದುಡಿದು ಬೆಳೆದ ದವಸವನ್ನು ತಕ್ಕ ಬೆಲೆಗೆ ಮಾರಲು ರೈತರಿಗೆ ತಿಳಿಯದು; ತಕ್ಕ ಸೌಕರ್ಯಗಳೂ ಇಲ್ಲ; ಪರದೇಶದವರ ಪೈಪೋಟಿ ಬೇರೆ. ಹಳ್ಳಿಗಳಿಗೆ ರೈಲು, ರಸ್ತೆ ಮೊದಲಾದ ಪ್ರಯಾಣ ಸೌಕರ್ಯಗಳೆಲ್ಲಿಂದ ಬರಬೇಕು?

ಈ ಮಧ್ಯೆ ಬೇಸಾಯವನ್ನಾದರೂ ಉತ್ತಮರೀತಿಯಲ್ಲಿ ಮಾಡುವರೆ! ಅದಕ್ಕೂ ಸಾವಿರ ತೊಂದರೆ. ರೈತರಲ್ಲಿ ಬಂಡವಾಳವಿಲ್ಲ; ಉತ್ತಮವಾದ ಉಪಕರಣಗಳನ್ನುಪಯೋಗಿಸಲಾರರು; ಸಂಪ್ರದಾಯವನ್ನೂ ಬಿಡಲಾರರು. ಆದುದರಿಂದ ಅವರ ಮುಖ್ಯ, ಏಕೆ, ಒಂದೇ ವೃತ್ತಿಯಿಂದಲೂ ಹೆಚ್ಚು ಸಂಪಾದನೆಯನ್ನು ಮಾಡಲಾರರು. ಇಂತಹ ನಮ್ಮ ರೈತರ ಪಾಲಿಗೆ ಬಡತನವಲ್ಲದೆ ಮತ್ತಾವುದು ಸಿಕ್ಕಬೇಕು?



# ೩. ಕೆಲವು ನಿವಾರಣೋಪಾಯಗಳು

ನಮ್ಮ ಬಡತನದ ಆಳವನ್ನು ಸ್ವಲ್ಪಮಟ್ಟಿಗೆ ವಿವರಿಸಿರುವೆವು. ಈ ಬಡತನವನ್ನು ನೀಗಿಸಿ, ನಮ್ಮ ನಾಡನ್ನು ಪುನಃ ಜೀವಂತವಾದುದನ್ನಾಗಿ ಮಾಡಲು ಯಾವ ಮಾರ್ಗವನ್ನು ಅನುಸರಿಸಬೇಕು; ನಮ್ಮಂತೆಯೇ ಕಷ್ಟಕ್ಕೊಳಗಾಗಿದ್ದ ಇತರ ರಾಷ್ಟ್ರಗಳು ತಮ್ಮ ಕಷ್ಟವನ್ನು ಯಾವ ಬಗೆಯಲ್ಲಿ ನಿವಾರಣೆಮಾಡಿಕೊಳ್ಳುತ್ತಿರುವುವು ಎಂಬಿವನ್ನು ವಿಮರ್ಶಿಸಬೇಕಾಗಿದೆ.

ಪ್ರಥಮತಃ ನಮ್ಮ ದೇಶದಲ್ಲಿ ಜನಸಂಖ್ಯೆಯು ಅಪರಿಮಿತವಾಗುತ್ತಿದೆಯೆಂಬುದನ್ನೂ ಅದರಲ್ಲಿಯೂ ಜಮೀನಿನಿಂದಲೇ ಹೊಟ್ಟೆಹೊರೆಯಬೇಕೆಂದಿರುವವರ ಸಂಖ್ಯೆಯು ಸಂಪೂರ್ಣವಾಗಿ ಎಲ್ಲೆ ಮೀರಿವೆಯೆಂಬುದನ್ನೂ ನಾವು ಮರೆಯಬಾರದು. ನಮ್ಮ ನಾಡಿನ ರೋಗಕ್ಕೆ ಇದೇ ಪ್ರಬಲವಾದ ಕಾರಣ. ಆಧುನಿಕಪ್ರಪಂಚದಲ್ಲಿ ಬೇಸಾಯವೊಂದನ್ನೇ ನಂಬಿರುವ ಯಾವ ರಾಷ್ಟ್ರವೂ ಉತ್ತಮವರ್ಗಕ್ಕೆ ಸೇರಲಾರದು. ಬೇಸಾಯಗಾರರು ಪ್ರಕೃತಿಯ ಗುಲಾಮರಾಗಿಯೇ ಜೀವನಮಾಡಬೇಕು; ಉತ್ಸಾಹ, ಸಾಹಸ, ಧೈರ್ಯ, ಮುಂತಾದುವುಗಳ ಬೆಳವಳಿಕೆಗೆ ಆವಶ್ಯಕವಾದ ಗುಣಗಳು ಅವರಲ್ಲಿ ಪ್ರಕಾಶಕ್ಕೆ ಬಾರವು. ಅವರು ಪ್ರಕೃತಿಯ ಸ್ವಾಮ್ಯವನ್ನು ಒಪ್ಪಿ, ಕರ್ಮಬದ್ಧರಾಗಿ "ಹುಟ್ಟಿಸಿದ ದೇವರು ಹುಲ್ಲು ಮೇಯಿಸಿಯಾನೇ! ನಮ್ಮ ದುಡಿತವೇಷ್ಟರದು!" ಎಂಬ ಒಣವೇದಾಂತವನ್ನು ನಂಬಬೇಕಾಗುವುದು. ಆದುದರಿಂದ ವ್ಯವಸಾಯದ ಮೇಲೆ ಹೆಚ್ಚುತ್ತಿರುವ ಜನತೆಯ ಒತ್ತಡವನ್ನು ಸರ್ವವಿಧದಲ್ಲಿಯೂ ಕಡಿಮೆಮಾಡಬೇಕಾದುದೇ ನಮ್ಮ ಪ್ರಥಮಕರ್ತವ್ಯವು.

ಈ ಸಂದರ್ಭದಲ್ಲಿ ಅರ್ಥಶಾಸ್ತ್ರಜ್ಞರು ಮೂರು ನಾಲ್ಕು ಉಪಾಯಗಳನ್ನು ಸೂಚಿಸಿರುವರು. ಅವುಗಳಲ್ಲಿ ಮೊದಲನೆಯದು, ನಮ್ಮ ಹಳ್ಳಿಗಳಿಂದ ಜನಗಳನ್ನು ಪಟ್ಟಣಗಳಿಗೆ ಆಕರ್ಷಿಸಿ, ಕಾರ್ಖಾನೆಗಳಲ್ಲಿಯೂ

ವಾಣಿಜ್ಯಪ್ರಪಂಚದಲ್ಲಿಯೂ ಅವರನ್ನು ಹೆಚ್ಚುಹೆಚ್ಚಾಗಿ ನಿಯಮಿಸ ಬೇಕೆಂಬುದು. ನಮ್ಮ ನಾಡಿನ ಹಳ್ಳಿಗಳಲ್ಲಿ ವಾಸಿಸುವಷ್ಟು ಜನರು ಇನ್ನಾವ ನಾಡಿನಲ್ಲಿಯೂ ವಾಸಿಸುತ್ತಾ ಇಲ್ಲ. ಬೇರೆ ಬೇರೆ ದೇಶಗಳಲ್ಲಿ ಗ್ರಾಮವಾಸಿಗಳ ಮತ್ತು ನಗರವಾಸಿಗಳ ಪ್ರಮಾಣವನ್ನು ತೋರಿಸುವ ಈ ತಃಖ್ತೆಯನ್ನು ಪರೀಕ್ಷಿಸಿರಿ.

| ದೇಶ | ಗ್ರಾಮವಾಸಿಗಳು | ನಗರವಾಸಿಗಳು |
|---|---|---|
| ಇಂಡಿಯ | 89% | 11% |
| ಮೈಸೂರು | 84·1 | 15·9 |
| ಇಂಗ್ಲೆಂಡ್ ಮತ್ತು ವೇಲ್ಸ್ | 22·0 | 78·0 |
| ಸಂಯುಕ್ತರಾಷ್ಟ್ರ | 49·6 | 51·4 |
| ಜರ್ಮನಿ | 44·4 | 45·6 |
| ಫ್ರಾನ್ಸ್ | 47·8 | 42·2 |

ನಮ್ಮ ಗ್ರಾಮವಾಸಿಗಳ ಆರ್ಥಿಕಸ್ಥಿತಿಯನ್ನು ಉತ್ತಮಪಡಿಸಬೇಕಾದರೆ ಬಹುಮಂದಿಗಳನ್ನು ನಗರಗಳಿಗೆ ಸೆಳೆಯಬೇಕೆಂಬುದಾಗಿ ಅನೇಕರ ಅಭಿಪ್ರಾಯವಷ್ಟೆ.[2] ಆದರೆ ಎಷ್ಟೋ ಪ್ರಯತ್ನಗಳು ನಡೆದಿದ್ದರೂ ಕಾರ್ಖಾನೆಗಳಲ್ಲಿ ಕೆಲಸಮಾಡುವವರ ಪ್ರಮಾಣವು ಹೆಚ್ಚುತ್ತಾ ಇಲ್ಲ; ಅದಕ್ಕೆ ಪ್ರತಿಯಾಗಿ ಇಳಿಯುತ್ತಿದೆ. 1921 ರಲ್ಲಿ ಶೇಕಡ ಹನ್ನೊಂದು ಮಂದಿ ಕೈಗಾರಿಕೆಗಳಿಂದ ಜೀವನಮಾಡುತ್ತಿದ್ದರು; 1931 ರಲ್ಲಿ ಇದು ಶೇಕಡ ಹತ್ತಕ್ಕೆ ಇಳಿಯಿತು.[3] ಕಾರ್ಖಾನೆಗಳ ಅಭಿವೃದ್ಧಿಗೇ ಎಷ್ಟೋ ಅಡಚಣೆಗಳಿವೆ; ಅಲ್ಲದೆ ಕಾರ್ಖಾನೆಗಳು ಈಗಿರುವುದಕ್ಕಿಂತ ನೂರ್ಮಡಿಯಾಗಿ ಬೆಳೆದರೂ ನಮ್ಮ ಜೀವನವನ್ನು ಹೆಚ್ಚಾಗಿ ಮಾರ್ಪಡಿಸಲಾರವು. ಆದರೂ ಸಮಾಜ ನೇತೃಗಳು ಸಾಧ್ಯವಾದಷ್ಟುಮಟ್ಟಿಗೆ ಕಾರ್ಖಾನೆಗಳ ಬೆಳವಣಿಗೆಗೆ ಪ್ರೋತ್ಸಾಹ ಕೊಡಬೇಕು.

ಪಾಶ್ಚಾತ್ಯದೇಶಗಳಲ್ಲಿ ಜನಸಂಖ್ಯೆಯು ಹೆಚ್ಚಿದಷ್ಟೂ ಜನತೆಯ ಒತ್ತಡವು ಕಡಿಮೆಯಾಗಿರುವ ರಾಷ್ಟ್ರಗಳಿಗೆ ಹೋಗಿ ಸ್ವಾಸ್ಥ್ಯಗಳನ್ನು ಕಟ್ಟಿಕೊಂಡು ಜೀವನಮಾಡುವ ವಾಡಿಕೆಯು ಬಹುದಿವಸಗಳಿಂದಲೂ ಇದೆ. ಜನಭರಿತವಾದ ಇಂಗ್ಲೆಂಡ್ ಮೊದಲಾದ ದೇಶಗಳಲ್ಲಿ ಸರ್ಕಾರದವರೂ ಖಾಸಗೀ ಸಂಸ್ಥೆಗಳೂ ಇಂತಹ ಸ್ವಾಸ್ಥ್ಯ ನಿರ್ಮಾಪಕರಿಗೆ ಬಹು ಉತ್ತೇಜನವನ್ನು ಕೊಡುವರು. ಆಸ್ಟ್ರೇಲಿಯ, ಸಂಯುಕ್ತ ರಾಷ್ಟ್ರ, ಆಫ್ರಿಕ, ಮತ್ತು ದಕ್ಷಿಣಅಮೆರಿಕ ಇವುಗಳಲ್ಲಿರುವ ಪಾಶ್ಚಾತ್ಯರ ಸ್ವಾಸ್ಥ್ಯಗಳು ಇದಕ್ಕೆ ಉದಾಹರಣೆಗಳಾಗಿವೆ. ಜನಸಂಖ್ಯೆಯು ಅತಿಯಾಗಿ ಬೆಳೆದು ತಮಗೆ ಸ್ವಾಸ್ಥ್ಯಗಳನ್ನು ಕಟ್ಟಿಕೊಳ್ಳಲು ಅವಕಾಶವಿಲ್ಲದುದಕ್ಕಾಗಿಯೇ ಜಪಾನರು ಮಂಚೂರಿಯವನ್ನು ಆಕ್ರಮಿಸಿಕೊಂಡುದು ; ಇಟಾಲಿಯನರು ಅಬಿಸೀನಿಯವನ್ನು ಆಕ್ರಮಿಸಿಕೊಂಡುದೂ ಈ ಕಾರಣದಿಂದಲೇ.

ನಮ್ಮ ದೇಶದವರೂ ಸ್ವಾಸ್ಥ್ಯಗಳನ್ನೇಕೆ ಕಟ್ಟಬಾರದು ? ಪ್ರಾಚೀನಭಾರತೀಯರು ಪೂರ್ವಪಶ್ಚಿಮದೇಶಗಳಲ್ಲಿ ಸ್ವಾಸ್ಥ್ಯಗಳನ್ನು ಕಟ್ಟಿ ಭಾರತೀಯ ವ್ಯಾಪಾರ ಕಲಾಸಾಹಿತ್ಯಾದಿಗಳ ಅಭಿವೃದ್ಧಿಗೆ ಕಾರಣಭೂತರಾಗಿ ಭಾರತಭೂಮಿಯ ಹೆಸರನ್ನು ಪ್ರಪಂಚದ ನಾನಾಕಡೆಗೂ ಹರಡಿದ್ದರಷ್ಟೆ ? [5] ಇಂದೇಕೆ ನಾವು ಹಿಂದುಳಿದಿರಬೇಕು ? ಪುನಃ ಸ್ವಾಸ್ಥ್ಯಗಳನ್ನೇಕೆ ಕಟ್ಟಬಾರದು, ಎಂಬ ಯೋಚನೆಯು ನಮ್ಮಲ್ಲನೇಕರಿಗಿದೆ. ಆದರೆ ಒಂದೆರಡು ವಿಷಯಗಳನ್ನು ನೆನಪಿನಲ್ಲಿಡೋಣ. ಈಗಾಗಲೇ ಪ್ರಪಂಚದ ಉತ್ತಮವಾದ ಭಾಗಗಳನ್ನೆಲ್ಲ ಪಾಶ್ಚಾತ್ಯರು ಆಕ್ರಮಿಸಿಕೊಂಡಿರುವರು. ಅಂತಹ ಭಾಗಗಳಲ್ಲಿ ನಮ್ಮ ದೇಶದವರು ವಸತಿಗಳನ್ನು ಕಟ್ಟಲು ಹೆಚ್ಚು ಪ್ರತಿಬಂಧಕವನ್ನು ಹಾಕಿರುವರು ಮತ್ತು ಹಾಕುತ್ತಿರುವರು ; ಈ ಮೊದಲೇ ನೆಲಸಿರುವ ನಮ್ಮವರಿಗೆ ಹೆಚ್ಚು ತೊಂದರೆಯನ್ನೂ ಕೊಡುತ್ತಿರುವರು. (cf. White Australia Policy in Australia and Anti

Indian Legislation in Africa). ಈ ವಿಷಯವನ್ನು ವಿಮರ್ಶಿಸುತ್ತಾ ಇಂಡಿಯಾ ಸೇಸಸ್ ಕಮಿಷನರು ಬ್ರಿಟಿಷ್‌ಗಯಾನಾದಲ್ಲಿ ವಿನಾ ಭಾರತೀಯರಿಗೆ ಸ್ವಾಸ್ಥ್ಯಗಳನ್ನು ಕಟ್ಟಲು. ಹೆಚ್ಚು ಅವಕಾಶವಿಲ್ಲವೆಂಬುದಾಗಿ ಹೇಳಿರುವರು.[6] ಅಂದರೆ ನಮ್ಮ ರೈತರ ಕಷ್ಟನಿವಾರಣೆಗೆ ಈ ಮಾರ್ಗದಿಂದ ಸ್ವಲ್ಪವೂ ಪ್ರಯೋಜನವಿಲ್ಲವೆಂದು ನಿಸ್ಸಂದೇಹವಾಗಿ ಹೇಳಬಹುದು. (ಸದ್ಯದಲ್ಲಿ ನಮ್ಮ ನಾಡಿನವರು 23 ಲಕ್ಷ ಮಂದಿ ಬ್ರಿಟಿಷ್ ಸಾಮ್ರಾಜ್ಯದ ಇತರ ಭಾಗಗಳಲ್ಲಿಯೂ 1 ಲಕ್ಷದ 4 ಸಾವಿರ ಮಂದಿ ಇತರ ರಾಷ್ಟ್ರಗಳಲ್ಲಿಯೂ ಇರುವರು.[7])

ಮೂರನೆಯ ಉಪಾಯವೊಂದು ಪಾಶ್ಚಾತ್ಯರಾಷ್ಟ್ರಗಳಲ್ಲಿ ಬಳಕೆಯಲ್ಲಿದೆ. ಅದು ಏನೆಂದರೆ: ಸಕಲವಿಧದಲ್ಲಿಯೂ ಸಂತಾನನಿರೋಧ ಮಾಡುವುದು. ಪಾಶ್ಚಾತ್ಯರಲ್ಲಿ ಬಾಲ್ಯವಿವಾಹಪದ್ಧತಿಯಿಲ್ಲ; ಆದುದರಿಂದ ಅಲ್ಲಿ ನಮ್ಮದೇಶದಂತೆ ಅಪರಿಮಿತವಾದ ಮಕ್ಕಳು ಹುಟ್ಟುವಂತಿಲ್ಲ. ಈಚೆಗೆ ವಿಜ್ಞಾನಶಾಸ್ತ್ರದ ಸಹಾಯದಿಂದ ಸಂತಾನವನ್ನು ನಿರೋಧಿಸಲು ವಿಶ್ವ ಪ್ರಯತ್ನಗಳು ನಡೆಯುತ್ತಿವೆ. ನಮ್ಮ ದೇಶದಲ್ಲಿಯಾದರೋ ಹತ್ತುವರ್ಷಗಳಲ್ಲಿಯೇ 3 ಕೋಟಿ 40 ಲಕ್ಷ ಪ್ರಜಾಭಿವೃದ್ಧಿಯಾಗಿದೆ. ಹುಟ್ಟಿದ ಮಕ್ಕಳಲ್ಲಿ ಬಹುಮಂದಿ ಸತ್ತುಹೋದರೂ ಇನ್ನೂ ಉಳಿದಿರುವವರ ಸಂಖ್ಯೆಯನ್ನು ನೋಡಿರಿ. ಆದುದರಿಂದ ಸಂತಾನಾಭಿವೃದ್ಧಿಯ ವಿಷಯದಲ್ಲಿ ನಮ್ಮಲ್ಲಿ ಬಳಕೆಯಲ್ಲಿರುವ ಮನೋಭಿಪ್ರಾಯವನ್ನು ಬದಲಾಯಿಸಿ, ಅಶಕ್ತರೂ ಬಡವರೂ ಆದ ಮಕ್ಕಳು ಮನೆತುಂಬ ಇರುವುದಕ್ಕಿಂತ ಅರೋಗ ದೃಢಕಾಯರಾದ ಸ್ವಲ್ಪಮಂದಿ ಮಕ್ಕಳಿರುವುದೇ ಮೇಲೆಂಬುದನ್ನು ಎಲ್ಲರೂ ತಿಳಿದುಕೊಳ್ಳುವಂತೆ ಮಾಡಬೇಕು.[8]

ಸಂತಾನನಿರೋಧದ ಚಳುವಳಿಯಲ್ಲಿ ಒಂದೆರಡು ಕುಂದಕಗಳಿವೆ. ಪಾಶ್ಚಾತ್ಯಪದ್ಧತಿಯನ್ನು ಅನುಕರಣಮಾಡಿ ಸಂತಾನನಿರೋಧಮಾಡಿದಲ್ಲಿ ಸಮಾಜದ ನೀತಿಯು ನೆಲಸಮವಾಗುವುದೆಂಬುದಾಗಿ ಮಹಾತ್ಮಗಾಂಧಿ

ಮೊದಲಾದವರು ಅಭಿಪ್ರಾಯಪಡುವರು. ಬ್ರಹ್ಮಚರ್ಯೆಯ ಮೂಲಕ ಸಂತಾನನಿರೋಧಮಾಡುವುದು ಉತ್ತಮವೆಂಬುದು ಇವರ ಅಭಿಮತ. ಬ್ರಹ್ಮಚರ್ಯೆಯು ಸಕಲರಿಗೂ ಸಾಧ್ಯವಿಲ್ಲ; ವಿಜ್ಞಾನಶಾಸ್ತ್ರದ ಸಹಾಯ ದಿಂದಲೇ ನಾವು ಸಂತಾನಗಳನ್ನು ಕಡಿಮೆಮಾಡಬೇಕೆಂಬುದಾಗಿ ಆಧುನಿಕ ರಲ್ಲಿ ಬಹುಮಂದಿ ವಾದಿಸುತ್ತಿರುವರು. ಅಂತು ಈ ಚಳುವಳಿಯು ವಾದ ಪ್ರಪಂಚವನ್ನು ಬಿಟ್ಟು ಇನ್ನೂ ಕಾರ್ಯರಂಗಕ್ಕೆ ಇಳಿದಿಲ್ಲ. ಆದರಲ್ಲಿಯೂ ಅಜ್ಞಾನಾಂಧಕಾರದಿಂದ ಆವರಿಸಲ್ಪಟ್ಟಿರುವ ನಮ್ಮ ರೈತರ ಸಮಾಜದಲ್ಲಿ ಈ ಅಭಿಪ್ರಾಯವು ಅಷ್ಟುಬೇಗ ಹರಡುವುದೂ ಇಲ್ಲ. ಆದುದರಿಂದ ನಮ್ಮ ಕೇಂದ್ರ ಸಮಸ್ಯೆಯ ಪರಿಹಾರಕ್ಕೆ ಈ ಮಾರ್ಗದಿಂದಲೂ ಸದ್ಯಃ ಪ್ರಯೋಜನವಿಲ್ಲ.

ಕಾರ್ಖಾನೆಗಳನ್ನು ಹೆಚ್ಚಿಸುವುದು, ಪರದೇಶಗಳಲ್ಲಿ ಸ್ವಾಸ್ಥ್ಯ ಗಳನ್ನು ನಿರ್ಮಿಸುವುದು, ಸಂತಾನನಿರೋಧಮಾರ್ಗಗಳನ್ನು ಆಚರಣೆಗೆ ತರುವುದು—ಇವು ಅವಶ್ಯಗಳೆಂಬುದರಲ್ಲಿ ಸಂದೇಹವಿಲ್ಲ. ಆದರೆ ಹಿಂದಿನ ವಿಮರ್ಶೆಯಿಂದ ಇವುಗಳಿಗೆ ಎಷ್ಟು ಅಡಚಣೆಗಳಿವೆ ಎಂಬುದನ್ನು ಮೊದಲೇ ತಿಳಿದಿರುವಿರಿ. ಈ ಮಾರ್ಗಗಳನ್ನು ನಮ್ಮ ಗುರಿಯಲ್ಲಿಟ್ಟುಕೊಂಡು, ಸಧ್ಯಃ ಮುಳುಗಿರುವ ರೈತರನ್ನು ಬದುಕಿಸಲು ಪ್ರಯತ್ನಿಸಬೇಕು; ಈಗಿರುವ ಸನ್ನಿವೇಶದಲ್ಲಿಯೇ ರೈತರ ಸಂಪಾದನೆಯನ್ನು ಸಾಧ್ಯವಾದಷ್ಟು ಹೆಚ್ಚಿಸ ಬೇಕು. ಇದಕ್ಕೆ ಎರಡು ಮಾರ್ಗಗಳುಂಟು: ಮೊದಲನೆಯದು, ರೈತರ ಮುಖ್ಯಾವಲಂಬನವಾದ ಬೇಸಾಯದಿಂದ ಹೆಚ್ಚು ಲಾಭಬರುವಂತೆ ಮಾಡುವುದು; ಎರಡನೆಯದು, ರೈತರ ವಿರಾಮಕಾಲವನ್ನು ಹಣವಾಗಿ ಪರಿವರ್ತನೆಮಾಡಲು ಅನುಕೂಲವಾದ ಉಪವೃತ್ತಿಗಳನ್ನು ಒದಗಿಸಿ ಕೊಡುವುದು.



# ೪. ರೈತರ ಮುಖ್ಯವೃತ್ತಿ

ನಮ್ಮ ದೇಶದಲ್ಲಿ ಸುಮಾರು ಹತ್ತುಸಾವಿರ ವರ್ಷಗಳಿಂದಲೂ ಜಮೀನಿನ ಕೃಷಿಯು ನಡೆಯುತ್ತಿದೆ. ಪಾಶ್ಚಾತ್ಯದೇಶದವರು ಕಾಡು ಮೃಗಗಳೊಡನೆ ಅವುಗಳಂತೆಯೇ ಜೀವಿಸುತ್ತಿದ್ದ ಕಾಲದಲ್ಲಿಯೇ ಸಿಂಧೂ ಗಂಗಾತೀರಗಳಲ್ಲಿ ಉತ್ತಮವಾದ ವ್ಯವಸಾಯವು ನಡೆಯುತ್ತಿದ್ದಿತೆಂಬು ದಕ್ಕೆ ನಮ್ಮ ದೇಶದ ಇತಿಹಾಸದಲ್ಲಿ ಆಧಾರವು ದೊರೆಯುವುದು. ಇಂದೂ ನಮ್ಮ ದೇಶವು ಬರಿಯ ಬೇಸಾಯಗಾರರ ದೇಶವೇ ಆಗಿರುವುದು. ನಮ್ಮ ಜನಗಳಲ್ಲಿ ನಾಲ್ಕನೆಯ ಮೂರು ಭಾಗ ಜನಗಳು ಆರಂಬದಿಂದಲೇ ಜೀವಿಸು ವರು. ಪ್ರತಿವರ್ಷವೂ ಅನೇಕ ಕೋಟಿ ಎಕರೆಗಳಷ್ಟು ಜಮೀನು ಕ್ರಯ ವಾಗುತ್ತಿದೆ. ಆದುದರಿಂದ ನಮ್ಮ ಮೇಧಾವಿಗಳು ತಮ್ಮ ಬುದ್ಧಿಶಕ್ತಿಯನ್ನೆಲ್ಲ ಈ ಮುಖ್ಯವೃತ್ತಿಯ ಅಭಿವೃದ್ಧಿಗಾಗಿ ಉಪಯೋಗಿಸಬೇಕಾದುದು ವಿಹಿತ.

ಆದರೂ ನಮ್ಮ ವ್ಯವಸಾಯಕ್ರಮದಷ್ಟು ಹಿಂದುಳಿದಿರುವ ವ್ಯವ ಸಾಯಕ್ರಮವು ಇನ್ನಾವ ದೇಶದಲ್ಲಿಯೂ ಇಲ್ಲ; ನಮ್ಮ ರೈತರು ತೆಗೆಯುವ ಬೆಳೆಗಿಂತಲೂ ಕಡಿಮೆಯಾದ ಬೆಳೆಯನ್ನು ಇನ್ನಾವದೇಶದ ರೈತನೂ ತೆಗೆಯುತ್ತಿಲ್ಲವೆನ್ನಬಹದು. ಕೋಟ್ಯಂತರ ಎಕರೆಗಳನ್ನು ಕೃಷಿಮಾಡುವ ನಮ್ಮ ನಾಡಿನಲ್ಲಿ ನಮ್ಮ ಜನಗಳಿಗೆ ಸಾಕಾಗುವಷ್ಟು ಆಹಾರ ಧಾನ್ಯಗಳು ಬೆಳೆಯುವುದಿಲ್ಲವೆಂದರೆ ನಾಚಿಕೆಗೇಡಲ್ಲವೆ! ನಮ್ಮ ಜನಗಳಿಗೆ ಪ್ರತಿ ವರ್ಷವೂ ಸುಮಾರು ಒಂಭತ್ತುಕೋಟಿ ಟನ್ನಿನಷ್ಟು ಆಹಾರಧಾನ್ಯಗಳು ಬೇಕಂತೆ. ಆದರೆ ಸರಾಸರಿ 20,30,00000 ಎಕರೆಗಳಲ್ಲಿ ನಮ್ಮ ರೈತರು ಆರೇಳುಕೋಟಿ ಟನ್ನಿನಷ್ಟು ದವಸವನ್ನು ಮಾತ್ರ ಬೆಳೆಯುವರು. ಅವರಲ್ಲಿ ಬೀಜ, ದನಗಳ ಆಹಾರ, ಪರದೇಶಗಳಿಗೆ ಕಳುಹಿಸುವ ಅಂಶ— ಇವುಗಳನ್ನು ಕಳೆದರೆ ನಮಗೆ ಉಳಿಯುವುದು ಸುಮಾರು ಐದುಕೋಟಿ

ಟನ್ನಿನಷ್ಟು ಮಾತ್ರ. ಇದರೊಡನೆ ಜರ್ಮಾದೇಶವನ್ನು ಹೋಲಿಸೋಣ. ಆ ದೇಶದಲ್ಲಿ ಜನಸಂಖ್ಯೆಯು ಅಪರಿಮಿತ; ಆದುದರಿಂದ ಪ್ರತಿಯೊಬ್ಬ ರೈತನ ಪಾಲಿಗೂ ಬರುವ ಜಮೀನು ನಮ್ಮ ದೇಶಕ್ಕಿಂತಲೂ ಕೊಂಚ. ಆದರೂ ಅಲ್ಲಿಯ ವ್ಯವಸಾಯಕ್ರಮವು ಅತ್ಯುತ್ತಮವಾಗಿರುವುದರಿಂದ ಅಲ್ಲಿಯ ರೈತರು ನಮ್ಮ ರೈತರಿಗಿಂತಲೂ ಸುಖಿಗಳಾಗಿರುವರು. ಅಲ್ಲಿಯ ಐದುಕೋಟಿ ಅರವತ್ತು ಲಕ್ಷ ಪ್ರಜೆಗಳು ಒಂದುಕೋಟಿ ಎಪ್ಪತ್ತುಲಕ್ಷ ಎಕರೆಗಳ ಬೇಸಾಯದಿಂದಲೇ ನಮಗಿಂತ ಮೇಲಾಗಿ ಜೀವಿಸುವರು.[2] ಚೈನಾದೇಶದ ರೈತರು ನಮಗಿಂತಲೂ ಬಹಳ ಹಳಬರು; ಸಂಪ್ರದಾಯ ಬದ್ಧರು; ಆದರೂ ವಿಜ್ಞಾನಶಾಸ್ತ್ರದ ಸಹಾಯವಿಲ್ಲದೆಯೆ ಬೇಸಾಯಮಾಡು ವವರಲ್ಲಿ ಅವರು ಬಹು ಗಟ್ಟಿಗರು.[3]

ಸರ್ ಎಂ. ವಿಶ್ವೇಶ್ವರಯ್ಯನವರು ನಮ್ಮ ಜಮೀನುಗಳ ಉತ್ಪತ್ತಿ ಯನ್ನು ಇತರ ದೇಶಗಳ ಜಮೀನಿನ ಉತ್ಪತ್ತಿಯೊಡನೆ ಹೋಲಿಸಲು ಅಕ್ಕಿ ಮತ್ತು ಗೋಧಿಗಳಿಗೆ ಅನ್ವಯವಾಗುವ ಈ ಕೆಳಗಿನ ಅಂಕಿಗಳನ್ನು ಹವಣಿಸಿರುವರು.[4] ನಮ್ಮ ದೇಶವು ಎಷ್ಟು ಹಿಂದುಳಿದಿದೆ ಎಂಬುದಕ್ಕೆ ಇದೊಂದು ಪ್ರಬಲವಾದ ನಿದರ್ಶನವಾಗಿದೆ.

**ಎಕರೆ ಒಂದಕ್ಕೆ ಉತ್ಪತ್ತಿ (ತೂಕದ ಪೌಂಡುಗಳು)**

| ದೇಶ. | ಭತ್ತ. | ಗೋಧಿ. |
|---|---|---|
| ಇಟಲಿ | 4601 | 1241 |
| ಜಪಾನ್ | 2767 | 1508 |
| ಈಜಿಪ್ಟ್ | 2356 | 1688 |
| ಸಂಯುಕ್ತರಾಷ್ಟ್ರ | 2112 | 973 |
| ಇಂಗ್ಲೆಂಡ್ | .... | 1812 |
| ಜರ್ಮನಿ | .... | 1740 |
| ಇಂಡಿಯ | 1357 | 652 |

ಇತರ ಬೆಳಸುಗಳಿಗೂ ಇದೇ ಬಗೆಯ ಅಂಕಿಗಳನ್ನು ಹವಣಿಸ ಬಹುದು. ಸಂಯುಕ್ತರಾಷ್ಟ್ರದಲ್ಲಿ ಒಂದು ಎಕರೆಗೆ 140 ಪೌಂಡು ಅರ ಳಿಯೂ ಈಜಿಪ್ಟಿನಲ್ಲಿ 352 ಪೌಂಡು ಅರಳಿಯೂ ಬೆಳೆದರೆ ಇಂಡಿಯದಲ್ಲಿ 98 ಪೌಂಡುಗಳು ಮಾತ್ರವಂತೆ ![5] ಈ ಸಂದರ್ಭದಲ್ಲಿ ವಿಶ್ವೇಶ್ವರಯ್ಯ ನವರು "ಬ್ರಿಟಿಷ್ ಇಂಡಿಯಾದಲ್ಲಿ ನೀರಾವರಿ ಸಾಗುವಳಿಯನ್ನು ಲೆಕ್ಕಕ್ಕೆ ತೆಗೆದುಕೊಂಡರೂ ಎಕರೆ ಒಂದಕ್ಕೆ ಇಪ್ಪತ್ತೈದು ರೂಪಾಯಿ ಗಳಿಗಿಂತ ಹೆಚ್ಚು ಸಂಪಾದನೆಯಿಲ್ಲ. ಜಪಾನಿನಲ್ಲಿ ಇದು ನೂರೈವತ್ತು ರೂಪಾಯಿಗಳಿಗೆ ಕಡಿಮೆಯಿಲ್ಲ.[6]" ಎಂದು ಹೇಳುತ್ತಾರೆ. ರಜನೀಕಾಂತ ದಾಸರವರು "ಇಂಡಿಯಾದೇಶದ ಬೇಸಾಯದ ಯೋಗ್ಯತೆಯು ಪಾಶ್ಚಾತ್ಯ ದೇಶಗಳ ಬೇಸಾಯದ ಯೋಗ್ಯತೆಯಲ್ಲಿ ಶೇಕಡ 50 ರಷ್ಟು ಮಾತ್ರ ವಿದೆ.[7]" ಎಂದು ಹೇಳುತ್ತಾರೆ.

ಮೇಲ್ಕಂಡ ವಿಮರ್ಶೆಯ ಉದ್ದೇಶವು ನಮ್ಮ ರೈತರ ಸಂಪಾದನೆ ಯನ್ನು ಹೆಚ್ಚುಮಾಡಲು ಅವಕಾಶವಿದೆಯೇ ಎಂಬುದನ್ನು ಚರ್ಚಿಸುವುದ ಕ್ಕಾಗಿ. ನಮ್ಮವರ ಬೇಸಾಯದ ಸಂಪಾದನೆಗೂ ಇತರ ದೇಶೀಯರ ಬೇಸಾಯದ ಸಂಪಾದನೆಗೂ ಇರುವ ಅಂತರವು ಈ ವಿಷಯದಲ್ಲಿ ನಮಗೆ ಒಂದು ಬಗೆಯ ಆಸೆಯನ್ನು ಕೊಡುವುದು. ರೈತರ ಮುಖ್ಯವಾದ ಕಸ ಬನ್ನು ಕ್ರಮಪಡಿಸಿದರೆ, ಅವರ ಬಡತನವನ್ನು ಬಹುಮಟ್ಟಿಗೆ ನಾವು ನೀಗಬಹುದು ಎಂಬುದೇ ಆ ಆಸೆ.

## ಬೇಸಾಯದ ಅಭಿವೃದ್ಧಿ[8]

ಒಂದು ಜಮಾನಿನಿಂದ ಎಷ್ಟು ಉತ್ತಮವಾದ ಬೆಳೆಯನ್ನು ತೆಗೆಯಬಹುದು ಎಂಬುದು ಮೂರು ನಾಲ್ಕು ಸನ್ನಿವೇಶಗಳನ್ನು ಅವಲಂ ಬಿಸಿದೆ. ಮೊತ್ತವಾಗಿ ಹೇಳಿದರೆ, 1. ಭೂಮಿಯ ಗುಣ. 2. ವಾಯು ಗುಣ. 3. ಇವುಗಳ ಮೇಲೆ ಮನುಷ್ಯನು ತನ್ನ ಅನುಭವದಿಂದಾಗಲಿ,

ಪ್ರಯೋಗಗಳ ಫಲಿತಾಂಶಗಳಿಂದಾಗಲಿ ಸಂಪಾದಿಸಿರುವ ಸ್ವಾಮ್ಯ. ಈ ಮೂರು ಅಂಶಗಳು ಜಮೀನಿನ ಬೆಳೆಯನ್ನು ನಿರ್ಣಯಿಸುವುವು.

**ಮಣ್ಣಿನ ಗುಣ**—ರೈತರು ನಮ್ಮ ದೇಶವಲ್ಲಿ ಸಿಕ್ಕುವ ನಾಲ್ಕಾರು ಜಾತಿಯ ಮಣ್ಣಿನಮಹಿಮೆಯನ್ನು ಸಾವಿರಾರು ವರ್ಷಗಳ ಅನುಭವದಿಂದ ಸ್ವಲ್ಪಮಟ್ಟಿಗೆ ತಿಳಿದುಕೊಂಡಿರುವರು; ಸಾಧ್ಯವಾದಮಟ್ಟಿಗೂ ಆಯಾ ಭೂಗುಣಕ್ಕೆ ತಕ್ಕ ಬೆಳೆಯನ್ನೇ ತೆಗೆಯುವರು. ಆದರೆ ಈ ಬರಿಯ ಅನುಭವವೇ ಸಾಲದು. ವೈಜ್ಞಾನಿಕರ ಸಹಾಯದಿಂದ ನಾನಾಭಾಗಗಳ ಭೂಮಿಯ ಮಣ್ಣನ್ನು ಪರೀಕ್ಷಿಸಿ, ಅವುಗಳ ಗುಣದೋಷಗಳನ್ನು ತಿಳಿದು ಕ್ರಮಪಡಿಸುವುದು ಲಾಭಕರ. ಏಕೆಂದರೆ ಸಸ್ಯಗಳ ಬೆಳವಳಿಕೆಗೆ ಆವಶ್ಯಕವಾದ ಆಹಾರಪದಾರ್ಥಗಳು ಒಂದೊಂದು ಬಗೆಯ ಮಣ್ಣಿನಲ್ಲಿ ಒಂದೊಂದು ಪ್ರಮಾಣದಲ್ಲಿರುವುವು. (ಆಗ್ರಿಕಲ್ಚರಲ್ ಕಮಿಷನ್ನಿನವರು ನಮ್ಮ ದೇಶದ ಮಣ್ಣನ್ನು ನಾಲ್ಕು ವಿಭಾಗವಾಗಿ ವಿಂಗಡಿಸಿ ಅವುಗಳ ಗುಣದೋಷಗಳನ್ನು ವಿಮರ್ಶಿಸಿರುವರು.[9]) ಈ ವಿಷಯವನ್ನರಿಯದೆ ಬೇಸಾಯಮಾಡಿದರೆ ರೋಗದ ಸ್ವರೂಪವನ್ನು ತಿಳಿಯದೆಯೇ ಔಷಧಿಯನ್ನು ಕೊಡುವ ವೈದ್ಯರಂತಾಗುವೆವು.

ಈ ಸಂದರ್ಭದಲ್ಲಿ ಒಂದುವಿಷಯವನ್ನು ನಾವು ಗಮನಿಸಬಹುದು. ಹಳ್ಳಿಗಳಿಗೆ ಹೋಗಿ, ರೈತರ ಯೋಗಕ್ಷೇಮವನ್ನು ವಿಚಾರಿಸಿದರೆ, ಅವರು ತಮ್ಮ ಬಡತನಕ್ಕೆ ಕಾರಣವಾಗಿ ನೆಲವನ್ನು ದೂಷಿಸುವುದುಂಟು. ಹಿಂದೆ ಬೆಳೆಯುತ್ತಿದ್ದಂತೆ ಇಂದು ಬೆಳೆಯದಿರುವುದಕ್ಕೆ ನೆಲವು ನಿಸ್ಸಾರವಾಗುತ್ತಿರುವುದೇ ಕಾರಣವೆಂದು ಅನೇಕರು ವಾದಿಸುವರು. ಮ|| ರಾ|| ಹವಾರ್ಡ್‌ರವರು ತಮ್ಮ ಪುಸ್ತಕದಲ್ಲಿ ಈ ವಿಷಯವನ್ನು ವಿಮರ್ಶಿಸುತ್ತಾ "ಇಂಡಿಯಾದೇಶದಲ್ಲಿ ರೈತರು ಬೆಳೆಯ ಮೂಲಕ ಎಷ್ಟು ಭೂಸಾರವನ್ನು ಸೆಳೆದುಕೊಳ್ಳುವರೋ ಅಷ್ಟೇ ಭೂಸಾರವನ್ನು ಪ್ರಕೃತಿಯು ಪ್ರತಿವರ್ಷವೂ ಭೂಮಿಗೆ ಒದಗಿಸುತ್ತಿದೆ. ಸಂಯುಕ್ತಪ್ರಾಂತದಲ್ಲಿ ನಡೆಯಿಸಿರುವ ಪ್ರಯೋ

ಗಗಳನ್ನು ನಂಬಬಹುದಾದರೆ, ಕಳೆದ ಮುನ್ನೂರು ವರ್ಷಗಳಿಂದಲೂ ಭೂಮಿಯ ಫಲವತ್ತು ಒಂದೇ ಸ್ಥಿತಿಯಲ್ಲಿದೆ.[10]" ಎಂದು ಹೇಳುತ್ತಾರೆ. ವೊಯಲ್ಕರ್, ಕ್ಲೈಸ್ಟನ್, ದತ್ತ ಮೊದಲಾದ ಮಹನೀಯರೂ ಇದೇ ಅಭಿಪ್ರಾಯವನ್ನು ಅನುಮೋದಿಸುತ್ತಾ "ನಮ್ಮ ನೆಲವು ದಿನೇ ದಿನೇ ನಿಸ್ಸಾರವಾಗುತ್ತಿರುವುದು ಸುಳ್ಳು; ಎಂದರೆ ಈಗಿರುವುದಕ್ಕಿಂತಲೂ ಹೆಚ್ಚು ನಿಸ್ಸಾರವಾಗುವುದಿಲ್ಲ." ಎಂದು ಅಭಿಪ್ರಾಯಪಡುತ್ತಾರೆ. ಅಗ್ರಿಕಲ್ಚರಲ್ ಕಮಿಷನ್ನಿನವರು ಇದೇ ಅಭಿಪ್ರಾಯಕ್ಕೆ ತಮ್ಮ ಒಪ್ಪಿಗೆಯನ್ನಿತ್ತಿರುವರು. ಆದರೆ ಮೈಸೂರು ವ್ಯವಸಾಯದ ಇಲಾಖೆಯ ಡೈರೆಕ್ಟರಾಗಿದ್ದ ಡಾಕ್ಟರ್ ಕೋಲ್‌ಮನ್‌ರವರು ಮಾತ್ರ, "ನಮ್ಮ ದೇಶದಲ್ಲಿ ಹೆಚ್ಚು ಉತ್ಪತ್ತಿಯನ್ನು ಕೊಡುವ ಜಾತಿಯ ಬೀಜಗಳನ್ನು ಹೆಚ್ಚುಹೆಚ್ಚಾಗಿ ಉಪಯೋಗಿಸಿದಷ್ಟೂ ತದನುಗುಣವಾದ ಗೊಬ್ಬರವನ್ನು ಭೂಮಿಗೆ ಹಾಕದಿದ್ದರೆ ಕೆಲವು ವರ್ಷಗಳಲ್ಲಿಯೇ ಭೂಮಿಯು ನಿಸ್ಸಾರವಾಗುವುದರಲ್ಲಿ ಸಂದೇಹವಿಲ್ಲ." ಎಂಬುದಾಗಿ ಎಚ್ಚರಿಕೆಯನ್ನಿತ್ತಿರುವರು.

**ಗೊಬ್ಬರ**—ನೆಲದ ಯೋಗ್ಯತೆಯನ್ನು ಬಹುಮಟ್ಟಿಗೆ ಮನುಷ್ಯನು ಬದಲಾಯಿಸಬಹುದು. ನಮ್ಮ ದೇಶದಲ್ಲಿ ಸಾವಿರಾರು ವರ್ಷಗಳಿಂದಲೂ ರೈತರು ಈ ವಿಷಯಕ್ಕೆ ತಮ್ಮ ಗಮನವನ್ನು ಕೊಟ್ಟಿರುವರು. ಗೊಬ್ಬರವೇ ತಮ್ಮ ದೇವರು ಎಂಬುದಾಗಿ ರೈತರು ನಂಬಿರುವರು. ಈಗಲೂ ರೈತರು ವ್ಯಾಪಾರಾದಿಗಳಲ್ಲಿ ಗೊಬ್ಬರವನ್ನು ಕೊಡುವುದು ವಾಡಿಕೆ. ಎಂದರೆ ಗೊಬ್ಬರಕ್ಕೆ ಅಷ್ಟು ಗೌರವವನ್ನು ಕೊಡುತ್ತಿರುವರು. ಗೊಬ್ಬರವಿಲ್ಲದೆ ಬೆಳೆಯನ್ನು ತೆಗೆಯಲು ನಮ್ಮವರು ಇಷ್ಟಪಡುವದಿಲ್ಲ.

ನಮ್ಮ ದೇಶದಲ್ಲಿ ಅತ್ಯುತ್ಕೃಷ್ಟವಾದ ಕೆಲವು ಗೊಬ್ಬರಗಳು ಉಪಯೋಗದಲ್ಲಿವೆ; ಅವುಗಳಲ್ಲೆಲ್ಲ ಬಹುಮುಖ್ಯವಾದುದು ದನದ ಗೊಬ್ಬರ. ಗೊಬ್ಬರಕ್ಕಾಗಿಯೇ ದನಗಳನ್ನು ಸಾಕುವುದು ಕೆಲವರಲ್ಲಿ ವಾಡಿಕೆಯಾಗಿದೆ. ಕುರಿ, ಮೇಕೆ—ಇವುಗಳ ಮಂದೆಯನ್ನು ಹೊಲಗಳಲ್ಲಿ ತಡೆಯಿಸು

ವುದೂ ಉಂಟು. ಕುರಿಯ ಗೊಬ್ಬರವು ಬಹು ಒಳ್ಳೆಯದೆಂಬುದು ರೈತರಿಗೆ ತಿಳಿದಿದೆ. ಇದಲ್ಲದೆ ಗದ್ದೆಗಳಲ್ಲಿ ಉದ್ದು, ಹೆಸರು, ಸಣಬು ಮೊದಲಾದ ಬೆಳೆಯನ್ನು ಗೊಬ್ಬರಕ್ಕಾಗಿಯೇ ಬೆಳೆಯುತ್ತಾರೆ. ಹೊಂಗೆಯ ಸೊಪ್ಪು ಮೊದಲಾದ ಹಸುರು ಗೊಬ್ಬರಗಳನ್ನೂ ಉಪಯೋಗಿಸುತ್ತಾರೆ. ಒಟ್ಟಿನಲ್ಲಿ ರೈತರಿಗೆ ಗೊಬ್ಬರದ ಆವಶ್ಯಕತೆಯನ್ನು ಬೋಧಿಸಬೇಕಾದುದಿಲ್ಲ.

ಆದರೆ ನಮ್ಮ ದೇಶದಲ್ಲಿ ಶ್ರಯವಾಗುತ್ತಿರುವ ಜಮೀನಿನ ಪ್ರಮಾಣಕ್ಕೆ ಬೇಕಾಗುವಷ್ಟು ಗೊಬ್ಬರವು ಶೇಖರಿಸಲ್ಪಡುತ್ತಾ ಇಲ್ಲ. ಭೂಮಿಗೆ ಸಾರಜನಕವನ್ನು ಹೆಚ್ಚಾಗಿ ಕೊಡುವ ಎಣ್ಣೆಯ ಬೀಜಗಳು, ಎಲುಬು ಮತ್ತು ಚರ್ಮ—ಇವು ಇತರ ದೇಶಗಳಿಗೆ ವಿಶೇಷವಾಗಿ ರಫ್ತಾಗುತ್ತಿವೆ; ದನದ ಸಗಣಿಯು ಬೆರಣಿಯಾಗಿ ಭಸ್ಮವಾಗುತ್ತಿದೆ; ನಮ್ಮ ಕಲ್ಲಿದ್ದಲು ಗಣಿಗಳಲ್ಲಿ ದೊರೆಯುತ್ತಿರುವ ಸಲ್ಫೇಟ್ ಆಫ್ ಅಮೋನಿಯಾ ಎಂಬ ಉತ್ತಮವಾದ ಗೊಬ್ಬರವು ಜಾವ ಮೊದಲಾದ ದೇಶಗಳಿಗೆ ರಫ್ತಾಗುತ್ತಿದೆ.[12] ಗೊಬ್ಬರವನ್ನು ಶೇಖರಿಸಿಡುವುದು, ಹೊಲಕ್ಕೆ ಉಪಯೋಗಿಸುವುದು—ಈ ಕಾರ್ಯಗಳಲ್ಲಿ ನಮ್ಮವರು ಅನುಸರಿಸುವ ಪದ್ಧತಿಯು ಗೊಬ್ಬರದ ಸಾರವನ್ನು ಬಹುವಾಗಿ ನಾಶಪಡಿಸುತ್ತಿದೆ. ಕೊಟ್ಟಿಗೆಯ ಕಸ, ಬೀದಿಯ ಕಸ ಮುಂತಾದುವನ್ನು ಮನೆಯ ಬಳಿಯಲ್ಲಿಯೇ ರಾಶಿಹಾಕಿ, ಮಳೆಗಾಲಕ್ಕೆ ಮೊದಲು ಹೊಲಗಳಿಗೆ ಸಾಗಿಸಿ, ಅಲ್ಲಿ ಪುನಃ ರಾಶಿಹಾಕುವುದೂ ಅನಂತರ ಚೆಲ್ಲುವುದೂ ವಾಡಿಕೆ. ಗೊಬ್ಬರವನ್ನು ಹೀಗೆ ಶೇಖರಿಸಿ ಉಪಯೋಗಿಸುವುದರಿಂದ ನಮಗೆ ಎರಡು ಬಗೆಯ ನಷ್ಟ: ಒಂದು, ಹಳ್ಳಿಯ ಆರೋಗ್ಯಕ್ಕೆ ಹಾನಿ; ಇನ್ನೊಂದು, ಹೊಲಗಳಿಗೆ ಸಾರವತ್ತಾದ ಗೊಬ್ಬರದ ಅಭಾವ. ಪಂಜಾಬಿನ ಹಳ್ಳಿಗಳ ವಿಷಯದಲ್ಲಿ ಬ್ರೇ಼ ಎಂಬವರು ಹೀಗೆ ಬರೆಯುತ್ತಾರೆ. "ಹಳ್ಳಿಗಳಿಗೆ ದಾರಿದಪ್ಪಿದರೆ, ಯಾವ ಕಡೆಯಿಂದ ಹೆಚ್ಚು ದುರ್ಗಂಧ ಬರವುದೆಂಬುದನ್ನು ಕಂಡುಹಿಡಿಯಿರಿ; ಅಲ್ಲಿಯೇ ಹಳ್ಳಿಗಳಿರಬೇಕು.[13]" ಕೊಟ್ಟಿಗೆಯ ಗೊಬ್ಬರಕ್ಕಿಂತ ಹೆಚ್ಚು ಸಾರವುಳ್ಳ

ಭರ್ಜಿಗೊಬ್ಬರವು ನಮ್ಮ ದೇಶದಲ್ಲಿ ವ್ಯರ್ಥವಾಗುತ್ತಿದೆ. ಅದನ್ನು ಮುಟ್ಟು ವುದು ಅಸ್ಪೃಶ್ಯರ ಕೆಲಸವೆಂಬ ನಂಬುಗೆಯು ನಮ್ಮ ರೈತರಲ್ಲಿ ಬಲವಾಗಿದೆ. ಇದರಿಂದ ನಮಗೆ ಆಗುವ ನಷ್ಟವು ಅಪರಿಮಿತವಾದುದು. ನಮ್ಮ ಹಳ್ಳಿ ಗಳಲ್ಲಿ ಎಲ್ಲಿನೋಡಿದರಲ್ಲಿ ಕಕ್ಕಸ; ಬೀದಿ, ಹಿತ್ತಿಲು, ಕೆರೆಯ ಅಂಗಳ— ಎಲ್ಲವೂ ಕಕ್ಕಸಗಳೇ. ಇದರಿಂದ ಹಳ್ಳಿಯ ಆರೋಗ್ಯ ಕೆಡುವುದೊಂದು; ಹೊಲಗದ್ದೆಗಳಲ್ಲಿ ಬೆಳೆಯು ಕಡಿಮೆಯಾಗುವುದು ಮತ್ತೊಂದು. ಅಂತು ಹಳ್ಳಿಗಳಿಗೆ ವಿಷವನ್ನೆರೆದು, ಹೊಲಗದ್ದೆಗಳಿಗೆ ಅಮೃತವನ್ನು ವಂಚಿಸಿ, ನಾವು ಅಧೋಗತಿಗಿಳಿಯುತ್ತಿರುವೆವು.[14]

ನಮ್ಮ ರೈತರ ಸಂಪಾದನೆಯು ಹೆಚ್ಚಾಗಬೇಕಾದರೆ, ಸಮಾಜ ನೇತೃಗಳು ಗೊಬ್ಬರದ ವಿಷಯದಲ್ಲಿ ಹೆಚ್ಚು ಗಮನವನ್ನು ಕೊಡಬೇಕು. ಹೆಚ್ಚು ಗೊಬ್ಬರಗಳನ್ನು ಒದಗಿಸಬೇಕು; ದೊರೆವ ಗೊಬ್ಬರದ ಸಾರವನ್ನು ಹೆಚ್ಚಿಸಬೇಕು; ಮೊಟ್ಟಮೊದಲು ಕೊಟ್ಟಿಗೆಯ ಗೊಬ್ಬರವನ್ನು ಸಿಕ್ಕಿದ ಕಡೆ ಬಿಸಾಡದಂತೆ ನೋಡಿಕೊಳ್ಳಬೇಕು. ಪಂಜಾಬಿನ ಗರ್ಗ್‌ ಡಿಸ್ಟ್ರಿಕ್ಟಿನಲ್ಲಿ ಬ್ರೇನ್‌ ಎಂಬುವರು ಕೆಲವು ಪ್ರಯೋಗಗಳನ್ನು ನಡೆಯಿಸಿದ್ದರು. ಅವರ ಸಲಹೆ ಯೇನಂದರೆ—“ಊರಿನಿಂದ ಹೊರಗೆ ಸ್ವಲ್ಪ ಸಮೀಪದಲ್ಲಿ ಪ್ರತಿಯೊಬ್ಬ ರೈತನೂ ಗೊಬ್ಬರಕ್ಕಾಗಿ ಆರು ಅಡಿ ಚದರ, ಆರು ಅಡಿ ಆಳವುಳ್ಳ ಗುಂಡಿ ಗಳನ್ನು ತೆಗೆದು, ಮನೆಯ ಕಸವನ್ನೆಲ್ಲಾ ಅಲ್ಲಿ ತುಂಬಬೇಕು. ಗುಂಡಿ ತುಂಬಿದ ಕೂಡಲೇ ಅದರ ಮೇಲೆ ಚೆನ್ನಾಗಿ ಮಣ್ಣು ಮುಚ್ಚಬೇಕು. ಆ ಗೊಬ್ಬರವು ಚೆನ್ನಾಗಿ ಕೊಳೆತು ಸಿದ್ಧವಾಗುವವರೆಗೂ ಬೇರೆ ಗುಂಡಿ ಯನ್ನು ಉಪಯೋಗಿಸುತ್ತಿರಬೇಕು. ಗುಂಡಿಗಳನ್ನು ರೈತರ ಕಣಜವೆಂದು ಭಾವಿಸಬೇಕು. ಕೊಳೆತಗೊಬ್ಬರಗಳನ್ನು ಹೊಲಗಳಿಗೆ ಹಾಕುವಾಗಲೂ ಎಚ್ಚರಬೇಕು. ಚೆಲ್ಲಿದಕೂಡಲೆ ಹೊಲವನ್ನು ಉತ್ತು, ಗೊಬ್ಬರವು ಮಣ್ಣಿ ನೊಡನೆ ಬೆರೆಯುವಂತೆ ಮಾಡಬೇಕು. ಹೀಗೆ ಮಾಡಿದರೆ, ಬೆಳೆಯು ಒಂದಕ್ಕೆ ಐದರಷ್ಟು ಉತ್ತಮವಾಗುವುದು.” ಎಂದು ಹೇಳುತ್ತಾರೆ.[15]

ಚೈನಾ ಮತ್ತು ಜಪಾನ್ ದೇಶದ ರೈತರು ಗೊಬ್ಬರಕ್ಕೆ ಕೊಡುವಷ್ಟು ಗಮನವನ್ನು ಇನ್ನಾವ ದೇಶದ ರೈತರೂ ಕೊಡುವುದಿಲ್ಲ. ಚೈನಾದೇಶದಲ್ಲಿ ಆಳವಾದ ಗುಂಡಿಗಳನ್ನು ತೋಡಿ, ಕಡ್ಡಿ, ಕಸ, ಸಗಣಿ, ಎಲೆ, ಸೊಪ್ಪು ಮೊದಲಾದುವನ್ನು ತುಂಬಿ, ಮೇಲೆ ಮಣ್ಣು ಮತ್ತು ಸಗಣಿಯನ್ನು ಹಾಕಿ ಮುಚ್ಚಿ, ಮಾಗಿ ಕೊಳೆತ ಗೊಬ್ಬರವನ್ನು ಮಾತ್ರ ಹೊಲಗಳಿಗೂ ಗದ್ದೆಗಳಿಗೂ ತೋಟಗಳಿಗೂ ಉಪಯೋಗಿಸುತ್ತಾರೆ.[16]

ನಮ್ಮ ಹಳ್ಳಿಗಳಿಗೆ ಸಮರ್ಪಕವಾದ ಕಕ್ಕಸಗಳನ್ನು ಒದಗಿಸುವುದು ನಮ್ಮ ಸಮಸ್ಯೆಗಳಲ್ಲೆಲ್ಲ ಬಹು ಮುಖ್ಯವಾದುದು. ಹಳ್ಳಿಗಳ ಅನಾರೋಗ್ಯಕ್ಕೆ ಇಂತಹ ಸಮರ್ಪಕವಾದ ಕಕ್ಕಸಗಳಿಲ್ಲದಿರುವುದೇ ಬಹು ಪ್ರಬಲವಾದ ಕಾರಣವಾಗಿದೆ. ಬ್ರೇನರವರ ಸಲಹೆಯು ಎಷ್ಟರಮಟ್ಟಿಗೆ ಬಳಕೆಗೆ ಬರಬಹುದೆಂಬುದನ್ನು ಹೇಳುವುದು ಕಷ್ಟ. ಗೊಬ್ಬರದ ಗುಂಡಿಗಳ ಸುತ್ತಲೂ ಬೇಲಿಯನ್ನೋ ಅಥವಾ ಗೋಡೆಯನ್ನೋ ಹಾಕಿ, ಗುಂಡಿಯ ಮೇಲೆ ಎರಡು ಹಲಗೆಗಳನ್ನು ಹಾಸಿ, ಅವುಗಳನ್ನೇ ಕಕ್ಕಸಗಳಾಗಿ ಉಪಯೋಗಿಸಿಕೊಳ್ಳಬೇಕೆಂಬುದು ಅವರ ಸಲಹೆ.[17] ಇದರಿಂದ ಹಳ್ಳಿಯೂ ಶುಚಿಯಾಗಿರುವುದು; ಗೊಬ್ಬರವೂ ಹೆಚ್ಚುವುದು; ಭರ್ಜಿ ಗೊಬ್ಬರದ ವಿಷಯದಲ್ಲಿ ರೈತರಿಗಿರುವ ಔದಾಸೀನ್ಯವೂ ತೊಲಗುವುದು. ನಗರಗಳ ಸಮೀಪದಲ್ಲಿರುವ ಹಳ್ಳಿಗಳಿಗೆ ಭರ್ಜಿಗೊಬ್ಬರವು ಬೇಕಾದಷ್ಟು ದೊರೆಯುವುದು. ಆದರೆ ಮುನಸಿಪಾಲಿಟಿಯ ಅಧಿಕಾರಿಗಳು ಆ ಗೊಬ್ಬರದ ಅಸಹ್ಯತೆಯನ್ನು ತೊಲಗಿಸಿ, ಅವುಗಳನ್ನು ವಾಸನೆಯಿಲ್ಲದ ಪುಡಿಗಳ ರೂಪದಲ್ಲಿ ರೈತರಿಗೆ ಒದಗಿಸಿಕೊಡಬೇಕು. ಈ ಸಂದರ್ಭದಲ್ಲಿ ಮೈಸೂರು ಮುನಿಸಿಪಾಲಿಟಿಯವರ ಮೇಲ್ಪಂಕ್ತಿಯು ಅನುಕರಣೀಯವಾಗಿದೆ. ಕೆಲವು ವರ್ಷಗಳ ಹಿಂದೆ ಸುಮ್ಮನೆ ವ್ಯರ್ಥವಾಗುತ್ತಿದ್ದ ಭರ್ಜಿಗೊಬ್ಬರವನ್ನು ಇಂದು ಗದ್ದೆಯ ಹಳ್ಳಿಗಳ ರೈತರು ಎಷ್ಟು ಉತ್ಸಾಹದಿಂದ ಒಯ್ಯುವರೆಂಬುದನ್ನು ನೋಡಿರಿ.

ಗೊಬ್ಬರಕ್ಕಾಗಿಯೇ ಬೆಳೆಯುವ ಬೆಳಸನ್ನು ಇನ್ನೂ ಹೆಚ್ಚು ಪ್ರಚಾರಕ್ಕೆ ತರಬೇಕಾದುದು ಆವಶ್ಯಕ. ಅಲ್ಲದೆ ಅತ್ಯುತ್ತಮವಾದ ಗೊಬ್ಬರವನ್ನು ಒದಗಿಸಿಕೊಡುವ ಹೊಂಗೆಯ ಗಿಡ ಮೊದಲಾದುವನ್ನು ವಿಶೇಷವಾಗಿ ಬೆಳೆಯಬೇಕು. ಎಣ್ಣೆಯ ಬೀಜಗಳನ್ನು ನಮ್ಮ ದೇಶ ದಲ್ಲಿಯೇ ಗಾಣವಾಡಿ ಹಿಂಡಿಯನ್ನು ಗೊಬ್ಬರಕ್ಕಾಗಿಯೂ ದನಗಳ ತಿಂಡಿ ಗಾಗಿಯೂ ಉಪಯೋಗಿಸಬೇಕು.

ಪಾಶ್ಚಾತ್ಯದೇಶಗಳಲ್ಲಿ ಕೃತಕವಾದ ಗೊಬ್ಬರಗಳನ್ನು ವಿಶೇಷವಾಗಿ ಉಪಯೋಗಿಸುತ್ತಾರೆ. ಆಯಾ ನೆಲದ ಯೋಗ್ಯತೆಯನ್ನು ಪರೀಕ್ಷಿಸಿ, ತದನುಗುಣವಾದ ಈ ಬಗೆಯ ಗೊಬ್ಬರವನ್ನು ಉಪಯೋಗಿಸುವುದು ಅಲ್ಲಿಯ ವಾಡಿಕೆ. ಕಾಲಕ್ರಮದಲ್ಲಿ ನಮ್ಮ ದೇಶದಲ್ಲಿಯೂ ಇದು ಹೆಚ್ಚಾಗಿ ಬಳಕೆಗೆ ಬರಬೇಕು. ಈಗಾಗಲೇ ಅನೇಕ ಪ್ರಯೋಗಗಳು ನಡೆದಿವೆ. ಆದರೆ ಹಳ್ಳಿಯ ರೈತರು ಇವುಗಳನ್ನು ಉಪಯೋಗಿಸುವುದಕ್ಕೆ ಎರಡು ಮೂರು ಪ್ರತಿಬಂಧಕಗಳಿವೆ. ಇವುಗಳಿಗೆ ಬೆಲೆಯೂ ಹೆಚ್ಚು; ವ್ಯವಸಾಯದ ಇಲಾಖೆಯವರೂ ಕೂಡ ಇವುಗಳ ಉಪಯೋಗದ ವಿಷಯ ದಲ್ಲಿ ಅಷ್ಟು ನಿರ್ದಿಷ್ಟವಾದ ಸಲಹೆಗಳನ್ನು ಕೊಡುತ್ತಾ ಇಲ್ಲ; ಎಂದರೆ ಇನ್ನೂ ಹೆಚ್ಚು ಪ್ರಯೋಗಗಳು ನಡೆಯಬೇಕಾಗಿವೆ.

ಒಟ್ಟಿನಲ್ಲಿ ರೈತನ ಸಂಪದಭಿವೃದ್ಧಿಯು ಅವನು ಉಪಯೋಗಿಸುವ ಗೊಬ್ಬರವನ್ನು ಹೆಚ್ಚಾಗಿ ಅವಲಂಬಿಸಿದೆ ಎಂದು ಖಂಡಿತವಾಗಿ ಹೇಳ ಬಹುದು. ಅಂದರೆ ಹಿಂದೆ ಹೇಳಿದಂತೆ ಮಣ್ಣಿನಲ್ಲಿರುವ ಸಹಜನ್ಯೂನತೆ ಗಳನ್ನು ಮನುಷ್ಯನು ಬಹುಮಟ್ಟಿಗೆ ತೊಲಗಿಸಬಹುದು.

**ಮಳೆ ಮತ್ತು ನೀರು**—ನಮ್ಮ ದೇಶದಲ್ಲಿ ಗೊಬ್ಬರವನ್ನು ವಿಶೇ ಷವಾಗಿ ಉಪಯೋಗಿಸುವುದರಲ್ಲಿ ಒಂದು ತೊಂದರೆಯುಂಟು. ಗೊಬ್ಬರವು ಹೆಚ್ಚಿದಷ್ಟೂ ನೀರು ಹೆಚ್ಚಾಗಿರಬೇಕು. ಹೆಚ್ಚು ಗೊಬ್ಬರವನ್ನು ಹಾಕ ದೆಯೇ ನೀರಿಗಾಗಿ ನಮ್ಮ ರೈತರು ಎಷ್ಟು ತೊಂದರೆಪಡುತ್ತಾರೆಂಬುದು

ಸರ್ವವಿದಿತವಾಗಿದೆ. ಹಳ್ಳಿಗಳಲ್ಲಿ ಪ್ರಥಮ ಸಂಭಾಷಣೆಯು ಮಳೆಯ ವಿಷಯವಾಗಿ. ಮಳೆ ಬರುತ್ತದೆಯೆ? ಎಂದು? ಎಷ್ಟು? ಎಂಬ ಪ್ರಶ್ನೆಗಳು ಪ್ರತಿಯೊಬ್ಬ ರೈತನ ಬಾಯಿಂದಲೂ ಬರುವುವು. ಈಗಿನ ಕಾಲದಲ್ಲಿಯೂ ಗ್ರಾಮಸಮಾಜದಲ್ಲಿ "ಮಳೆ ಅಯ್ನೋರಿಗೆ" ಪ್ರಮುಖಸ್ಥಾನವುಂಟು. ನಮ್ಮ ವಾಯುಗುಣದಲ್ಲಿರುವ ಮುಖ್ಯವಾದ ದೋಷವೇನೆಂದರೆ ಮಳೆಯು ಕಾಲಕಾಲಕ್ಕೆ ಸರಿಯಾಗಿ ಆಗದಿರುವುದು. ದೇಶದಲ್ಲೆಲ್ಲ ಸರಾಸರಿ 45 ಅಂಗುಲಗಳಷ್ಟು ಮಳೆಯು ಪ್ರತಿವರ್ಷವೂ ಬೀಳುವುದು ದಿಟ. ಆದರೆ ಕೆಲವು ಭಾಗಗಳಲ್ಲಿ ಅತಿವೃಷ್ಟಿಯೂ ಇನ್ನು ಕೆಲವು ಭಾಗಗಳಲ್ಲಿ ಅನಾವೃಷ್ಟಿಯೂ ಮತ್ತೆ ಕೆಲವೆಡೆ ಅಲ್ಪವೃಷ್ಟಿಯೂ ಆಗುವುವು. ಅದೂ ನಿಯತವಿಲ್ಲ; ಒಂದು ವರ್ಷದ ಮಳೆ ಇನ್ನೊಂದು ವರ್ಷ ನಡೆಯಿಸುವುದಿಲ್ಲ. ಅನೇಕ ಕಡೆ ಐದು ವರ್ಷಕ್ಕೊಮ್ಮೆ ಅತ್ಯಲ್ಪವೃಷ್ಟಿಯೂ, ಹತ್ತು ವರ್ಷಕ್ಕೊಮ್ಮೆ ಅನಾವೃಷ್ಟಿಯೂ ಆಗುತ್ತಿದೆ ಎಂಬುದಾಗಿ ಲೆಕ್ಕಗಳಿಂದ ಗೊತ್ತಾಗುವುದು.[18] ಬೀಳುವ ಮಳೆಯಲ್ಲಿ ಇನ್ನೊಂದು ಪ್ರಬಲವಾದ ದೋಷವಿದೆ. ಅದು ವರ್ಷದ ಮೂರು ನಾಲ್ಕು ತಿಂಗಳಲ್ಲಿಯೇ ವಿಶೇಷವಾಗಿ ಬೀಳುವುದು. ಮದರಾಸಿನ ದಕ್ಷಿಣತೀರದಲ್ಲಿ ವಿನಾ ಇತರ ಕಡೆ ಚಳಿಗಾಲದಲ್ಲಿ ಮಳೆಯೇ ಇಲ್ಲವೆನ್ನಬಹುದು. ಮಾರ್ಚಿ, ಏಪ್ರಿಲ್, ಮೇ ತಿಂಗಳುಗಳಲ್ಲಿ ಮಳೆ ಬಹಳ ಕಡಿಮೆ. ಒಟ್ಟಿನಲ್ಲಿ ರೈತರ ಬೇಸಾಯವನ್ನು "ಮಳೆಯೊಡನಾಡುವ ಜೂಜು" ಎಂದು ಕರೆಯಬಹುದು. ಮಳೆಯ ಪ್ರಾಮುಖ್ಯತೆಯು ಈ ಅಂಕಿಗಳಿಂದ[19] ನಮಗೆ ಸ್ಪಷ್ಟವಾಗುವುದು. 1934-35 ನೇ ಇಸವಿಯಲ್ಲಿ ಬ್ರಿಟಿಷ್ ಇಂಡಿಯಾದಲ್ಲಿ ಕ್ರಯವಾಗಿದ್ದ ಜಮೀನು 2270 ಲಕ್ಷ ಎಕರೆ. ಅದರಲ್ಲಿ 1760 ಲಕ್ಷ ಎಕರೆಗಳು ಮಳೆಯ ಆಶ್ರಯದಲ್ಲೇ ಇದ್ದ ಖುಷ್ಕಿ ವ್ಯವಸಾಯದವು.

ಸಾವಿರಾರು ವರ್ಷಗಳಿಂದಲೂ ವಾಯುಗುಣದಿಂದಾಗಿರುವ ಈ ತೊಂದರೆಯನ್ನು ನಿವಾರಣೆಮಾಡಿಕೊಳ್ಳುವುದಕ್ಕಾಗಿ ಭಾರತೀಯರು ಪಟ್ಟ

ರುವಷ್ಟು ಶ್ರಮವನ್ನು ಇನ್ನಾವ ಜನಾಂಗದವರೂ ಪಟ್ಟಿಲ್ಲವೆನ್ನಬಹುದು. ಸಾಮಾನ್ಯವಾಗಿ ಯಾವ ಹಳ್ಳಿಗೆ ಹೋದರೂ ಕೆರೆ ಕಟ್ಟೆ ಬಾವಿಗಳು ಕಣ್ಣಿಗೆ ಬೀಳುವುವು. ಸ್ವಲ್ಪಮಟ್ಟಿಗೆ ಹೊಳೆಯ ನೀರನ್ನು ಉಪಯೋಗಿಸಿ ಕೊಳ್ಳಲು ಪ್ರಯತ್ನವು ನಡೆದಿದ್ದಿತು. ಆದರೂ ಇಂದಿನ ಇಂಜನಿಯರುಗಳ ಸಹಾಯವು ದೊರಯುವವರೆಗೂ ನದಿಗಳ ಕಾಲುವೆಗಳು ಅಷ್ಟು ವಿಶೇಷ ವಾಗಿ ಪ್ರಚಾರಕ್ಕೆ ಬಂದಿರಲಿಲ್ಲ. ಇತ್ತೀಚೆಗೆ ಇಂತಹ ಕಾಲುವೆಗಳು ವಿಶೇಷವಾಗಿ ಹರಡುತ್ತಿವೆ. ಅದರಲ್ಲಿಯೂ ಪಂಜಾಬು ಮತ್ತು ಸಿಂಧು ದೇಶಗಳಲ್ಲಿ ಇವುಗಳ ಬೆಳವಣಿಗೆಯು ಸ್ತೋತ್ರಾರ್ಹವಾಗಿದೆ. ಇಂತಹ ನೀರಾವರಿ ಕೆಲಸಗಳ ಆಶ್ರಯದಿಂದ 1929-30 ರಲ್ಲಿ ಬ್ರಿಟಿಷ್ ಇಂಡಿಯಾ ದಲ್ಲಿ ಮಾತ್ರ 3 ಕೋಟಿ 17 ಲಕ್ಷ ಎಕರೆಗಳು ಬೇಸಾಯಮಾಡಲ್ಪಟ್ಟಿದ್ದುವು. ಇತರ ದೇಶಗಳೊಡನೆ ಹೋಲಿಸಿ ನೋಡಿದರೆ ನಮ್ಮ ದೇಶದಲ್ಲಿ ಸರ್ಕಾರ ದವರು ಈ ವಿಷಯಕ್ಕೆ ಎಷ್ಟು ಗಮನವನ್ನು ಕೊಡುತ್ತಿದಾರೆಂಬುದು ವಿದಿತವಾಗುವುದು.

### ನೀರಾವರಿ ಕೆಲಸಗಳ ಆಶ್ರಯದಲ್ಲಿರುವ ಜಮೀನುಗಳು[20]

| | | | |
|---|---|---|---|
| ಸಂಯುಕ್ತರಾಷ್ಟ್ರ | .... | 20000000 | ಎಕರೆಗಳು |
| ಜಪಾನ್ | .... | 7000000 | ,, |
| ಈಜಿಪ್ಟ್ | .... | 6000000 | ,, |
| ಮೆಕ್ಸಿಕೊ | .... | 5700000 | ,, |
| ಇಟಲಿ | .... | 4500000 | ,, |
| ಸ್ಪೇಯಿನ್ | .... | 3500000 | ,, |

ಬ್ರಿಟಿಷ್ ಸರ್ಕಾರದವರು ನಮ್ಮ ದೇಶದ ನೀರಾವರಿ ಕಾಲುವೆ ಗಳಿಗೆ ಕೊಟ್ಟಿರುವ ಗಮನವು ಪ್ರಸಿದ್ಧವಾಗಿದೆ. ಆದರೆ ನಮ್ಮ ದೇಶದ ಜನಸಂಖ್ಯೆಯಷ್ಟೂ ಬೇಸಾಯವಾಗುತ್ತಿರುವ ಜಮೀನಿನ ವಿಸ್ತಾರ

ವನ್ನೂ ಗಮನಿಸಿದರೆ, ಇಂತಹ ನೀರಾವರಿ ಕೆಲಸಗಳು ಇನ್ನೆಷ್ಟು ಹೆಚ್ಚ ಬೇಕೆಂಬುದು ನಮ್ಮ ಮನಸ್ಸಿಗೆ ಗೋಚರವಾಗುವುದು. ಹಿಂದೆಯೇ ಹೇಳಿರುವಂತೆ 1934–35 ರಲ್ಲಿ ಬ್ರಿಟಿಷ್ ಇಂಡಿಯದಲ್ಲಿ ಒಟ್ಟು ಕೃಷಿಯಾಗಿದ್ದ 2270 ಲಕ್ಷ ಎಕರೆಗಳಲ್ಲಿ ಎಲ್ಲಾ ವಿಧವಾದ ಜಲವಸತಿಯ ಆಶ್ರಯದಿಂದ ತರೀ ವ್ಯವಸಾಯ ಮಾಡಲ್ಪಟ್ಟಿದ್ದ ಜಮೀನು 570 ಲಕ್ಷ ಎಕರೆಗಳು. ಇವುಗಳಲ್ಲಿಯೂ ಸರ್ಕಾರಿ ಕಾಲುವೆಗಳ ಆಶ್ರಯವು 260 ಲಕ್ಷ ಎಕರೆಗಳಿಗೆ ಮಾತ್ರ. 130 ಲಕ್ಷ ಎಕರೆಗಳು ಬಾವಿಗಳ ಆಶ್ರಯದಿಂದಲೂ 60 ಲಕ್ಷ ಎಕರೆಗಳು ಕೆರೆಗಳ ಆಶ್ರಯದಿಂದಲೂ 60 ಲಕ್ಷ ಎಕರೆಗಳು ಇತರ ಜಲಾಶಯಗಳ ಆಶ್ರಯದಿಂದಲೂ ಕೃಷಿಯಾಗಿದ್ದುವು.[21] ಸರ್ಕಾರಿ ನಾಲೆಗಳಲ್ಲಿ ನಿರ್ದಿಷ್ಟವಾಗಿ ನೀರು ಒದಗುವಂತೆ ಇತರ ವಿಧವಾದ ಜಲಾಶಯಗಳಿಂದ ಒದಗುವುದಿಲ್ಲವೆಂಬುದು ಎಲ್ಲಾ ರೈತರ ಅನುಭವಕ್ಕೂ ಬಂದಿರುವುದು. ಬಾವಿಗಳೂ ಕೆರೆಗಳೂ ಅನೇಕ ಕಾಲದಲ್ಲಿ ರೈತರಿಗೆ ಕೈಕೊಡುವುವು. ಬ್ರಿಟಿಷ್ ಇಂಡಿಯಕ್ಕಿಂತ ಮೈಸೂರು ದೇಶದಲ್ಲಿ ಈ ಕೆರೆ ಬಾವಿಗಳ ಆಶ್ರಯವೇ ಹೆಚ್ಚು. ಕಳೆದ 25 ವರ್ಷಗಳಿಂದೀಚೆಗೆ ಅನೇಕ ಹೊಸಜಲಾಶಯಗಳ ನಿರ್ಮಾಣವಾಗುತ್ತಿವೆ. ಕಳೆದ ಹತ್ತುವರ್ಷಗಳಲ್ಲಿಯೇ ಅನುಪಯುಕ್ತವಾಗಿದ್ದ 1,15,800 ಎಕರೆಗಳಿಗೆ ಸರ್ಕಾರಿ ಕಾಲುವೆಗಳ ಮೂಲಕ ನೀರನ್ನು ಒದಗಿಸುವ ಏರ್ಪಾಡಾಗಿದೆ.[22] ಇದು ಸಂತೋಷಕರವಾದುದು. ಆದರೆ ನಮ್ಮ ದೇಶದ ಅನೇಕ ಕೆರೆಗಳು ಹೂಳಿಹೋಗುತ್ತಿವೆ; ಇನ್ನು ಕೆಲವು ಕೆರೆಗಳು ಹೆಚ್ಚು ನೀರನ್ನು ಹಿಡಿಸಲಾರವು. ಇಂತಹ ಕೆರೆಗಳ ಕೆಳಗೆ ಬೆಳೆಯು ಕಾಲದಲ್ಲಿ ನೀರಿಲ್ಲದೆ ಕೆಡುವುದು. ಅನೇಕವೇಳೆ ಒಂದು ಹದ ನೀರು ದೊರೆಯದೆ ಕೈಗೆ ಬಂದ ತುತ್ತು ಬಾಯಿಗೆಬಾರದೆ ಹೋಗುವುದುಂಟು. ನಮ್ಮ ಸರ್ಕಾರದವರು ಮುಖ್ಯವಾದ ಅನೇಕ ಕೆರೆಗಳನ್ನು ಪದೇ ಪದೇ ರಿಪೇರಿ ಮಾಡಿಸುತ್ತಿರುವರು. ಆದರೆ ಸರ್ಕಾರದ ಶಕ್ತಿಗೂ ಒಂದು ಪರಿಮಿತಿಯುಂಟು. ಪೂರ್ವಕಾಲದಲ್ಲಿ ಪ್ರತಿ

ಯೊಂದು ಹಳ್ಳಿಯವರೂ ತಮ್ಮ ಕೆರೆಯನ್ನು ವರ್ಷಂಪ್ರತಿ ಬೇಸಗೆಯಲ್ಲಿ ರಿಪೇರಿ ಮಾಡುವ ಪದ್ಧತಿಯಿತ್ತು. ಇದರಿಂದ ಅವರಿಗೆ ಎರಡುಬಗೆಯ ಲಾಭ ದೊರೆಯುತ್ತಿತ್ತು. ಕೆರೆಯ ಮೆಕ್ಕಲುಮಣ್ಣು ಅವರ ಹೊಲಗದ್ದೆ ಗಳಿಗೆ ಉತ್ತಮವಾದ ಗೊಬ್ಬರವಾಗುತ್ತಿದ್ದಿತು; ಕೆರೆಯೂ ಉತ್ತಮ ಸ್ಥಿತಿಯಲ್ಲಿರುತ್ತಿತು. ರೈತರಿಗೆ ಸರ್ಕಾರದವರ ಅವಲಂಬನವು ಹೆಚ್ಚುತ್ತಾ ಬಂದಂತೆಲ್ಲ ಸ್ವಾವಲಂಬನೆಯು ಹಿಂಜರಿಯುತ್ತಾ ಇದೆ. ನಮ್ಮ ನಾಡಿನ ಸಾವಿರಾರು ಕೆರೆಗಳನ್ನು ಕಟ್ಟಿಸಿದವರು ನಮ್ಮ ಪೂರ್ವಿಕರೇ. ಅವರ ಸಂತತಿಯವರಾದ ನಾವು ಹೊಸಕೆರೆಗಳನ್ನೇನಾದರೂ ಕಟ್ಟಿಸಿರುವೆವೆ? ಇರುವ ಕೆರೆಗಳನ್ನಾದರೂ ತಕ್ಕ ಸ್ಥಿತಿಯಲ್ಲಿ ಇಡಲಾರದಿದ್ದರೆ ಅದು ನಾಚಿಕೆ ಗೇಡಲ್ಲವೆ? ಅಂತು, ಸ್ವಾವಲಂಬನೆಯಿಲ್ಲದಿದ್ದರೆ ನಮ್ಮ ಉದ್ಧಾರವಿಲ್ಲ.

ನೀರಿನ ವಸತಿಯನ್ನು ಹೆಚ್ಚುಮಾಡಿಕೊಳ್ಳಲು ಕೆರೆಯ ಹಿಂಬಾಗ ದಲ್ಲಿ ಬಾವಿಗಳನ್ನು ತೆಗೆಯಿಸುವುದು ಆವಶ್ಯಕವೆಂದು ಡಾಕ್ಟರ್ ಕೋಲ್ಮನ್ ರವರು, ಅಗ್ರಿಕಲ್ಚರಲ್ ಕಮಿಷನ್ನಿನವರ ವರದಿಯನ್ನು ವಿಮರ್ಶೆಮಾ ಡುತ್ತಾ ಬರೆದಿರುವರು. ನೀರನ್ನು ಮಿತವಾಗಿ ಉಪಯೋಗಿಸುವುದು ಮುಖ್ಯವೂ ಕ್ಷೇಮಕರವೂ ಹೌದು. ಹಿಂದೆ ಇರಿಗೇಷನ್ ಕಮಿಷನ್‌ರವರು ಈ ವಿಷಯವನ್ನು ವಿಮರ್ಶಿಸುತ್ತಾ "ರೈತರಿಗೆ ಜಮೀನಿನ **ಆಕಾರದ** (ಕಂದಾಯ) ಮೇಲೆ ನೀರುದೆರಿಗೆಯನ್ನು ಹಾಕುವುದಕ್ಕಿಂತಲೂ ಅವರು ಉಪಯೋಗಿಸುವ ನೀರಿನ ಅಳತೆಯನ್ನನುಸರಿಸಿ ತೆರಿಗೆ ಹಾಕುವುದು ಸರಿ. ಆದರೆ ಇದು ಇಂಡಿಯಾದೇಶದ ಈಗಿನ ಸ್ಥಿತಿಯಲ್ಲಿ ಅಸಾಧ್ಯ." ಎಂದು ಬರೆದಿದ್ದರು. ಆದರೆ ಅಗ್ರಿಕಲ್ಚರಲ್ ಕಮಿಷನ್ನಿನವರು ನೀರಿನ ಅಳತೆಯ ಪ್ರಕಾರ ತೆರಿಗೆ ಹಾಕುವ ಪದ್ಧತಿಯನ್ನು ಪ್ರಯೋಗ ಮಾಡಬೇಕೆಂದು ಸಲಹೆ ಕೊಟ್ಟಿರುವರು.[28] ಅಲ್ಲದೆ ಅತಿಯಾಗಿ ನೀರು ಹಾಯಿಸುವುದರಿಂದ ಭೂಮಿಯ ಸಾರವು ಕೆಡುವುದೆಂಬುದನ್ನು ರೈತರೂ ಅರಿಯಬೇಕು.

**ಬೀಜಗಳು**—ಹೀಗೆ ರೈತನು ತನ್ನ ಬುದ್ಧಿಯನ್ನು ಉಪಯೋ ಗಿಸಿ ಭೂಮಿಯ ಫಲವತ್ತು, ನೀರಿನ ಸರಪರಾಜು—ಇವನ್ನು ಸಮರ್ಪಕ

ವಾಗಿರುವಂತೆ ಏರ್ಪಾಡು ಮಾಡಿಕೊಳ್ಳಬಹುದು; ಆದರೆ ಹೆಚ್ಚು ಲಾಭಕರವಾದ ಬೆಳೆಯನ್ನು ಬೆಳೆಯದೆ ಕೀಳಾದ ಬೆಳೆಯನ್ನೇ ಬೆಳೆಯುತ್ತ ಬಂದರೆ ಅವನ ಕಷ್ಟಕ್ಕೆ ತಕ್ಕ ಫಲವು ದೊರೆವುದಿಲ್ಲ. ಆದುದರಿಂದ ಮುಂದಿನ ಪ್ರಶ್ನೆಯು ಅವನು ಬೆಳೆಯುವ ಧಾನ್ಯಕ್ಕೆ ಸಂಬಂಧಪಟ್ಟುದು. ಈ ಸಂದರ್ಭದಲ್ಲಿ ಒಂದೆರಡು ವಿಷಯಗಳನ್ನು ಗಮನಿಸಬೇಕಾಗಿದೆ. ಯಾವ ಬೆಳೆಯನ್ನು ಬೆಳೆದರೆ ತನಗೆ ಹೆಚ್ಚು ಗಿರಾಕಿಗಳು ಸಿಕ್ಕುವರು ಎಂಬುದನ್ನರಿತೇ ರೈತನು ಅಂತಹ ಬೆಳೆಯನ್ನು ಮಾಡಬೇಕು. ಸಾಮಾನ್ಯವಾಗಿ ಕಬ್ಬು, ಅರಳೆ, ಎಣ್ಣೆಯಬೀಜಗಳು, ಹಣ್ಣುಹಂಪಲು, ಮೆಣಸಿನಕಾಯಿ, ಹೊಗೆಯಸೊಪ್ಪು—ಇವು ಹೆಚ್ಚು ಹಣವನ್ನು ಕೊಡುವ ಬೆಳೆಗಳು.

ಯಾವ ಬೆಳೆಯನ್ನೇ ಬೆಳೆಯಲಿ ಕೀಳಾದ ಬೀಜಗಳನ್ನು ಬಿತ್ತಿದರೆ ಪ್ರಯೋಜನವಿಲ್ಲ.[24] ಇಂಡಿಯಾದೇಶದ ಎಲ್ಲಾ ಪ್ರಾಂತಗಳಲ್ಲಿಯೂ ವ್ಯವಸಾಯದ ಇಲಾಖೆಯವರು ಪ್ರಯೋಗಗಳಿಂದ ಉತ್ತಮ ಜಾತಿಯ ಅನೇಕಬಗೆಯ ಬೀಜಗಳನ್ನು ಕಂಡುಹಿಡಿದಿರುವರು. ಇವು ಲಾಭಕರಗಳೆಂಬುದು ರೈತರಿಗೆ ಗೊತ್ತಾಗಬೇಕು; ಇಂತಹ ಬೀಜಗಳು ಸುಲಭವಾದ ಬೆಲೆಗೆ ದೊರೆಯಬೇಕು. ಅಂದು ನಮ್ಮ ದೇಶದ ಬೇಸಾಯವು ಉತ್ತಮಸ್ಥಿತಿಗೆ ಬರುವುದರಲ್ಲಿ ಅಡ್ಡಿಯಿಲ್ಲ. ಪಾಶ್ಚಾತ್ಯದೇಶಗಳಲ್ಲಿ ಉತ್ತಮವಾದ ಬೀಜಗಳನ್ನು ಮಾರಲೋಸುಗವೇ ಪ್ರತ್ಯೇಕವಾದ ವರ್ತಕರಿರುವರು. ಅವರು ಹೊಸಹೊಸದಾದ ಮತ್ತು ಹೆಚ್ಚುಹೆಚ್ಚು ಲಾಭಕರವಾದ ಬೀಜಗಳನ್ನು ಕಂಡುಹಿಡಿಯುತ್ತಲೇ ಇರುವರು. ನಮ್ಮ ದೇಶವಲ್ಲಿ ಅಂತಹ ಸೌಕರ್ಯಗಳಿಲ್ಲ. ಇಂದಿನವರೆಗೂ ಹೊಸಬೀಜಗಳನ್ನು ಕಂಡುಹಿಡಿಯುವ ಭಾರದ ಜೊತೆಗೆ, ಅವುಗಳನ್ನು ಪ್ರಚಾರಕ್ಕೆ ತರುವ ಭಾರವೂ ವ್ಯವಸಾಯದ ಇಲಾಖೆಯವರ ಮೇಲೆಯೇ ಬಿದ್ದಿದೆ. ಕೆಲವು ಪರಸ್ಪರ ಸಹಾಯ ಸಂಘಗಳೂ ಈ ಕೆಲಸದಲ್ಲಿ ಸ್ವಲ್ಪಮಟ್ಟಿಗೆ ಸಹಾಯಮಾಡುತ್ತಿವೆ. ಈ ಪರಸ್ಪರ ಸಹಾಯಕಸಂಘಗಳಿಂದ ರೈತರಿಗೆ ನಿಜವಾಗಿಯೂ ಸಹಾಯವಾಗ

ಬೇಕೆಂಬ ಅಭಿಲಾಷೆಯಿದ್ದರೆ, ಅವು ಇಂತಹ ಉತ್ತಮವರ್ಗದ ಬೀಜಗಳನ್ನು ಒದಗಿಸಿಕೊಡಬೇಕು. ಒಂದು ಎಚ್ಚರಿಕೆಯನ್ನು ನಾವು ಮರೆಯಬಾರದು. ಹೊಸಬೀಜಗಳನ್ನು ಪ್ರಚಾರಕ್ಕೆ ತರುವುದಕ್ಕಿಂತ ಮುಂಚೆ ಶಾಸ್ತ್ರಜ್ಞರು ಅವುಗಳನ್ನು ಚೆನ್ನಾಗಿ ಪರೀಕ್ಷಿಸಲೇ ಬೇಕು. ರೈತರಲ್ಲಿ ಪ್ರಚಾರಕ್ಕೆ ಬಂದಮೇಲೆ ಅಂತಹ ಬೀಜಗಳಿಂದ ಉತ್ತಮಫಲವು ದೊರೆಯದಿದ್ದರೆ ವ್ಯವಸಾಯದ ಇಲಾಖೆಯವರ ಇತರ ಸಲಹೆಗಳಲ್ಲಿಯೂ ರೈತರಿಗೆ ನಂಬುಗೆ ತಪ್ಪುವುದು.

**ಬೇಸಾಯದ ಉಪಕರಣಗಳು**—ನಮ್ಮ ರೈತರು ಸಾವಿರಾರು ವರ್ಷಗಳ ಅನುಭವದಿಂದ ಉತ್ತಮವರ್ಗದ ಬೇಸಾಯಗಾರರಾಗಿಯೇ ಇರುವರೆಂದು ಹೇಳಬಹುದು. ಆದರೆ ಅವರ ವ್ಯವಸಾಯಕ್ರಮವು ಸಂಪ್ರದಾಯಬದ್ಧವಾಗಿರುವುದರಿಂದಲೂ ಇತರ ದೇಶಗಳಲ್ಲಿ ಆಗುತ್ತಿರುವ ಮಾರ್ಪಾಡು ಅವರ ಗಮನಕ್ಕೆ ಬಾರದಿರುವುದರಿಂದಲೂ ಪಾಶ್ಚಾತ್ಯ ಮತ್ತು ಪೌರಸ್ತ್ಯದೇಶಗಳ ರೈತರ ಬೇಸಾಯಕ್ರಮದೊಡನೆ ಹೋಲಿಸಿ ನೋಡಿದರೆ ನಮ್ಮ ರೈತರು ಎಷ್ಟು ಹಿಂದುಳಿದಿರುವರೆಂಬುದು ವಿದಿತವಾಗುವುದು. ಕಳೆದ ಮಹಾಸಂಗ್ರಾಮವು ಪಾಶ್ಚಾತ್ಯರಾಷ್ಟ್ರಗಳಿಗೆ ಬೇಸಾಯದ ಆವಶ್ಯಕತೆಯನ್ನು ಮನದಟ್ಟುವಂತೆ ಮಾಡಿತು. ಅದರ ಫಲವಾಗಿ ಬೇಸಾಯದಲ್ಲಿ ಯಂತ್ರಗಳ ಉಪಯೋಗವು ಹೆಚ್ಚುತ್ತಿದೆ. ಅಮೇರಿಕದ ಸಂಯುಕ್ತರಾಷ್ಟ್ರದಲ್ಲಿ ಟ್ರಾಕ್‌ಟರ್ಸ್, ಹಾರ್ವೆಸ್ಟರ್ಸ್, ಕಂಬೈನ್ ಮೊದಲಾದ ಯಂತ್ರಗಳು ಬಹುಮಟ್ಟಿಗೆ ಪ್ರಚಾರಕ್ಕೆಬಂದಿವೆ. ಎಲ್ಲ ವಿಧದಲ್ಲಿಯೂ ಬಹು ಹಿಂದೆ ಬಿದ್ದಿದ್ದ ರಷ್ಯಾದೇಶದಲ್ಲಿಯೂ ಇಂತಹ ಯಂತ್ರಗಳು ವಿಶೇಷವಾಗಿ ಪ್ರಬಲವಾಗುತ್ತಿವೆ; ಇವುಗಳ ಸಹಾಯದಿಂದ ಅತ್ಯುತ್ತಮವಾದ ವ್ಯವಸಾಯವು ನಡೆಯುತ್ತಿದೆ.[25]

ನಮ್ಮ ನಾಡಿನಲ್ಲಾದರೋ ಈ ಯಂತ್ರ ಯುಗದಲ್ಲಿಯೂ ಕೂಡ ಭಾರವಿಲ್ಲದ ಮರದ ನೇಗಿಲು, ಕುಂಟೆ, ಹಲುಬೆ ಇವುಗಳೇ ವಾಡಿಕೆಯ

ಲ್ಲಿವೆ. ಇವುಗಳಿಂದ ಒಂದು ಪ್ರಯೋಜನವುಂಟು: ರೈತರಿಗೆ ಇವುಗಳಿಗಾಗಿ ಹೆಚ್ಚು ಬಂಡವಾಳವು ಬೇಕಾಗುವುದಿಲ್ಲ; ಮತ್ತು ಇವುಗಳನ್ನು ಸರಿಪಡಿಸಲು ರೈತರೋ ಹಳ್ಳಿಯ ಬಡಗಿಗಳೋ ಸಾಕು. ಆದರೆ ಇಂತಹ ಒರಟಾದ ಉಪಕರಣಗಳ ಬಳಕೆಯು ನಮ್ಮ ದೇಶಕ್ಕೆ ಹೆಚ್ಚು ಹಾನಿಯನ್ನುಂಟು ಮಾಡುತ್ತಿದೆ. ರೈತರ ಬಡತನಕ್ಕೆ ಇವು ಪ್ರಬಲವಾದ ಕಾರಣಗಳಾಗಿವೆ.

ಸರ್ ಎಂ. ವಿಶ್ವೇಶ್ವರಯ್ಯನವರು, ನಮ್ಮ ದೇಶದ ಬೇಸಾಯವು ಉತ್ತಮವಾಗಬೇಕಾದರೆ, ಯಂತ್ರಗಳ ಉಪಯೋಗವು ಅತ್ಯಾವಶ್ಯಕವೆಂಬುದಾಗಿ ಅನೇಕವೇಳೆ ಹೇಳಿರುವರು. ಒಂದೆರಡು ಕಷ್ಟವನ್ನು ಮಾತ್ರ ನಾವು ನೆನಪಿನಲ್ಲಿಡಬೇಕು. ನಮ್ಮ ರೈತರ ಜಮೀನುಗಳು ಸಣ್ಣ ಸಣ್ಣ ತಾಕುಗಳಾಗಿ ಊರಿನ ನಾನಾಕಡೆಯೂ ಚದುರಿವೆ.[26] ಅಲ್ಲದೆ ರೈತರು ಕಡು ಬಡವರು; ಯಂತ್ರಗಳನ್ನು ಕೊಳ್ಳಲಾರರು. ರೈತರಿಗಾಗಲಿ ಅಥವಾ ಅವರ ಇಂಜನೀಯರಾದ ಹಳ್ಳಿಯ ಬಡಗಿಗಾಗಲಿ ಇಂತಹ ಉಪಕರಣಗಳನ್ನು ಸರಿಪಡಿಸುವುದು ಅಸಾಧ್ಯ. ಮತ್ತು ಇಂತಹ ಯಂತ್ರಗಳಿಗೆ ಬೇಕಾಗುವ "ಗ್ಯಾಸೊಲೀನ್" ಮೊದಲಾದುವುಗಳ ಬೆಲೆಯು ಬಹುಹೆಚ್ಚು. ಇಷ್ಟು ಉತ್ಕೃಷ್ಟವಾದ ಉಪಕರಣಗಳನ್ನು ಉಪಯೋಗಿಸಿ ನೀರಿನ ಸರಪರಾಜು ಸಾಲದಿದ್ದಲ್ಲಿ ಪ್ರಯೋಜನವೇನು ? ಇದೆಲ್ಲವನ್ನೂ ವಿಮರ್ಶಿಸಿ ಡಾಕ್ಟರ್ ಕೋಲ್ಮನ್‌ರವರು ಮೈಸೂರು ದೇಶದಲ್ಲಿ ಟ್ರಾಕ್ಟರುಗಳ ಉಪಯೋಗವು ಅಷ್ಟು ಪ್ರಕೃತವಿಲ್ಲವೆಂದು ಬರೆಯುತ್ತಾರೆ.[27]

ಸದ್ಯದಲ್ಲಿ ಇಂತಹ ಯಂತ್ರಗಳ ಮಾತನ್ನು ಬಿಟ್ಟು ಅನೇಕ ಪ್ರಾಂತಗಳಲ್ಲಿ ವ್ಯವಸಾಯದ ಇಲಾಖೆಯವರು ಪ್ರಯೋಗಗಳ ಮೂಲಕ ರಚಿಸಿರುವ ಕಬ್ಬಿಣದ ನೇಗಿಲು, ಕುಂಟೆ ಮೊದಲಾದ ಹೊಸ ಉಪಕರಣಗಳನ್ನು ಬಳಕೆಗೆ ತರುವುದು ಮುಖ್ಯ. ಈಗಾಗಲೇ ಮೈಸೂರು ದೇಶದ ಕೆಲವೆಡೆಗಳಲ್ಲಿ ಇಂತಹ ಉಪಕರಣಗಳು ಪ್ರಚಾರಕ್ಕೆ ಬರುತ್ತಿವೆ. ಇವುಗಳಲ್ಲಿ ಸವೆದುಹೋಗುವ ಭಾಗಗಳನ್ನು ಪ್ರತ್ಯೇಕವಾಗಿ ಕೊಳ್ಳಬಹುದಾ

ದಃದರಿಂದ ಹಳ್ಳಿಯ ಬಡಗಿಗಳು ಸ್ವಲ್ಪ ಶ್ರಮವನ್ನು ತೆಗೆದುಕೊಂಡರೆ ಇವುಗಳನ್ನು ಸರಿಪಡಿಸಬಹುದು.

**ದನಕರುಗಳು**—ಇಂತಹ ಉತ್ತಮವಾದ ಉಪಕರಣಗಳ ಪ್ರಚಾರಕ್ಕೆ ಇನ್ನೊಂದು ದೊಡ್ಡ ಅಡ್ಡಿಯುಂಟು. ಪಾಶ್ಚಾತ್ಯದೇಶಗಳಲ್ಲಿ ಯಂತ್ರಗಳನ್ನಾಗಲಿ ಬಲಿಷ್ಠವಾದ ಕುದುರೆಗಳನ್ನಾಗಲಿ, ರೈತರು ಉಪಯೋಗಿಸುತ್ತಿರುವರಷ್ಟೆ! ನಮ್ಮ ದೇಶವಲ್ಲಾದರೋ ಬಹುಕಾಲದಿಂದ ನೇಗಿಲಿಗೂ ಗಾಣಕ್ಕೂ ನೀರೆತ್ತುವುದಕ್ಕೂ ದನಗಳೇ ಸಹಾಯಮಾಡಿವೆ. ಹಳ್ಳಿಗಳ ಪ್ರವಾಸದಿಂದ ಈ ವಿಷಯವು ಮನದಟ್ಟಾಗುವುದು. ಆದರೆ ಈಗ ಭಾರತೀಯರು ಹೇಗೆ ದಿನೇದಿನೇ ಕೃಶರಾಗುತ್ತಿರುವರೋ ಹಾಗೆಯೇ ಅವರ ದನಕರುಗಳೂ ಕೃಶವಾಗುತ್ತಿವೆ. ರೈತರು ಉಪಯೋಗಿಸುವ ಅನೇಕ ಎತ್ತುಗಳು ಭಾರವಾದ ಕಬ್ಬಿಣದ ನೇಗಿಲುಗಳನ್ನು ಎಳೆಯಲಾರವು. ಇತ್ತೀಚೆಗೆ ದಾರಿದ್ರ್ಯವು ಹೆಚ್ಚುತ್ತ ಬಂದಂತೆಲ್ಲ ರೈತರು ಎತ್ತುಗಳನ್ನೂ ಇಡಲಾರದೆ, ಮುದಿಹಸುಗಳನ್ನೋ ಎಳಗರುಗಳನ್ನೋ ಕಟ್ಟಿಕೊಂಡು ಹೇಗೋ ಜಮೀನನ್ನು ಸ್ವಲ್ಪ ಕೆರೆದು ತಾವೂ ವ್ಯವಸಾಯಮಾಡುತ್ತಿದ್ದೇವೆಂದು ಆತ್ಮವಂಚನೆಯನ್ನು ಮಾಡಿಕೊಳ್ಳುತ್ತಿರುವರು. ಆದುದರಿಂದ ಉತ್ತಮವಾದ ಉಪಕರಣಗಳ ಪ್ರಚಾರಕರು ಉತ್ತಮವಾದ ದನಕರುಗಳ ಪ್ರಚಾರಕರೂ ಆಗಬೇಕಾಗಿದೆ.

ನಮ್ಮ ಜನಜೀವನದ ಸಮಸ್ಯೆಗಳಲ್ಲಿ ಇದೊಂದು ಆಶ್ಚರ್ಯಕರವಾದ ಸಮಸ್ಯೆ. ಪ್ರಾಯಃ ಪಶುಪಾಲನೆಯು ನಮ್ಮ ಕಸಬುಗಳಲ್ಲಿ ಬೇಸಾಯಕ್ಕಿಂತಲೂ ಹಿರಿದಾದ ಮತ್ತು ಪ್ರಾಚೀನವಾದ ಕಸಬು. ಉಪನಿಷತ್ತುಗಳ ಕಾಲದಿಂದ ಪಶುಪಾಲನೆಯೂ ತದಂಗವಾದ ಗೋಪೂಜೆಯೂ ಹಿಂದೂ ಧರ್ಮದ ತಳಹದಿಯಾಗಿರುವುವು. ಈಗಿನ ಕಾಲದಲ್ಲಿಯೂ ಪಾಶ್ಚಾತ್ಯ ಪೌರಸ್ತ್ಯ ದೇಶಗಳೆಲ್ಲಕ್ಕಿಂತಲೂ ಮಿಗಿಲಾಗಿ ನಮ್ಮ ದೇಶದಲ್ಲಿ ದನಕರುಗಳಿರುವುವು. ಈ ಕೆಳಗಿನ ಅಂಕಿಗಳು ಈ ವಿಷಯವನ್ನು ಸ್ಪಷ್ಟಪಡಿಸುವುವು.[28]

## ಪ್ರತಿನೂರುಜನಕ್ಕೆ ಇರುವ ದನಕರುಗಳ ಸಂಖ್ಯೆ.

| | | |
|---|---|---|
| ಇಂಡಿಯ | 1927-28 ರಲ್ಲಿ | 62 |
| ಇಂಗ್ಲೆಂಡ್ | ,, | 18 |
| ಜರ್ಮನಿ | ,, | 29 |
| ಇಟಲಿ | ,, | 18 |
| ಈಜಿಪ್ಟ್ | ,, | 56 |

ನಮ್ಮ ಮೈಸೂರು ದೇಶವಲ್ಲಿ ಈ ಸಂಖ್ಯೆಯು ಇನ್ನೂ ಹೆಚ್ಚು; ಎಂದರೆ 76 5.

ನಮ್ಮ ದೇಶದಲ್ಲಿ ದನಕರುಗಳನ್ನು ಕಾಪಾಡುವ ಉದ್ದೇಶವು ಮೂರು (1) ಬೇಸಾಯದಲ್ಲಿ ಅವುಗಳ ಸಹಾಯವನ್ನು ಪಡೆವುದು, (2) ಗೊಬ್ಬರವನ್ನು ಶೇಖರಿಸುವುದು, (3) ಹಾಲು, ಮೊಸರು, ತುಪ್ಪ–ಇವುಗಳನ್ನು ಪಡೆಯುವುದು. ಪಾಶ್ಚಾತ್ಯದೇಶಗಳಲ್ಲಿ ದನಕರುಗಳನ್ನು ಸಾಕುವುದು, (1) ಅವುಗಳ ಮಾಂಸವನ್ನು ತಿನ್ನುವುದಕ್ಕೆ (2) ಹಾಲು ಮೊಸರುಗಳಿಗೆ. ಪಾಶ್ಚಾತ್ಯದೇಶಗಳಲ್ಲಿ ದನಕರುಗಳ ಸಂಖ್ಯೆಯು ಕಡಮೆಯಾಗಿದ್ದರೂ ಅವುಗಳಿಂದ ಪಡೆವ ಲಾಭವು ಹೆಚ್ಚು. ಹಾಲು ಕೊಡುವುದರಲ್ಲೂ ಮಾಂಸವನ್ನು ಒದಗಿಸುವುದರಲ್ಲೂ ಅವು ನಮ್ಮ ದನಕರುಗಳಿಗಿಂತ ಅತ್ಯುತ್ತಮವಾಗಿವೆ.

ಈ ಸಂದರ್ಭದಲ್ಲಿ ನಾವು ಮಾಡಬೇಕಾದ ಒಂದೆರಡು ಕೆಲಸಗಳನ್ನು ನೆನಪಿಗೆ ತಂದುಕೊಳ್ಳೋಣ. ಕೆಲಸಕ್ಕೆ ಬಾರದ ಸಾವಿರಾರು ದನಗಳಿರುವುದಕ್ಕಿಂತ ಉತ್ತಮವರ್ಗಕ್ಕೆ ಸೇರಿದ ಕೆಲವು ದನಗಳಿರುವುದೇ ಮೇಲು. ನಮ್ಮಲ್ಲಿರುವ ಕೆಲಸಕ್ಕೆ ಬಾರದ ದನಗಳನ್ನು ಸಾಧ್ಯವಾದಷ್ಟು ಕಡಿಮೆ ಮಾಡಬೇಕು. ಪಾಶ್ಚಾತ್ಯರು ಅಂತಹ ದನಗಳನ್ನು ಕೊಂದು ತಿನ್ನುವರು. ಅವುಗಳನ್ನು ಕೊಲ್ಲುವುದು ಧರ್ಮವೇ, ಅಥವಾ ಅವುಗಳಿಗೆ ಉತ್ತಮವಾದ ಆಹಾರವನ್ನು ಕೊಡದೆ ತೊಂದರೆಗೀಡುಮಾಡುವುದು

ಒಳ್ಳೆಯದೆ ಎಂಬ ಪ್ರಶ್ನೆಗೆ ನಮ್ಮ ನಾಯಕರು ಸಮಂಜಸವಾದ ಉತ್ತರವನ್ನು ಒದಗಿಸಬೇಕು. ಅನಂತರ ನಮ್ಮ ಬೇಸಾಯಕ್ಕೆ ಅನುಕೂಲವಾಗುವಂತಹ ಉತ್ತಮಜಾತಿಯ, ಹೆಚ್ಚುಶಕ್ತಿಯುಳ್ಳ ದನಗಳನ್ನು ಹೊಂದಿಸಿಕೊಳ್ಳಬೇಕು; ಉತ್ತಮವಾದ ಹೋರಿಗಳನ್ನೂ ನಮ್ಮ ಅಮೃತಮಹಲ್ ಜಾತಿಯಂತಹ ಒಳ್ಳೆಯ ಜಾತಿಗೆ ಸೇರಿದ ದನಗಳನ್ನೂ ಕೂಡಿಸಬೇಕು. ಹಳ್ಳಿಯಲ್ಲಿ ಸಿಕ್ಕಿದಂತೆ ತಿರುಗುತ್ತಿರುವ ಸಣ್ಣಸಣ್ಣ ಹೋರಿಗಳಿಗೆ ಕಶಿ ಮಾಡಿಸಬೇಕು. ಹೀಗೆ ಮಾಡಿದಲ್ಲಿ ಈಗಿರುವ ಎತ್ತುಗಳಿಗಿಂತ ಬಹಳ ಕಡಿಮೆ ಸಂಖ್ಯೆಯ ಎತ್ತುಗಳಿಂದಲೇ ರೈತರು ಹೆಚ್ಚು ಲಾಭವನ್ನು ಪಡೆಯಬಹುದು.

ನಮ್ಮ ದೇಶದಲ್ಲಿ ಯಾವಕಡೆಯ ದನಗಳನ್ನು ಪರೀಕ್ಷಿಸಿದರೂ ಅವು ಪಾಶ್ಚಾತ್ಯದೇಶದ ದನಗಳಂತೆ ಹಾಲನ್ನು ಕೊಡಲಾರವು. ನಮ್ಮ ಆಹಾರವು ಉತ್ತಮವಾಗಬೇಕಾದರೆ, ನಮಗೂ ನಮ್ಮ ಮಕ್ಕಳಿಗೂ ಹೆಚ್ಚು ಹೆಚ್ಚು ಹಾಲುಮೊಸರುಬೆಣ್ಣೆಗಳು ಒದಗಲೇ ಬೇಕು. ಇತಿಹಾಸದ ಪುಟಗಳಲ್ಲಿ ಪಶುಪಾಲನೆಯ ದೇಶವೆಂಬ ಹೆಮ್ಮೆಯ ಬಿರುದನ್ನು ಹೊಂದಿರುವ ಭಾರತಭೂಮಿಯಲ್ಲಿ, ಅದರಲ್ಲಿಯೂ ಹಳ್ಳಿಗಳಲ್ಲಿ ಹಾಲುಮೊಸರಿಗೇ ಅಭಾವವೆಂದರೆ ಅದು ಎಷ್ಟು ಶೋಚನೀಯವಾದ ಸ್ಥಿತಿ! ಈ ದನಕರುಗಳ ಸಮಸ್ಯೆಯಲ್ಲಿ, ಹಾಲನ್ನು ಹೆಚ್ಚಾಗಿ ಕೊಡುವ ಜಾತಿಯ ಹಸುಗಳನ್ನು ಅಭಿವೃದ್ಧಿಮಾಡುವುದು ಬಹು ಮುಖ್ಯವಾದುದು. ಅಲ್ಲದೆ ರೈತರ ಉಪವೃತ್ತಿಗಳಲ್ಲಿ ದನಸಾಕುವುದೂ, ಹಾಲುಮೊಸರುಬೆಣ್ಣೆಗಳನ್ನು ಮಾರುವುದೂ ಅಗ್ರಸ್ಥಾನವನ್ನು ಪಡೆಯಬೇಕಾದುದು ಆವಶ್ಯಕ. ಇದಕ್ಕಾಗಿ ಹೆಚ್ಚು ಹಾಲುಕೊಡುವ ಜಾತಿಯ ಪಾಶ್ಚಾತ್ಯಪಶುಗಳನ್ನೂ, ಹೋರಿಗಳನ್ನೂ ತರಿಸಿ ನಮ್ಮ ವಾಯುಗುಣಕ್ಕೆ ಅವು ಹೊಂದಿಕೊಳ್ಳುವಂತೆ ಪಳಗಿಸಬೇಕು.

**ಹುಲ್ಲು**—ಮೇಲ್ಕಂಡ ವಿಷಯಗಳನ್ನು ಉಪದೇಶಮಾಡುವುದು ಸುಲಭ; ಕಾರ್ಯರೂಪಕ್ಕೆ ತರುವುದು ಕಷ್ಟ. ಮುಖ್ಯವಾದ ಪ್ರತಿಬಂಧಕವು

ದನಗಳ ಆಹಾರಕ್ಕೆ ಸಂಬಂಧಪಟ್ಟುದು. ಪಾಶ್ಚಾತ್ಯದೇಶಗಳಲ್ಲಿ ಮನುಷ್ಯನ ಆಹಾರದ ವಿಷಯದಲ್ಲಿ ಜನಗಳು ಎಷ್ಟು ಶ್ರಮವನ್ನು ವಹಿಸುವರೋ, ಎಷ್ಟು ಶಿಸ್ತಿನಿಂದ ಕೆಲಸಮಾಡುವರೋ ದನಗಳ ಆಹಾರದ ವಿಷಯದಲ್ಲಿಯೂ ಅಷ್ಟೇ ಶ್ರಮವನ್ನು ವಹಿಸುವರು ; ಮತ್ತು ಅಷ್ಟೇ ಶಿಸ್ತಿನಿಂದ ಕೆಲಸಮಾಡುವರು. ನಮ್ಮಲ್ಲಿ ಪಶುಪಾಲನೆಯಲ್ಲಿಯೇ ಆಸಕ್ತರಾದ ಕೆಲವರು ವಿನಾ, ಮಿಕ್ಕ ರೈತರು ದನಕರುಗಳ ಆಹಾರದ ವಿಷಯದಲ್ಲಿ ಬಹು ಉಪೇಕ್ಷೆಯನ್ನು ತೋರಿಸುವರು. ಅಲ್ಲದೆ ಜನಸಂಖ್ಯೆಯು ಹೆಚ್ಚಿದಷ್ಟೂ ಗೋಮಾಳಕ್ಕೆ ಒದಗುತ್ತಿದ್ದ ಜಮೀನಿನ ವಿಸ್ತಾರವೂ ಕಡಿಮೆಯಾಗುತ್ತಿದೆ. ಇರುವ ಗೋಮಾಳವೂ ಕೂಡ ಅನಾಯಕತ್ವದದೆಸೆಯಿಂದ ನಿಷ್ಪ್ರಯೋಜಕವಾಗುತ್ತಿದೆ. ಮೈಸೂರು ದೇಶದಲ್ಲಿ ಸುಮಾರು 20 ಲಕ್ಷ ಎಕರೆಗಳಷ್ಟು ಗೋಮಾಳ ವಿದೆಯಂತೆ; ಆದರೆ ಬೇಸಗೆಯಲ್ಲಿ ಈ ಗೋಮಾಳಗಳು ಬೆಂಗಾಡಾಗಿರುವುವು. ಒಂದೆರಡು ಹದ ಮಳೆ ಬಿದ್ದ ಕೂಡಲೆ ಸ್ವಲ್ಪ ಚಿಗುರಿದಂತಾಗುವುದಷ್ಟೆ. ಬೇಸಗೆಯಲ್ಲಿ ಹೊಟ್ಟೆಗಿಲ್ಲದೆ ಬರಿಯ ಎಲುಬಿನ ಚೀಲಗಳಂತಿದ್ದ ದನಕರುಗಳು ಈ ಚಿಗುರನ್ನು ಆತುರದಿಂದ ತಿಂದು ಒಂದೆರಡು ದಿವಸದಲ್ಲಿಯೇ ರೋಗಗಳಿಗೆ ಗುರಿಯಾಗುವುವು ; ಗೋಮಾಳವೂ ಬಹುಬೇಗ ಬೆಂಗಾಡಾಗುವುದು.

ರೈತರ ಬಡತನವು ನಿವಾರಣೆಯಾಗಬೇಕಾದರೆ ಮೊದಲು ದನಗಳ ಬಡತನವು ನಿವಾರಣೆಯಾಗಬೇಕು. ರೈತರು ದನಗಳಿಗೆ ಆಹಾರವನ್ನೊದಗಿಸುವ ಸಸ್ಯಗಳನ್ನು ಹೆಚ್ಚುಹೆಚ್ಚಾಗಿ ಬೆಳೆಯಬೇಕು. ಗೋಮಾಳಗಳನ್ನು ವಿಲೇಜ್‌ಪಂಚಾಯತಿಗಳು ತಮ್ಮ ಅಧೀನಕ್ಕೆ ತೆಗೆದುಕೊಂಡು ಅವುಗಳಲ್ಲಿ ಉತ್ತಮಜಾತಿಯ ಹುಲ್ಲುಗಳನ್ನು ಬೆಳೆಯಿಸಿ ರೈತರಿಗೆ ಕಡಿಮೆ ಬೆಲೆಗೆ ಒದಗಿಸಿಕೊಡಬಹುದು. ಕಾಡುಗಳ ಸಮೀಪದಲ್ಲಿರುವ ಗ್ರಾಮಗಳಲ್ಲಿ ಎಳಸಾದ ಹುಲ್ಲುಗಳನ್ನು ಕೊಯ್ದು ಸೈಲೋಗಳಲ್ಲಾಗಲಿ, ಗುಣಿಗಳಲ್ಲಾಗಲಿ ಕೆಡದಂತೆ ಶೇಖರಿಸಿ ಹುಲ್ಲಿಲ್ಲದ ಕಾಲದಲ್ಲಿ ಉಪಯೋಗಿಸಬಹುದು. ಹುಲ್ಲು

ಗಳನ್ನು ಹೇಗೆ ಶೇಖರಿಸಬೇಕೆಂಬುದಕ್ಕೆ ವ್ಯವಸಾಯದ ಇಲಾಖೆಯವರು ಅನೇಕಪ್ರಯೋಗಗಳನ್ನು ಮಾಡಿರುವರು. ಅವರ ಸಲಹೆಯನ್ನು ಗ್ರಾಮ ಪಂಚಾಯತಿಯವರು ತೆಗೆದುಕೊಳ್ಳಬಹುದು. ಮೈಸೂರು ಮಲೆನಾಡಿನ ಕಾಡುಗಳಲ್ಲಿ ಮಳೆಗಾಲದ ಪ್ರಾರಂಭದಲ್ಲಿ ಹುಲ್ಲುಸೊಂಪಾಗಿ ಬೆಳೆಯುವುದು. ಕೆಲವು ದಿನಗಳು ಕಳೆದ ಮೇಲೆ ಅದು ಬಲಿತು ದನಗಳ ಆಹಾರಕ್ಕೆ ಅನರ್ಹ ವಾಗುವುದು. ಅಂತಹ ಸ್ಥಳಗಳಲ್ಲಿ ಹುಲ್ಲನ್ನು ಶೇಖರಿಸುವುದು ಸಾಧ್ಯ; ಮತ್ತು ಆವಶ್ಯಕ.

**ಪಶುವೈದ್ಯ ಮತ್ತು ದನಗಳ ವಿಮೆ**—ದನಗಳನ್ನು ಕಾಪಾಡುವುದು ಸುಲಭವಾದ ಕೆಲಸವಲ್ಲ. ಏಕೆಂದರೆ ನಮ್ಮ ದೇಶದಲ್ಲಿ ಅವುಗಳಿಗೆ ಪದೇಪದೇ ಸಾಂಕ್ರಾಮಿಕರೋಗಗಳ ಕಾಟವಿದೆ. ಇಂತಹ ರೋಗಗಳ ನಿವಾರಣೆಗಾಗಿ ಪಶುವೈದ್ಯಶಾಲೆಯವರ ಸಹಾಯವನ್ನು ರೈತರು ಒದಗಿಸಿ ಕೊಳ್ಳಬಹುದು. ಅನೇಕ ಸಾಂಕ್ರಾಮಿಕರೋಗಗಳು ಬಾರದಂತೆ ತಡೆಯಲು ಉಪಾಯಗಳನ್ನು ವೈಜ್ಞಾನಿಕರು ಕಂಡುಹಿಡಿದಿರುವರು; ನಾವು ಅವುಗಳ ಪ್ರಯೋಜನವನ್ನು ಪಡೆಯಬೇಕು. ಅಲ್ಲದೆ ಕೆಲವು ಸಾಮಾನ್ಯರೋಗ ಗಳಿಗೆ ಅನುಭವಸ್ಥರಾದ ರೈತರು ಉತ್ತಮಚಿಕಿತ್ಸೆಯನ್ನು ಮಾಡ ಬಲ್ಲರು. ಜನಗಳ ರೋಗದಲ್ಲಿ ಹೇಗೋ, ಹಾಗೆಯೇ ದನಗಳ ರೋಗ ದಲ್ಲಿಯೂ ದೇಶೀಯವೈದ್ಯವಿರುವುದು. ಅವುಗಳನ್ನು ಸಂರಕ್ಷಿಸುವುದು ನಮ್ಮ ನಾಯಕರುಗಳ ಕರ್ತವ್ಯವಾಗಿದೆ. ಪಾಶ್ಚಾತ್ಯದೇಶಗಳಲ್ಲಿಯೂ ಪಶುರೋಗವು ಹೆಚ್ಚಾಗಿಯೇ ಇರುವುದು. ಆದರೆ ಅಲ್ಲಿಯ ರೈತರಿಗೂ ನಮ್ಮ ರೈತರಿಗೂ ಒಂದು ವ್ಯತ್ಯಾಸ: ನಮ್ಮ ರೈತರ ದನಗಳು ಸತ್ತರೆ ರೈತರು ಸಾಹುಕಾರರನ್ನು ಶರಣುಹೊಗಬೇಕು. ಪಾಶ್ಚಾತ್ಯರಲ್ಲಿ ಜನಗಳ ಜೀವವಿಮೆಯಿರುವಂತೆಯೇ, ದನಗಳ ಜೀವವಿಮೆಯೂ ಬಳಕೆಯಲ್ಲಿರುವುದ ರಿಂದ ಅಲ್ಲಿಯ ರೈತರ ದನಗಳು ಸತ್ತರೂ ಅವರಿಗೆ ಹೆಚ್ಚು ನಷ್ಟವಿಲ್ಲ. ನಮ್ಮಲ್ಲಿ ದನಗಳ ಜೀವವಿಮೆಯನ್ನು ಆಚರಣೆಗೆ ತರಬೇಕು.[೨೧] ಆದರೆ

ಜನರ ಜೀವವಿಮೆಯೇ ಪ್ರಚಾರವಾಗದಿರುವ ನಮ್ಮ ಹಳ್ಳಿಗಳಲ್ಲಿ ಇದು ಬೇಗ ಸಾಧ್ಯವೆ ?

**ಬೆಳೆಗಳ ಪರಿವರ್ತನೆ**—ದನಗಳಿಗೆ ಆಹಾರವನ್ನು ಒದಗಿಸುವ ವಿಷಯವನ್ನು ವಿಮರ್ಶಿಸುತ್ತಾ ಜಾತಾರ್ ಮತ್ತು ಬೆರಿ ಎಂಬ ಅರ್ಥ ಶಾಸ್ತ್ರಜ್ಞರಿಬ್ಬರು "ರೈತರು ತಮ್ಮ ಜಮೀನಿನಲ್ಲಿ ಪ್ರತಿವರ್ಷವೂ ಒಂದೇ ವಿಧವಾದ ಬೆಳೆಯನ್ನು ಬೆಳೆಯುವುದಕ್ಕೆ ಬದಲಾಗಿ, ತಮ್ಮ ಜಮೀನನ್ನು ತಾಕುಗಳಾಗಿ ವಿಂಗಡಿಸಿ, ಒಂದು ತಾಕಿನಲ್ಲಿ ದನಗಳ ಆಹಾರಕ್ಕೆ ಅನುಕೂಲವಾಗುವ ಸಸ್ಯಗಳನ್ನೂ, ಇನ್ನೊಂದರಲ್ಲಿ ಹಣಕೊಡುವ ಸಸ್ಯಗಳನ್ನೂ, ಮತ್ತೊಂದರಲ್ಲಿ ಆಹಾರಕ್ಕೆ ಬೇಕಾಗುವ ಸಸ್ಯಗಳನ್ನೂ ಬೆಳೆಯುತ್ತ ಪ್ರತಿವರ್ಷವೂ ಬೆಳೆಗಳ ಪರಿವರ್ತನೆಯನ್ನು (Rotation of Crops) ಮಾಡುವುದು ಆವಶ್ಯಕ." ಎಂದು ಬರೆಯುತ್ತಾರೆ.[30] ಈ ವಿಧವಾದ ಪರಿವರ್ತನೆಯಿಂದ ರೈತರಿಗೆ 2–3 ವಿಧವಾದ ಲಾಭವುಂಟು. ಮುಖ್ಯವಾಗಿ ಜಮೀನಿನ ಸಾರವು ಕುಗ್ಗದೆ ಒಂದೇ ವಿಧವಾಗಿ ನಿಲ್ಲುವುದು; ಗೊಬ್ಬರದ ಸರಪರಾಜು ವಿಶೇಷವಾಗಿಲ್ಲದ ನಮ್ಮ ನಾಡಿನಲ್ಲಿ ಈ ಬಗೆಯ ಪರಿವರ್ತನೆಯು ಲಾಭಕರ ಎರಡನೆಯದಾಗಿ ಬ್ರೇ ಅವರು ಹೇಳುವಂತೆ ಒಂದೊಂದು ಕಾಲದಲ್ಲಿ ಒಂದೊಂದು ಭಾಗವನ್ನು ವ್ಯವಸಾಯಮಾಡುತ್ತಾ ರೈತನು ತನ್ನ ಅವಕಾಶವನ್ನೆಲ್ಲ ಪೂರ್ತಿಯಾಗಿ ಉಪಯೋಗಿಸಿಕೊಂಡು ಹೆಚ್ಚುಲಾಭವನ್ನು ಸಂಪಾದಿಸಬಹುದು.[31]

ರೈತರ ಮುಖ್ಯವೃತ್ತಿಯಿಂದ ಸಂಪಾದನೆಯನ್ನು ಹೆಚ್ಚಿಸಬೇಕಾದರೆ ಯಾವಯಾವ ಮಾರ್ಗಗಳನ್ನು ಅನುಸರಿಸಬೇಕು ಎಂಬ ಪ್ರಶ್ನೆಯನ್ನು ವಿಶದವಾಗಿ ನಾವು ಪರೀಕ್ಷಿಸಿರುವೆವು. ಆದರೆ ಈ ಪ್ರಕರಣದಲ್ಲಿ ಮಾಡಿರುವ ಸಲಹೆಗಳನ್ನು ಆಚರಣೆಗೆ ತರಲಾಗದಂತೆ ಕೆಲವು ಸನ್ನಿವೇಶಗಳು ಏರ್ಪಟ್ಟಿವೆ. ಅವುಗಳನ್ನು ಇನ್ನುಮುಂದೆ ನಾವು ವಿಮರ್ಶಿಸಬೇಕು.



# ೫. ಜಮೀನಿನ ಹಂಚಿಕೆ

---

ಬಹುಕಾಲದಿಂದಲೂ ನಮ್ಮ ನಾಡಿನ ಜನರಿಗೆ ಮುಖ್ಯಾವಲಂಬನವು ಬೇಸಾಯ. ಶೇಕಡ 90 ಕ್ಕೆ ಮಿಗಿಲಾಗಿ ಒಂದಲ್ಲ ಒಂದು ರೂಪದಲ್ಲಿ ಬೇಸಾಯದಿಂದಲೇ ಇವರು ಜೀವಿಸಬೇಕಾಗಿದೆ. ಪೂರ್ವಕಾಲದಲ್ಲಿ ಈ ಮುಖ್ಯವೃತ್ತಿಯ ಜೊತೆಗೆ ನಮ್ಮ ಹಳ್ಳಿಯ ಜನರು ಅನೇಕ ಉಪವೃತ್ತಿಗಳನ್ನು ಇಟ್ಟುಕೊಂಡಿದ್ದರು. ಆದರ ಫಲವಾಗಿ ನಮ್ಮ ಹಳ್ಳಿಗಳು ಸಂಪತ್ತಿನ ತವರುಮನೆಗಳಾಗದಿದ್ದರೂ, ಸಂತೋಷಭರಿತಗಳಾಗಿದ್ದುವು. ಈಚೆಗೆ ಪಾಶ್ಚಾತ್ಯರ ಸಂಪರ್ಕದಿಂದಲೂ ಗಿರಣಿಗಳ ಪೈಪೋಟಿಯಿಂದಲೂ ನಮ್ಮ ಗ್ರಾಮಗಳಲ್ಲಿದ್ದ ಕೈಗಾರಿಕೆಗಳು ನಶಿಸಿದುವು. ಆದುದರಿಂದ ಹಿಂದೆ ಮುಖ್ಯವೃತ್ತಿಯಾಗಿದ್ದ ಬೇಸಾಯವು ಸದ್ಯಃ ಒಂದೇ ವೃತ್ತಿಯಾಗಿದೆ. ಇದರ ಸಲುವಾಗಿ ಜಮೀನಿನಿಂದಲೇ ಜೀವನಮಾಡುವವರ ಸಂಖ್ಯೆಯು ಬೆಳೆಯುತ್ತಾ ಬರುತ್ತಿದೆ. ಆರ್ಥಿಕ ಜೀವನದಲ್ಲಿದ್ದ ಸಮತೂಕವು (Equillibrium of occupation) ಹೋಗಿ ಜೀವನದ ಭಾರವೆಲ್ಲವೂ ನೆಲವನ್ನೇ ಅವಲಂಬಿಸಿದೆ. ಜನಸಂಖ್ಯೆಯು ಹೆಚ್ಚಿದಷ್ಟೂ ಕೃಷಿಯಿಂದಲೇ ಜೀವನಮಾಡುವವರ ಸಂಖ್ಯೆಯೂ ಹೆಚ್ಚುತ್ತಿದೆ. ಇದಲ್ಲದೆ ನಮ್ಮ ನಾಡಿನಲ್ಲಿ ಬಹುಕಾಲದಿಂದಲೂ ಬಳಕೆಯಲ್ಲಿರುವ ಜಮೀನು ಹಂಚಿಕೆಯ ಪದ್ಧತಿಯಿಂದ ನಮ್ಮ ಹಳ್ಳಿಗಳಲ್ಲಿ ಹುಟ್ಟುವ ಪ್ರತಿಯೊಬ್ಬ ವ್ಯಕ್ತಿಗೂ ಪಾಲು ದೊರೆಯುತ್ತಲೇ ಇದೆ. ನಮ್ಮ ಜನರಿಗೆ ಜಮೀನು ದೊಡ್ಡ ಬ್ಯಾಂಕು. ಯಾರಲ್ಲಿಯಾದರೂ ಸ್ವಲ್ಪ ಹಣವಿದ್ದರೆ ಅಥವಾ ಸುಲಭವಾಗಿ ಸಾಲ ದೊರೆತರೆ ಆ ಹಣವನ್ನು ಜಮೀನು ಕೊಳ್ಳುವುದರಲ್ಲಿ ಉಪಯೋಗಿಸುವುದೇ ಉತ್ತಮಮಾರ್ಗವೆಂಬ ನಂಬಿಕೆಯಿದೆ. ನಮ್ಮ ರೈತರಿಗೆ ಜಮೀನಿನ ಮೇಲಿರುವ ವ್ಯಾಮೋಹವನ್ನು ಬಣ್ಣಿಸಲಸದಳ. ಒಂದು ವಿಧದಲ್ಲಿ

ನೋಡಿದರೆ ನಮ್ಮ ಜನರಿಗೆ ಹೊನ್ನಿಗಿಂತಲೂ ಮಣ್ಣಿನಮೇಲೆಯೇ ಆಸೆ ಹೆಚ್ಚೆಂದು ಹೇಳಬಹುದು.

ಈ ಕಾರಣಗಳ ಫಲವಾಗಿ ನಮ್ಮ ಪ್ರತಿಯೊಬ್ಬ ರೈತನ ಪಾಲಿಗೂ ಬರುವ ಜಮೀನಿನ ತಾಕು ದಿನೇ ದಿನೇ ಚಿಕ್ಕದಾಗುತ್ತಿರುವುದು. 1921 ನೆಯ ಇಸವಿಯ ಸೆನ್ಸಸ್ಸಿನ ವರದಿಯಿಂದ ತೆಗೆದಿರುವ ಈ ಕೆಳಗಿನ ಅಂಕಿಗಳು ಈ ವಿಷಯವನ್ನು ಮನದಟ್ಟುವಂತೆ ಮಾಡುವುವು.[1]

| | ಪ್ರಾಂತ | | ಪ್ರತಿರೈತನ ಪಾಲಿಗೆ ಬಂದಿರುವ ಕೃಷಿಯಾಗಿರುವ ಜಮೀನು. | |
|---|---|---|---|---|
| 1. | ಬೊಂಬಾಯಿ | .... | 12.15 | ಎಕರೆಗಳು |
| 2. | ವಾಯುವ್ಯ ಸರಹದ್ದಿನ ಪ್ರಾಂತ | ... | 11.22 | ,, |
| 3. | ಪಂಜಾಬು | ... | 9.8 | ,, |
| 4. | ಸೆಂಟ್ರಲ್ ಪ್ರಾಂತ ಮತ್ತು ಬೀರಾರ್ | | 8.48 | ,, |
| 5. | ಬರ್ಮ | ... | 5.65 | ,, |
| 6. | ಮದರಾಸು | ... | 4.91 | ,, |
| 7. | ಬಂಗಾಳ | .... | 3.12 | ,, |
| 8. | ಬಿಹಾರ | .... | 3.09 | ,, |
| 9. | ಅಸ್ಸಾಂ | .... | 2.96 | ,, |
| 10. | ಸಂಯುಕ್ತಪ್ರಾಂತ | .... | 2.51 | ,, |

ಮೈಸೂರು ದೇಶದಲ್ಲಿ 1928-29 ನೆಯ ಇಸವಿಯಲ್ಲಿ ಬೇಸಾಯವಾಗಿದ್ದ 1057486 ತಾಕುಗಳಲ್ಲಿ ಶೇಕಡ 53·3 ತಾಕುಗಳು (564221) 5 ಎಕರೆಗಿಂತ ಕಡಮೆಯವು; ಶೇಕಡಾ 79·3 ತಾಕುಗಳು 10 ಎಕರೆಗಿಂತ ಕಡಮೆಯವು ಎಂಬುದಾಗಿ ತಿಳಿದುಬರುತ್ತದೆ. ಒಟ್ಟು ತಾಕುಗಳ ಸರಾಸರಿ ವಿಸ್ತಾರವು 7.79 ಎಕರೆಗಳು.[2]

ಜಮೀನು ಹಂಚುವಿಕೆಯಲ್ಲಿರುವ ಗುಣದೋಷಗಳನ್ನು ವಿಮರ್ಶಿಸಲು ಮೈಸೂರು ಸರ್ಕಾರದವರು ಈಚೆಗೆ ನೇಮಿಸಿದ್ದ ಕಮಿಟಿಯವರ ವರದಿಯಿಂದ ನಮ್ಮ ರೈತರಪಾಲಿಗೆ ದೊರೆಯುತ್ತಿರುವ ತಾಕುಗಳು ಎಷ್ಟು ಚಿಕ್ಕವಾಗುತ್ತಿವೆ ಎಂಬುದು ವಿದಿತವಾಗುವುದು. ಬೇರೆ ಬೇರೆ ಡಿಸ್ಟ್ರಿಕ್ಟುಗಳ 80 ಹಳ್ಳಿಗಳ ಲೆಕ್ಕವನ್ನು ಕೂಲಂಕಷವಾಗಿ ವಿಮರ್ಶಿಸಿ ಕಮಿಟಿಯವರು ಹೇಳುವ ಮಾತನ್ನು ನಾವು ಮನದಲ್ಲಿಡಬಹುದು.[3] ಆ ಹಳ್ಳಿಗಳಲ್ಲಿ,

| | | | | | |
|---|---|---|---|---|---|
| (a) | ಒಂದೆಕರೆಗಿಂತಲೂ ಸಣ್ಣವಾದ | ತಾಕುಗಳು | ಶೇಕಡಾ | | 20.9 |
| (b) | 1 ರಿಂದ 5 | ,, | ,, | ,, | 39.8 |
| (c) | 5 ರಿಂದ 10 | ,, | ,, | ,, | 18.8 |
| (d) | 10 ರಿಂದ 25 | ,, | ,, | ,, | 14.9 |
| (e) | 25 ರಿಂದ 50 | ,, | ,, | ,, | 4.1 |
| (f) | 50 ಕ್ಕಿಂತ ಹೆಚ್ಚು | ,, | ,, | ,, | 1.5 |

ಎಂದರೆ ಶೇಕಡ 79.5 ತಾಕುಗಳು 10 ಎಕರೆಗಿಂತಲೂ ಚಿಕ್ಕವು. ಕೆಲವುಕಡೆ ತಾಕುಗಳು ಇನ್ನೂ ಚಿಕ್ಕವಾಗಿವೆ. ಬೆಂಗಳೂರು ತಾಲ್ಲೂಕಿನ 5 ಹಳ್ಳಿಗಳಲ್ಲಿ ಶೇಕಡ 82 ತಾಕುಗಳು 5 ಎಕರೆಗಿಂತಲೂ ಚಿಕ್ಕವು. ಶ್ರೀರಂಗಪಟ್ಟಣದಲ್ಲಿ 74.3, ಕೋಲಾರದಲ್ಲಿ 81.2, ತಾಕುಗಳು 5 ಎಕರೆಗಿಂತಲೂ ಚಿಕ್ಕವು. ಅರಕಲಗೂಡು ತಾಲ್ಲೂಕಿನ 3 ಹಳ್ಳಿಗಳಲ್ಲಿ ಶೇಕಡ 76.1 ತಾಕುಗಳು ಒಂದೆಕರೆಗಿಂತಲೂ ಚಿಕ್ಕವು.

ತಾಕುಗಳು ಇಷ್ಟು ಚಿಕ್ಕವಾಗಿರುವುದರಿಂದ ನಮ್ಮ ದೇಶದಲ್ಲಿ ಬೇಸಾಯವು ಅಭಿವೃದ್ಧಿಗೆ ಬರಲು ಬಹಳ ಅಡಚಣೆಯುಂಟೆಂದು ಹಲವು ಅರ್ಥಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ. ನಮ್ಮಲ್ಲಿರುವ ಜಮೀನು ಹಂಚುವಿಕೆಯ ಪದ್ಧತಿಯೇ ನಮ್ಮ ಬೇಸಾಯಕ್ರಮವನ್ನು ನಿರ್ಣಯ ಮಾಡಿದೆಯೆಂದರೆ ಅತಿಶಯೋಕ್ತಿಯಾಗದು. ನಮ್ಮ ಹಳ್ಳಿಗಳಲ್ಲಿ ಎಲ್ಲಿ ನೋಡಿದರೂ ಬೇಲಿಗಳಿಲ್ಲದ ಹೊಲಗಳೇ ಹೆಚ್ಚು. ಬಾಗಾಯಿತು ಜಮೀನು

ಗಳಿಗೂ, ಕೆಲವೆಡೆಯಲ್ಲಿ ತರಿಜಮಿಾನುಗಳಿಗೂ ಬೇಲಿಹಾಕುವುದುಂಟು. ಖುಷ್ಕಿಜಮಿಾನುಗಳಿಗೆ ಬೇಲಿಹಾಕುವುದು ಅಪೂರ್ವ. ತರಿಜಮಿಾನುಗಳಲ್ಲಿಯೂ ಬಹುಭಾಗಕ್ಕೆ ಬೇಲಿಗಳಿಲ್ಲ. ಆದುದರಿಂದ ನಮ್ಮ ಹಳ್ಳಿಗಳ ಜಗಳಕ್ಕೆ ಒಂದು ಮುಖ್ಯಸಾಧನವು ದೊರೆತಂತಾಗಿದೆ. ಪೈರನ್ನು ದನಗಳು ನಾಶಪಡಿಸದಂತೆ ಕಾಯುವ ಹೊರೆಯೂ ರೈತನ ಮೇಲೆ ಬೀಳುವುದು. ತನ್ನ ಪಕ್ಕದವರು ಯಾವ ಬೆಳೆಯನ್ನು ಯಾವ ಕಾಲದಲ್ಲಿ ತೆಗೆಯುತ್ತಾರೋ ತಾನೂ ಅದೇ ಬೆಳೆಯನ್ನು ಅದೇಕಾಲದಲ್ಲಿ ತೆಗೆಯಬೇಕು. ಶಾಸ್ತ್ರೀಯವಾಗಿ ಪಾಶ್ಚಾತ್ಯದೇಶಗಳಲ್ಲಿ ಬೇಸಾಯಮಾಡುವಂತೆ ಉತ್ತಮಜಾತಿಯ ಉಪಕರಣಗಳನ್ನು ಉಪಯೋಗಿಸುವುದು ಅಸಾಧ್ಯ. ಅದಂತಿರಲಿ; ನಮ್ಮ ರೈತರಲ್ಲಿ ಬಹು ಮಂದಿ ಒಂದುಜೊತೆ ಎತ್ತನ್ನೂ ಕೂಡ ಕಾಪಾಡಲಾರರು. ಬಹುಮಂದಿ ಒಂದೆರಡು ಬಡಹಸುಗಳನ್ನು ಕೊಂಡು ನೆಲವನ್ನು ಕೆರೆದು ಬೇಸಾಯಮಾಡುತ್ತಿರುವರು. ಕಾರ್ಖಾನೆಗಳ ವಿಷಯದಲ್ಲಿ ಉತ್ಪತ್ತಿಕ್ಷೇತ್ರದ ವಿಸ್ತಾರವು ಹೇಗೆ ಮುಖ್ಯವೋ ಬೇಸಾಯದಲ್ಲಿಯೂ ತಾಕಿನ ವಿಸ್ತಾರವು ಹಾಗೆಯೇ ಮುಖ್ಯ. ಅತಿ ದೊಡ್ಡ ತಾಕುಗಳಿದ್ದರೂ ಪ್ರಯೋಜನವಿಲ್ಲ; ಅತಿ ಚಿಕ್ಕವುಗಳಿದ್ದರೂ ಉತ್ತಮವಾದ ಬೇಸಾಯವು ಸಾಧ್ಯವಿಲ್ಲ. ರೈತರು ಒದಗಿಸಿಕೊಳ್ಳುವ ಉಪಕರಣಗಳಿಂದ ಅತ್ಯುತ್ತಮಫಲವನ್ನು ಪಡೆಯಬೇಕಾದರೆ ತಾಕುಗಳು ಯಾವ ಬಗೆಯವಾಗಿರಬೇಕೋ ಅದಕ್ಕೆ ಹೆಚ್ಚುಕಡಿಮೆಯಾದರೆ ಬೇಸಾಯವು ಲಾಭದಾಯಕವಾಗುವುದಿಲ್ಲ. ತಾಕುಗಳು ಉಪಕರಣಗಳ ಉಪಯೋಗಕ್ಕೆ ಅನುಕೂಲವಾಗಿದ್ದರೆ ಅವುಗಳನ್ನು Optimum Holding ಎಂದು ಕರೆಯುವರು.

ನಮ್ಮ ದೇಶದ ಬೇಸಾಯವು ಇತರ ದೇಶಗಳ ಬೇಸಾಯಕ್ಕಿಂತಲೂ ತೀರ ಹಿಂದುಳಿದಿರುವುದಕ್ಕೆ ಇದೊಂದು ಮುಖ್ಯಕಾರಣ. ಆದರೆ ಇದಕ್ಕಿಂತಲೂ ಅತಿಶಯವಾದ ಇನ್ನೊಂದು ಕಷ್ಟಕ್ಕೂ ನಮ್ಮ ಚಿಕ್ಕ ತಾಕುಗಳು

ಕಾರಣಗಳಾಗಿವೆ. ಅದು ಏನೆಂದರೆ ನಮ್ಮ ರೈತರ ಬಡತನ. ಭೂದೇವಿಯನ್ನೇ ನಂಬಿರುವವರ ಸಂಖ್ಯೆಯು ದಿನೇದಿನೇ ವೃದ್ಧಿಯಾಗುತ್ತಿರುವುದರಿಂದ ಪ್ರತಿಯೊಬ್ಬ ರೈತನ ಪಾಲಿಗೂ ಬರುವ ಜಮೀನು ಕಡಿಮೆಯಾದಷ್ಟೂ ನಮ್ಮ ರೈತರಿಗೆ ಜೀವನವು ನಡೆಯುವುದು ಕಷ್ಟವಾಗಿದೆ. ರೈತರಲ್ಲಿ ಬಹುಮಂದಿ ವರ್ಷದ ಬಹುಕಾಲ ನಿರುದ್ಯೋಗಿಗಳಾಗಿರಬೇಕಾಗಿದೆ. ಸೆನ್ಸಸ್ ವರದಿಯಲ್ಲಿ 'ರೈತರು' ಎಂಬುದಾಗಿ ನಮೂದಾಗಿರುವವರಲ್ಲಿ ಅನೇಕರನ್ನು ನಿರುದ್ಯೋಗಿಗಳೆಂದೇ ಕರೆಯಬಹುದು. 1880 ನೆಯ ಇಸವಿಯಲ್ಲಿಯೇ ಕ್ಷಾಮನಿವಾರಣಾಸಮಿತಿಯವರು ಹೇಳಿದ್ದಂತೆ "ಈ ದೇಶದ ಬಹುಭಾಗದಲ್ಲಿ ಬೇಸಾಯವಲ್ಲದೆ ಇನ್ನಾವ ಉದ್ಯೋಗವೂ ಇಲ್ಲದಿರುವವರ ಸಂಖ್ಯೆಯು ಕೃಷಿಗೆ ಬೇಕಾಗಿರುವುದಕ್ಕಿಂತಲೂ ಬಹು ಹೆಚ್ಚಾಗಿದೆ." ನಮ್ಮ ರೈತರೆಲ್ಲರೂ ಬಡತನದ ಪಂಕದಲ್ಲಿ ಮುಳುಗಿರುವುದಕ್ಕೆ ಇದು ಪ್ರಬಲವಾದ ಕಾರಣ. ಒಬ್ಬ ರೈತನಿಗೂ ಅವನ ಸಂಸಾರಕ್ಕೂ ವರ್ಷವೆಲ್ಲಾ ಸರಿಯಾದ ಉದ್ಯೋಗವನ್ನು ಕಲ್ಪಿಸಿ ಅವರಿಗೆ ಆರೋಗ್ಯಕರವಾದ ಆಹಾರವನ್ನು ಒದಗಿಸಿ ಅವರ ಸರಳಜೀವನವು ಲಲಿತವಾಗಿ ನಡೆಯುವಂತೆ ಮಾಡಬೇಕಾದರೆ (ಅವರನ್ನು ಸಿರಿವಂತರನ್ನಾಗಿ ಮಾಡುವ ಆಸೆಯು ಗಗನಕುಸುಮವೇ ಸರಿ.) ಈಗ ಅವರ ಪಾಲಿಗೆ ಬರುತ್ತಿರುವ ಜಮೀನು ಸ್ವಲ್ಪವೂ ಸಾಲದು. ಎಷ್ಟು ಬಂದರೆ ಸಾಕು ಎಂಬುದನ್ನು ನಿರ್ಣಯಮಾಡುವುದು ಸ್ವಲ್ಪ ಕಷ್ಟ. ಆಯಾ ಸನ್ನಿವೇಶವನ್ನು ವಿಮರ್ಶಿಸಿ—ಜಮೀನಿನ ಯೋಗ್ಯತೆ, ವಾಯುಗುಣ, ಅಲ್ಲಿರುವ ಕೃಷಿಯ ಮಾರ್ಗ ಇವುಗಳೆಲ್ಲವನ್ನೂ ಪರಿಗಣಿಸಿ—ತೀರ್ಮಾನಕ್ಕೆ ಬರಬೇಕು. "ಈಗಿರುವ ಸ್ಥಿತಿಯಲ್ಲಿ 20-25 ಎಕರೆ ಖುಷ್ಕಿ ಜಮೀನುಗಳೂ ಅಥವಾ 5-6 ಎಕರೆ ತರಿ ಜಮೀನುಗಳೂ ಒಬ್ಬ ರೈತನ ಸಂಸಾರವನ್ನು ಕಾಪಾಡಬಲ್ಲವು" ಎಂಬುದಾಗಿ ಬಿ. ಜಿ. ಸಪ್ರೆ ಎಂಬುವರು ಬರೆಯುತ್ತಾರೆ.[4] "ದಖನ್ನಿನಲ್ಲಿ 50-60 ಎಕರೆಗಳು ಒಂದೇ ತಾಕಿನಲ್ಲಿದ್ದು ಒಂದು ಉತ್ತಮವಾದ ಬಾವಿ, ಒಂದು ಮನೆ—

ಇವುಗಳಿದ್ದರೆ ಅಂತಹ ತಾಕನ್ನು ಮಾದರಿಯ ತಾಕು." ಎಂಬುದಾಗಿ ಹೇಳಬಹುದೆಂದು ಕೀಟಿಂಜ್ ಎಂಬುವರು ಹೇಳುತ್ತಾರೆ.[5] ಖುಷ್ಕಿ ಮತ್ತು ಬಾಗಾಯಿತು ಜಮೀನುಗಳು ಸೇರಿ 20 ಎಕರೆಗಳಾದರೂ ಇರಬೇಕೆಂದು ಡಾಕ್ಟರ್ ಹೆರಾಲ್ಡ್ ಮ್ಯಾನ್ ಎಂಬುವರು ಹೇಳುತ್ತಾರೆ.[6] ಆರ್. ಎಸ್. ಪಾಟಿಲರು ತಮ್ಮ ವರದಿಯಲ್ಲಿ 30-35 ಎಕರೆಗಳಾದರೂ ಇರಬೇಕೆಂದು ಹೇಳುತ್ತಾರೆ.[7] ನಾವು ಮೊದಲೇ ಹೇಳಿದಂತೆ ಈ ಮಾದರಿಯ ತಾಕಿನ ನಿರ್ಣಯವನ್ನು ಮಾಡುವುದು ಕಷ್ಟ. ಆದರೆ ಮೇಲೆಹೇಳಿರುವ ಅಂಕಿಗಳೊಡನೆ ನಮ್ಮ ರೈತರ ತಾಕುಗಳನ್ನು ಹೋಲಿಸಿ ನೋಡಿದರೆ ಆದರ್ಶಕ್ಕೂ ರೈತರಿಗೂ ಇರುವ ಅಂತರವು ಮನವಟ್ಟುವುದು. ಜನಜೀವನದ ಅಂತಸ್ತು ಅಷ್ಟು ಪಾತಾಳದಲ್ಲಿರುವುದರಲ್ಲಿ ಆತಿಶಯವೇನಿದೆ !

ನಮ್ಮ ನಾಡಿನಲ್ಲಿರುವ ಈ ದೋಷವನ್ನು ಪರಿಹರಿಸುವುದು ಅಸಾಧ್ಯ. ಬಹುಮಂದಿ ನಮ್ಮ ದಾಯಭಾಗದ ಪದ್ಧತಿಯನ್ನು ಶಾಸನದ ಮೂಲಕ ಬದಲಾಯಿಸಬೇಕೆಂಬುದಾಗಿ ವಾದಿಸುತ್ತಾರೆ. ಪಾಶ್ಚಾತ್ಯ ದೇಶಗಳಲ್ಲಿ ಕೆಲವೆಡೆ ಭೂಸ್ಥಿತಿಯೆಲ್ಲವೂ ವಂಶದಲ್ಲಿ ಹುಟ್ಟಿದ ಹಿರಿಯಮಗನಿಗೇ ಸೇರಬೇಕೆಂಬ ಶಾಸನವೂ ಪದ್ಧತಿಯೂ ಜಾರಿಯಲ್ಲಿವೆ. ಅದೇಬಗೆಯ ಶಾಸನವನ್ನು ನಮ್ಮಲ್ಲಿ ಆಚರಣೆಗೆ ತರುವುದು ಸಾಧ್ಯವೇ ಮತ್ತು ಸಾಧುವೇ ಎಂಬಿವನ್ನು ವಿವರಿಸಬೇಕು. ಆ ಪದ್ಧತಿಯನ್ನು ಜಾರಿಗೆ ತಂದರೆ ಹಳ್ಳಿಗಳಲ್ಲಿ ಹುಟ್ಟುವ ಇತರ ಮಕ್ಕಳ ಪಾಡೇನಾಗಬೇಕು? ಪಟ್ಟಣಗಳ ಕಾರ್ಖಾನೆಗಳು ಈ ಹೆಚ್ಚು ಮಂದಿಯನ್ನು ಸ್ವೀಕರಿಸಬಲ್ಲವೇ? ಅಥವಾ ಬೇರೆಬಗೆಯ ಅವಲಂಬನಗಳಾದರೂ ಇವೆಯೇ? ಈ ಪ್ರಶ್ನೆಗಳಿಗೆ ಧಾರಾಳವಾಗಿ ಉತ್ತರ ಹೇಳುವುದು ಸಾಧ್ಯವಿಲ್ಲ. ನಮ್ಮ ದೇಶದ ಕೈಗಾರಿಕೆಗಳ ಬೆಳವಣಿಗೆಯನ್ನು ನೋಡಿದರೆ ಶೇಕಡ 10 ಕ್ಕಿಂತ ಮಿಗಿಲಾಗಿ ಜನಗಳು ಕೈಗಾರಿಕೆಗಳಲ್ಲಿಯೂ ಕಾರ್ಖಾನೆಗಳಲ್ಲಿಯೂ ಕೆಲಸಮಾಡುತ್ತಾ ಇಲ್ಲ.[8] ಆದುದರಿಂದ ಹಳ್ಳಿಗಳಿಂದ ಪಟ್ಟಣಗಳಗೆ ಹೆಚ್ಚುಮಂದಿ ಸೇರಲು ಸಾಧ್ಯ

ವಿಲ್ಲ. ಇದಲ್ಲದೆ ಬಹುಕಾಲದಿಂದಲೂ ಬಳಕೆಯಲ್ಲಿರುವ ನಮ್ಮ ದಾಯ ಭಾಗದ ಪದ್ಧತಿಯಿಂದ ನಮಗೆ ಒಂದು ಉಪಯೋಗವೂ ಉಂಟು. ಹುಟ್ಟಿದ ಪ್ರತಿಯೊಬ್ಬ ವ್ಯಕ್ತಿಗೂ ಸ್ವಲ್ಪವಾದರೂ ಜೀವನಾಧಾರವು ದೊರೆಯುತ್ತಿರುವುದು; ಅಲ್ಲದೆ ಯಾವನೊಬ್ಬ ವ್ಯಕ್ತಿಯೂ ಇತರರೆಲ್ಲರಿಗಿಂತ ಹೆಚ್ಚು ಸಿರಿವಂತನಾಗಲು ಅವಕಾಶವಿಲ್ಲ. ಆದುದರಿಂದ ಸಿರಿವಂತರಿಗೂ ಬಡವರಿಗೂ ಪಾಶ್ಚಾತ್ಯ ದೇಶಗಳಲ್ಲಿರುವಂತೆ ನಮ್ಮ ದೇಶದಲ್ಲಿ ಹೆಚ್ಚು ಅಂತರವಿಲ್ಲ. ಆದುದರಿಂದ ಶಾಸನದಮೂಲಕ ದಾಯಭಾಗದ ಪದ್ಧತಿಯನ್ನು ಬದಲಾಯಿಸುವುದು ಸಾಧ್ಯವೂ ಇಲ್ಲ; ಸಾಧುವೂ ಅಲ್ಲವೆನ್ನಬಹುದು.

ಈ ಸಂದರ್ಭದಲ್ಲಿ ಇತರ ದೇಶೀಯರ ಅನುಭವದಿಂದ ನಾವು ಸ್ವಲ್ಪ ಲಾಭವನ್ನು ಪಡೆಯಬಹುದು. ಏಕೆಂದರೆ ಜಮೀನಿನ ತಾಕುಗಳು ಚಿಕ್ಕವಾಗಿರುವುದು ನಮ್ಮ ದೇಶದಲ್ಲಿ ಮಾತ್ರವೇ ಅಲ್ಲ. ಪಾಶ್ಚಾತ್ಯ, ಪೌರಸ್ತ್ಯ ದೇಶಗಳಲ್ಲನೇಕಕಡೆ ಈ ಸಮಸ್ಯೆಯು ಸಮಾಜದ ಮುಂದೆ ಇದ್ದೇ ಇದೆ. ಈ ಕೆಳಗಿನ ಅಂಕಿಗಳನ್ನು ನೋಡಿ.

| ದೇಶ | | | ಸರಾಸರಿ ತಾಕುಗಳು | |
|---|---|---|---|---|
| 1. ಡೆನ್ಮಾರ್ಕ್ | 1919 | .... | 40 | ಎಕರೆಗಳು.[9] |
| 2. ಹಾಲೆಂಡ್ | 1910 | .... | 26 | ,, |
| 3. ಜರ್ಮನಿ | 1907 | .... | 21.5 | ,, |
| 4. ಫ್ರಾನ್ಸ್ | 1892 | .... | 20.5 | ,, |
| 5. ಬೆಲ್ಜಿಯಂ[10] | | .... | 14.5 | ,, |

6. ಇಟಲಿ 4931000 ಹಿಡುವಳಿದಾರರಲ್ಲಿ 3275000 ಮಂದಿ 2½ ಎಕರೆಗಿಂತ ಕಡಮೆಯಾದ ತಾಕಿನವರು.[11]

7. ಜಪಾನ್ ಶೇಕಡ 96 ಮಂದಿ 8ಎಕರೆಗಿಂತ ಕಡಮೆಯ ತಾಕಿನವರು.[12]

ಮೇಲೆ ಕಂಡ ದೇಶಗಳು ತಮ್ಮ ರೈತರ ಜೀವನದ ಅಂತಸ್ತು ಹದ ಗೆಡದಂತೆ ನೋಡಿಕೊಳ್ಳಲು ಹಲವು ಉಪಾಯಗಳನ್ನು ಅನುಸರಿಸುತ್ತಿವೆ.

ಅಂತಹ ಉಪಾಯಗಳಲ್ಲಿ ಫ್ರಾನ್ಸ್ ದೇಶದವರ ಉಪಾಯವು ಬಹುಮುಖ್ಯ. ಆದೇಶದವರು ಸಂತಾನನಿರೋಧಕ್ರಮವನ್ನು ಶಾಸ್ತ್ರೀಯ ವಾಗಿ ಅನುಸರಿಸುತ್ತಿರುವುದರಿಂದ ಇದುವರೆಗೂ ಅಲ್ಲಿಯ ಜನಸಾಮಾನ್ಯದ ಜೀವನದ ಅಂತಸ್ತು ಉತ್ತಮವಾಗಿ ನಿಂತಿದೆ. ಇಟಲಿದೇಶದವರು ತಮ್ಮ ರೈತರ ಸಂಖ್ಯೆಯು ಹೆಚ್ಚಿದಂತೆಲ್ಲ ಪರದೇಶಗಳಿಗೆ ವಲಸೆ ಹೋಗುತ್ತಿರು ವರು. ತತ್ಫಲವಾಗಿ ಪರದೇಶಗಳಿಂದ ತಮ್ಮ ದೇಶಕ್ಕೆ ಹೆಚ್ಚುಹೆಚ್ಚು ಹಣವನ್ನು ಕಳುಹಿಸುತ್ತಿರುವರು. ಜಪಾನ್‌ದೇಶದವರು ಉಪವೃತ್ತಿಗಳ ಮೂಲಕ ತಮ್ಮ ಕಷ್ಟನಿವಾರಣೆಗೆ ಪ್ರಯತ್ನಮಾಡುತ್ತಿರುವರು. ಡೆನ್ಮಾರ್ಕ್ ಮತ್ತು ಹಾಲೆಂಡ್ ದೇಶಗಳಲ್ಲಿಯೂ ಪಶುಪಾಲನೆಯ ಮೂಲಕ ಬೇಸಾಯ ಗಾರರು ತಮ್ಮ ಸಂಪಾದನೆಯನ್ನು ಹೆಚ್ಚಿಸಿಕೊಳ್ಳುತ್ತಿರುವರು. ಈ ಉಪಾ ಯಗಳು ನಮ್ಮ ದೇಶಕ್ಕೆ ಎಷ್ಟರಮಟ್ಟಿಗೆ ಅನ್ವಯವಾಗುವುವೆಂಬುದನ್ನು ಈ ಗ್ರಂಥದ ಬೇರೆಡೆಯಲ್ಲಿ ವಿಮರ್ಶಿಸಿರುವೆವು.

ಈ ಸಂದರ್ಭದಲ್ಲಿ ನಮ್ಮ ಬೇಸಾಯಕ್ರಮವನ್ನು ಉತ್ತಮಪಡಿಸು ವುದು ಎಷ್ಟು ಅಗತ್ಯವೆಂಬುದನ್ನು ಹೇಳಬೇಕಾದುದೇ ಇಲ್ಲ. ತಾಕುಗಳು ಚಿಕ್ಕವಾದಷ್ಟೂ ಬೆಲೆಬಾಳುವ ಉತ್ತಮವಾದ ಹಣ್ಣುಹಂಪಲುಗಳನ್ನು ಶಾಸ್ತ್ರೀಯವಾದ ಕೃಷಿಯ ಮೂಲಕ ಬೆಳೆಯಿಸಿ ತಮ್ಮ ಸಂಪಾದನೆಯನ್ನು ರೈತರು ಹೆಚ್ಚಿಸಿಕೊಳ್ಳಬಹುದು. ಬೆಲ್ಜಿಯಂದೇಶದ ರೈತರೂ, ಜಪಾನಿನ ರೈತರೂ ಇದಕ್ಕೆ ಉತ್ತಮನಿದರ್ಶನಗಳಾಗಿರುವರು.

ಜಮೀನಿನ ತಾಕುಗಳು ಅತಿ ಚಿಕ್ಕವೆಂಬುದನ್ನು ನಾವು ವಿಮರ್ಶಿ ಸಿದುದಾಯಿತು. ಆದರೆ ನಮ್ಮ ತಾಕುಗಳ ಹಂಚಿಕೆಯಲ್ಲಿ ಇದಕ್ಕಿಂತಲೂ ನೂರ್ಮಡಿಯಾದ ಇನ್ನೊಂದು ಕಷ್ಟವಿದೆ. ಅದನ್ನು ನಾವು ಪರೀಕ್ಷಿಸ ಬೇಕು. ಪ್ರತಿಯೊಬ್ಬ ರೈತನಿಗೂ ಬೇಸಾಯಕ್ಕೆ ದೊರೆಯುವ ಜಮೀ ನೆಲ್ಲ ಒಂದೇ ಕಡೆಯಲ್ಲಿದ್ದರೆ, ಅದು ತೀರ ಚಿಕ್ಕತಾಕಾಗಿದ್ದರೂ ಸ್ವಲ್ಪ ಪ್ರಯೋಜನವುಂಟು. ಅದಕ್ಕೆ ಪ್ರತಿಯಾಗಿ ನಮ್ಮ ಹಳ್ಳಿಗಳಲ್ಲಿ ಒಬ್ಬ

ರೈತನಿಗೆ ಸೇರಿರುವ ಸ್ವಲ್ಪ ಜಮೀನೂ ಊರಿನ ನಾನಾಕಡೆಯಲ್ಲಿಯೂ ತುಂಡುತುಂಡಾಗಿ ಚದರಿರುವುದು. ಪಂಜಾಬಿನ ಒಂದು ಹಳ್ಳಿಯಲ್ಲಿ 584 ಜನ ರೈತರಿಗೆ ಸೇರಿದ 2353 ಎಕರೆ ಜಮೀನನ್ನು 16311 ತಾಕುಗಳಾಗಿ ವಿಂಗಡಿಸಿದ್ದರೆಂದು ಪಿ. ಜಿ. ಕಾಳೆಯವರು ಹೇಳುತ್ತಾರೆ.[13] ಮೈಸೂರಿನ ಹಳ್ಳಿಗಳಲ್ಲಿಯೂ ಪ್ರಾಯಕವಾಗಿ ಈ ಕಷ್ಟವು ಇದ್ದೇಇದೆ. ಆದರೆ ಇತರ ಕಡೆಗಳಷ್ಟು ತೊಡಕಾಗಿಲ್ಲವೆಂದು ಸರ್ಕಾರದವರು ನೇಮಿಸಿದ್ದ ಕಮಿಟಿ ಯವರ ವರದಿಯಿಂದ ತಿಳಿವುದು. ಈ ಕೆಳಗಿನ ಅಂಕಿಗಳನ್ನು ನೋಡಿ.[14]

**ಕಮಿಟಿಯವರು ಶೋಧನೆಮಾಡಿದ 80 ಹಳ್ಳಿಗಳಲ್ಲಿ ತಾಕುಗಳಿದ್ದರೀತಿ :—**

| | | | |
|---|---|---|---|
| 1. | ಒಂದೇ ಕಡೆ ಇದ್ದ ತಾಕುಗಳು | .... | 14% |
| 2. | 2-5 ,, | .... | 42.4% |
| 3. | 6-10 ,, | .... | 11.3% |
| 4. | 10 ಕ್ಕಿಂತ ಮಿಗಿಲು | .... | 3.3% |

ಒಬ್ಬ ರೈತನ ಪಾಲಿಗೆ ಬರುವ ಜಮೀನು ಈ ರೀತಿ ಚೆದರಿದ್ದರೆ ಅದರಿಂದಾಗುವ ಅನನುಕೂಲವು ಸರ್ವವಿದಿತವಾಗಿಯೇ ಇದೆ. ಹೀಗೆ ತಾಕುಗಳು ಒಡೆದಿರುವವರೆಗೂ ನಮ್ಮ ಬೇಸಾಯಕ್ರಮವನ್ನು ಸ್ವಲ್ಪವೂ ಬದಲಾಯಿಸಲಾಗುವುದಿಲ್ಲ. ಅಕ್ಕಪಕ್ಕದವರು ಯಾವ ಬೆಳೆಯನ್ನು ತೆಗೆಯುವರೋ ನಾವೂ ಅದೇ ಬೆಳೆಯನ್ನು ತೆಗೆಯಬೇಕು. ನಮ್ಮ ಸಣ್ಣಪುಟ್ಟ ತಾಕುಗಳಿಗೆ ನಾವು ಬೇಲಿಹಾಕಿಸುವುದು ಅಸಾಧ್ಯ. ಅಲ್ಲದೆ ಸುಗ್ಗಿಯ ಕಾಲವು ಮುಗಿದ ಮೇಲೆ ಇತರರ ದನಗಳು ನಮ್ಮ ಜಮೀನಿನ ಮೇಲೆ ತಿರುಗಲೇ ಬೇಕಾಗಿರುವುದು. ಎಲ್ಲಾ ವಿಧದಲ್ಲಿಯೂ ಇತರರ ಬೇಸಾಯದ ಪಂಚಾಂಗವನ್ನೇ ನಾವೂ ಅನುಸರಿಸಬೇಕು. ಬೇಸಾಯಕ್ಕೆ ತಗಲುವ ವೆಚ್ಚವೂ ಹೆಚ್ಚುವುದು. ನಮ್ಮ ಜಮೀನೆಲ್ಲವೂ ಒಂದೆಡೆಯಲ್ಲೇ ಇದ್ದರೆ ಅವುಗಳನ್ನು ಕಾಯುವುದು ಸುಲಭ. ಇಲ್ಲವಾದರೆ ಕಾವಲಿಗಾಗಿ

ಹೆಚ್ಚು ಹಣವನ್ನು ತೆಗೆದಿಡಲೇ ಬೇಕಾಗುವುದು. ಬೇಲಿ, ಬದು ಕಾಲುವೆ—ಇವುಗಳಿಗಾಗಿ ಸಣ್ಣ ಸಣ್ಣ ತಾಕುಗಳು ಹೆಚ್ಚು ಸ್ಥಳವನ್ನು ನುಂಗುವುವು. ಉತ್ತಮವಾದ ಉಪಕರಣಗಳನ್ನು ಉಪಯೋಗಿಸುವುದು ಅಸಾಧ್ಯ. ತಾಕಿನಿಂದ ತಾಕಿಗೆ ತಿರುಗುವುದರಲ್ಲಿಯೇ ಕಾಲಹರಣವಾಗುವುದು. ಎಲ್ಲಕ್ಕಿಂತಲೂ ಮಿಗಿಲಾಗಿ ಅಕ್ಕಪಕ್ಕದವರೊಡನೆ ವ್ಯಾಜ್ಯವು ಬಲಿಯುವುದು.

[Note—ಕೆಲವು ಶೋಧಕರ ಹೇಳಿಕೆ: ನಮ್ಮ ಜಮೀನು ನಮ್ಮ ವಾಸಸ್ಥಳದಿಂದ ದೂರವಾಗಿದ್ದಷ್ಟೂ ಪ್ರತಿ 500 ಗಜ ದೂರಕ್ಕೂ ಕೂಲಿ ಮತ್ತು ಉಳುಮೆಯಲ್ಲಿ ಶೇ. 5.3 ರರಷ್ಟು ಗೊಬ್ಬರ ಸಾಗಿಸುವುದರಲ್ಲಿ ಶೇ. 20 ರಿಂದ 35 ರಷ್ಟು ಬೆಳೆಯನ್ನು ಸಾಗಿಸುವುದರಲ್ಲಿ ಶೇಕಡ 15 ರಿಂದ 32 ರಷ್ಟು ಹೆಚ್ಚು ವೆಚ್ಚವಾಗುವುದು.[15]]

ಆದರೆ ನಮ್ಮ ತಾಕುಗಳು ಒಡೆದಿರುವುದರಿಂದ ಪ್ರಯೋಜನವೇ ಇಲ್ಲವೆಂದಲ್ಲ. ನಮಗೆ ತಿಳಿದ ಒಂದು ಹಳ್ಳಿಯ ಕೆರೆಯ ಕೆಳಗೆ ಎರಡು ಬಯಲುಗಳಿವೆ. ಅವೆರಡಕ್ಕೂ ಏಕಕಾಲದಲ್ಲಿ ಕೆರೆಯ ನೀರನ್ನು ಉಪಯೋಗಿಸಿದರೆ ಸಾಕಾಗುವುದಿಲ್ಲ. ಆದುದರಿಂದ ಒಂದೊಂದು ಬಯಲಿನಲ್ಲಿ ಒಂದೊಂದು ಕಾಲದಲ್ಲಿ ಮಾತ್ರ ಬೆಳೆಯನ್ನು ತೆಗೆಯಬೇಕೆಂಬ ನಿಯಮವಿದೆ. ಇಂತಹ ಸಂದರ್ಭದಲ್ಲಿ ರೈತನಿಗೆ ಎರಡು ಬಯಲಿನಲ್ಲಿಯೂ ಜಮೀನಿದ್ದರೆ ಉತ್ತಮವಲ್ಲವೆ? ಅಲ್ಲದೆ ಜಮೀನೆಲ್ಲವೂ ಒಂದೇವಿಧವಾಗಿರುವುದಿಲ್ಲ; ಆದುದರಿಂದ ಪ್ರತಿಯೊಬ್ಬ ರೈತನಿಗೂ ಎಲ್ಲ ವಿಧವಾದ ಜಮೀನಿನಲ್ಲಿಯೂ ಭಾಗಸಿಕ್ಕಿದರೆ ಅನುಕೂಲವಲ್ಲವೇ ?

ಆದರೂ ನಮ್ಮ ದೇಶದ ಬೇಸಾಯಕ್ರಮವು ಅಭಿವೃದ್ಧಿಗೆ ಬರಬೇಕಾದರೆ, ನಮ್ಮ ರೈತರ ಬಾಳಿನ ಅಂತಸ್ತು ಉತ್ತಮವಾಗಬೇಕಾದರೆ ಆದಷ್ಟುಜಾಗ್ರತೆಯಾಗಿ ಒಡೆದಿರುವ ತಾಕುಗಳನ್ನು ಒಟ್ಟುಗೂಡಿಸಬೇಕು.

ನಮ್ಮ ದೇಶದ ಕೆಲವು ಭಾಗಗಳಲ್ಲಿ ಈ ಕೊರತೆಯನ್ನು ಹೋಗಲಾಡಿಸಲು ಪ್ರಯತ್ನಗಳು ನಡೆದಿವೆ. ಇವುಗಳಲ್ಲಿ ಅತಿಮುಖ್ಯವಾದುದು ಪಂಜಾಬಿನಲ್ಲಿ ನಡೆದಿರುವ ಏರ್ಪಾಡು. ಕಾಲ್ವರ್ಟ್, ಡಾರ್ಲಿಂಗ್ ಮೊದ

ಲಾದ ಉತ್ಸಾಹಶಾಲಿಗಳಾದ ಕೆಲವು ಸರ್ಕಾರಿ ನೌಕರರು ಬಹು ಶ್ರಮಪಟ್ಟು ಈ ಕೆಲಸದಲ್ಲಿ ಮುಂದುವರಿದಿದ್ದಾರೆ. ಹಳ್ಳಿಗಳಲ್ಲಿ ಪರಸ್ಪರಸಹಾಯಕ ಸಂಘಗಳನ್ನು ಸ್ಥಾಪಿಸಿ ಆ ಸಂಘಗಳ ಮೂಲಕವಾಗಿ ಒಡೆದುಹೋಗಿರುವ ತಾಕುಗಳನ್ನು ಒಟ್ಟುಗೂಡಿಸುವುದೇ ಅವರ ಉಪಾಯವು. ಈ ಪ್ರಯತ್ನವು ಶ್ಲಾಘನೀಯವಾಗಿ ಫಲಿಸುತ್ತಿದೆ. ಇಂತಹ ಸಂಘಗಳು 1921 ರಲ್ಲಿ ಆರಂಭವಾದುವು. 1931 ರಲ್ಲಿ 43000 ಮೆಂಬರುಗಳುಳ್ಳ 800 ಸಂಘಗಳಿದ್ದುವು. 1931 ನೆಯ ಇಸವಿಯೊಂದರಲ್ಲಿಯೇ ಸರಾಸರಿ $\frac{3}{8}$ ಎಕರೆ ವಿಸ್ತಾರವುಳ್ಳ 118000 ತಾಕುಗಳನ್ನು ಸರಾಸರಿ $3\frac{1}{8}$ ಎಕರೆಗಳ ವಿಸ್ತಾರವುಳ್ಳ 21600 ತಾಕುಗಳಾಗಿ ಒಟ್ಟುಗೂಡಿಸಲಾಯಿತು.[16]

ಪರಸ್ಪರಸಹಾಯಕಸಂಘಗಳು ಈ ಕಷ್ಟವನ್ನು ನಿವಾರಣೆ ಮಾಡಬಲ್ಲುವು. ಆದರೆ ಶಾಸನದ ಸಹಾಯವಿಲ್ಲದಿದ್ದರೆ ಇದು ನಡೆಯುವುದು ಬಹು ಕಷ್ಟ. ಏಕೆಂದರೆ ಖಾಸಗಿ ರೀತಿಯಲ್ಲಿಯೇ ತಾಕುಗಳು ಒಟ್ಟುಗೂಡಬೇಕಾದರೆ ರೈತರೆಲ್ಲರೂ ಒಪ್ಪಬೇಕು ; ಅವಿವೇಕಿಯಾದ ರೈತನೊಬ್ಬನಿದ್ದರೂ ಕೆಲಸವು ಕೆಡುವುದು. ಆದುದರಿಂದ ಶಾಸನವು ಅತ್ಯಾವಶ್ಯಕ. ಜರ್ಮನಿ, ಫ್ರಾನ್ಸ್ ಮೊದಲಾದ ದೇಶಗಳ ಅನುಭವವೂ ಇದಕ್ಕೆ ಬೆಂಬಲವನ್ನು ಕೊಡುತ್ತಿದೆ. ಫ್ರಾನ್ಸ್‌ದೇಶದ ವ್ಯವಸಾಯಕ್ರಮವು ಜರ್ಮನಿಯ ವ್ಯವಸಾಯಕ್ರಮಕ್ಕಿಂತ ಹಿಂದುಬಿದ್ದಿರುವುದಕ್ಕೆ ಜರ್ಮ್ಸ್ ಸರಕಾರದವರು ಬಲಾತ್ಕಾರದಿಂದ ತಾಕುಗಳನ್ನು ಒಟ್ಟುಗೂಡಿಸಿದುದೂ, ಫ್ರಾನ್ಸ್ ಸರ್ಕಾರದವರು ಈ ಕೆಲಸವನ್ನು ಖಾಸಗಿ ಜನಗಳಿಗೆ ಬಿಟ್ಟುದೂ ಕಾರಣವೆಂದು ಡಾರ್ಲಿಂಗ್‌ರವರು ಅಭಿಪ್ರಾಯಪಡುತ್ತಾರೆ.[17]

ಬರೋಡ ಸರ್ಕಾರದವರು ಒಂದು ಶಾಸನವನ್ನು ಜಾರಿಗೆ ತಂದಿರುವರು. ಅದರಂತೆ ರೈತರಿಗೆ ಮನಬಂದಲ್ಲಿ ತಾಕುಗಳನ್ನು ಒಟ್ಟುಗೂಡಿಸಲು ಕೆಲವು ಅನುಕೂಲಗಳನ್ನು ಕಲ್ಪಿಸಿರುವರು. ಆದರೆ ಒಬ್ಬಿಬ್ಬರು ರೈತರು ಒಪ್ಪದಿದ್ದರೂ ಈ ಶಾಸನವು ಜಾರಿಗೆ ಬರಲಾರದಂತಿದೆ. ಅವಿದ್ಯಾವಂತ

ರಾದ ಮತ್ತು ಸಂಪ್ರದಾಯವೆಂಬ ಹಳ್ಳದಲ್ಲಿ ಬಿದ್ದು ನರಳುತ್ತಿರುವ ನಮ್ಮ ನಾಡಿನ ರೈತರಿಗೆ ತಮ್ಮ ಹಿತವು ಯಾವುದೆಂದು ತಿಳಿಯದು. ರೋಗಿಗೆ ಬಲಾತ್ಕಾರವಾಗಿ ಔಷಧಿಯನ್ನು ಕುಡಿಸುವಂತೆ ನಮ್ಮ ರೈತರನ್ನೂ ಬಲಾತ್ಕರಿಸಿ ಅವರಿಂದ ಕೆಲವು ಒಳ್ಳೆಯ ಕೆಲಸಗಳನ್ನು ಅವರ ಹಿತದೃಷ್ಟಿಯಿಂದಲೇ ಮಾಡಿಸಬೇಕಾಗಿದೆ.

ಮಧ್ಯಪ್ರಾಂತದಲ್ಲಿ ಜಾರಿಯಲ್ಲಿರುವ ಶಾಸನವು ಇತರ ಪ್ರಾಂತಗಳಿಗೆ ಮಾದರಿಯಾಗಿದೆ. ಯಾವ ಹಳ್ಳಿಯಲ್ಲಿ ⅔ ಪಾಲು ರೈತರು ಒಪ್ಪುವರೋ ಆ ಹಳ್ಳಿಯಲ್ಲಿ ಆ ಶಾಸನವು ಜಾರಿಗೆ ಬರುವುದು. ಉಳಿದವರು ಒಪ್ಪದಿದ್ದರೂ ಆ ಶಾಸನದಲ್ಲಿರುವ ಕೆಲವು ನಿಯಮಗಳನ್ನನುಸರಿಸಿ ಆ ಹಳ್ಳಿಯಲ್ಲಿರುವ ಒಡೆದ ತಾಕುಗಳನ್ನು ಒಟ್ಟುಗೂಡಿಸಲು ಸರ್ಕಾರದವರು ಬಲಾತ್ಕಾರಪಡಿಸಬಹುದು. ಈ ಶಾಸನವು ಎಷ್ಟರಮಟ್ಟಿಗೆ ಫಲಕಾರಿಯಾಗಬಹುದು, ಇತರ ಪ್ರಾಂತಗಳ ಸನ್ನಿವೇಶಕ್ಕೆ ಎಷ್ಟುಮಟ್ಟಿಗೆ ಅನ್ವಯವಾಗಬಹುದು ಎಂಬುದನ್ನು ಕಾಲಕ್ರಮೇಣ ತಿಳಿಯಬೇಕು. ಪ್ರಾಯಶಃ ಇತರ ಎಲ್ಲಾ ಪ್ರಾಂತಗಳಲ್ಲಿಯೂ ಇದೇ ವಿಧವಾದ ಶಾಸನನಿರ್ಬಂಧವನ್ನು ಉಪಯೋಗಿಸುವರೆಂದು ನಾವು ಆಶಿಸಬಹುದು.

ಮೇಲೆ ಹೇಳಿರುವ ರೀತಿಯಲ್ಲಿ ಸರ್ಕಾರದವರ ಬಲಾತ್ಕಾರವೊಂದುಕಡೆ, ಪರಸ್ಪರ ಸಹಾಯಕಸಂಘಗಳ ಪ್ರೋತ್ಸಾಹವಿನ್ನೊಂದುಕಡೆ ಈ ಎರಡು ಉಪಾಯಗಳಿಂದ ನಮ್ಮ ಕಷ್ಟಗಳನ್ನು ಪರಿಹಾರಮಾಡಿಕೊಳ್ಳಬಹುದು. ಆದರೆ ಈ ಕಷ್ಟದ ಸ್ವರೂಪವು ರೈತರಿಗೆ ಮನದಟ್ಟದಿದ್ದರೆ ಈ ಕೆಲಸದಲ್ಲಿ ಅವರಿಗೆ ಉತ್ಸಾಹವು ಬಾರದು. ಇತರ ದೇಶಗಳ ರೈತರು ಹೇಗೆ ಇದೇ ವಿಧವಾದ ಕಷ್ಟಗಳನ್ನು ಅನುಭವಿಸುತ್ತಿದ್ದರು; ಇಂದು ಹೇಗೆ ಕಷ್ಟದಿಂದ ಬಿಡುಗಡೆಯನ್ನು ಹೊಂದಿರುವರು; ನಮ್ಮ ನಾಡಿನಲ್ಲಿಯೂ ಇತರ ಪ್ರಾಂತಗಳಲ್ಲಿಯೂ ಯಾವ ಯಾವ ಏರ್ಪಾಡುಗಳನ್ನು ಮಾಡುತ್ತಿದ್ದಾರೆ ಎಂಬಿವನ್ನು ನಮ್ಮ ರೈತರಿಗೆ ತಿಳಿಯಹೇಳಬೇಕು.

ಮೈಸೂರು ಸರ್ಕಾರದವರು ನೇಮಿಸಿದ್ದ ಸಮಿತಿಯ ಸಲಹೆಯಂತೆ ಈ ಕೆಲಸವು ನಮ್ಮ ಪರಸ್ಪರಸಹಾಯಕಸಂಘಗಳ ಇಲಾಖೆಯವರಿಂದ ನಡೆಯಬಹುದು. ಆದರೆ ಈ ವಿಧವಾದ ಜ್ಞಾನಪ್ರಚಾರಕ್ಕೆ ಹಳ್ಳಿಯ ಸ್ಕೂಲುಗಳೇ ಕೇಂದ್ರಗಳಾಗಬೇಕು.

[ಮೈಸೂರು ದೇಶದ ಜಮೀನು ಹಂಚುವಿಕೆಯಲ್ಲಿ ಗುಣದೋಷಗಳನ್ನು ವಿಮರ್ಶಿಸಲು ಸರ್ಕಾರದವರು ನೇಮಿಸಿದ್ದ ಸಮಿತಿಯವರ ಸಲಹೆಗಳು—

1. ಜಮೀನಿನ ತಾಕುಗಳನ್ನು ಒಟ್ಟುಗೂಡಿಸುವುದರ ಉಪಯೋಗವು ರೈತರಿಗೆ ತಿಳಿಯುವಂತೆ ಪರಸ್ಪರ ಸಹಾಯಕಸಂಘದವರು ಪ್ರಚಾರಕಾರ್ಯವನ್ನು ನಡೆಯಿಸುವುದು.

2. ರೈತರು ಅಪೇಕ್ಷಿಸಿದಲ್ಲಿ ತಾಕುಗಳನ್ನು ಒಟ್ಟುಗೂಡಿಸುವ ಸಲುವಾಗಿ ಮಧ್ಯಪ್ರಾಂತದ ಹಿಡುವಳಿಗಳ ಏಕೀಕರಣಶಾಸನ (Consolidation of Holdings Act) ದಂತಹ ಶಾಸನವನ್ನು ತಯಾರಿಸುವುದು.

3. ರೈತರಲ್ಲಿ ಸಾಮಾನ್ಯವಾಗಿ ಸರ್ವಾನುಮತವು ದೊರೆತಕಡೆಗಳಲ್ಲಿ ಈ ಶಾಸನವನ್ನು ಜಾರಿಗೆ ತರುವುದು.

4. ಈ ಶಾಸನವು ಜಾರಿಗೆ ಬರಲು ಡೆಪ್ಯುಟೀಕಮಿಷನರ ಅನುಮತಿಯು ಅವಶ್ಯಕ. ಅವರ ತೀರ್ಮಾನದ ಮೇಲೆ ರೆವಿನ್ಯೂ ಕಮಿಷನರ್ ಮತ್ತು ಲ್ಯಾಂಡ್ ರೆಕಾರ್ಡ್ಸ್ ಡೈರೆಕ್ಟರನ್ನೊಳಗೊಂಡ ಕೋರ್ಟಿಗೆ ಅಪೀಲುಮಾಡುವ ಅಧಿಕಾರವು ರೈತರಿಗಿರಬೇಕು.

5. ಸಿವಿಲ್‌ಕೋರ್ಟುಗಳಿಗೆ ಈ ವಿಷಯದಲ್ಲಿ ಅಧಿಕಾರವಿರಕೂಡದು.

6. ಸ್ಟಾಂಪು ಮತ್ತು ರಿಜಿಸ್ಟ್ರೇಷನ್ ಫೀಜುಗಳ ವಿಷಯದಲ್ಲಿ ರಿಯಾಯಿತಿ ಇರಬೇಕು.

7. ಖರ್ಚನ್ನೆಲ್ಲ ಪ್ರಥಮತಃ ಸರ್ಕಾರದವರೇ ವಹಿಸಬೇಕು.]



# ೬. ಉಪವೃತ್ತಿಗಳು

ರೈತರ ಮುಖ್ಯವೃತ್ತಿಯಾದ ಬೇಸಾಯದಿಂದ ಎಷ್ಟರಮಟ್ಟಿಗೆ ಅವರ ಸಂಪಾದನೆಯನ್ನು ಹೆಚ್ಚುಮಾಡಬಹುದೋ ಅಷ್ಟನ್ನು ನಾವು ಮಾಡಲೇಬೇಕು. ಆದರೆ ಜನಸಂಖ್ಯೆಯು ಹೆಚ್ಚುತ್ತಾ ಪ್ರತಿಯೊಬ್ಬ ರೈತನ ಪಾಲಿಗೂ ಬರುವ ಜಮೀನು ಕೃಶವಾಗುತ್ತ ಬರುವುದಾದುದರಿಂದ (1) ರೈತನಿಗೆ ತನ್ನ ಕುಟುಂಬಪೋಷಣೆಗೆ ಬೇಕಾಗುವಷ್ಟು ಸಂಪಾದನೆ ಯಾಗುವುದಿಲ್ಲ; (2) ಮತ್ತು ಅವನ ಕಾಲವನ್ನೆಲ್ಲಾ ಸದುಪಯೋಗ ಪಡಿಸಲೂ ಆಗುವುದಿಲ್ಲ. ನಮ್ಮ ಜಮೀನಿನ ತಾಕುಗಳು ಚಿಕ್ಕವಾಗಿರು ವುದರಿಂದಲೂ ನಮ್ಮ ಬೇಸಾಯವು ಬಹುಮಟ್ಟಿಗೆ ಮಳೆಗಾಲವನ್ನೇ ಅನು ಸರಿಸಿರುವುದರಿಂದಲೂ ವರ್ಷದಲ್ಲಿ ಅನೇಕ ತಿಂಗಳುಗಳ ಕಾಲ ರೈತರಿಗೆ ಕೆಲಸವಿರುವುದಿಲ್ಲ. ಈ ಬಗೆಯ ನಿರ್ಬಂಧದ ವಿರಾಮದಿಂದ ದೇಶಕ್ಕೆ ಬಹು ಹಾನಿಯುಂಟು. ನಿರುದ್ಯೋಗವು ರೈತರನ್ನು ಬಹುಮಟ್ಟಿಗೆ ಕಲಹ ಪ್ರಿಯರನ್ನಾಗಿ ಮಾಡುವುದು. ಈ ವಿರಾಮಕಾಲವನ್ನು ಒಳ್ಳೆಯ ಸಂಪಾ ದನೆಯಾಗುವ ಯಾವುದಾದರೊಂದು ಉಪವೃತ್ತಿಗಾಗಿ ಉಪಯೋಗಿಸಿದರೆ ರೈತನು ಹೆಚ್ಚು ಉಪಕಾರವನ್ನು ಪಡೆಯುವನು. ಈ ವಿಷಯವನ್ನರಿತೇ ಮಹಾತ್ಮಾ ಗಾಂಧಿಯವರು ಕಳೆದ ಹತ್ತಾರು ವರ್ಷಗಳಿಂದಲೂ ಸಂತತ ವಾಗಿ ಖಾದಿಯ ಉಪದೇಶವನ್ನು ಮಾಡುತ್ತಿರುವುದು. ಈಚೆಗೆ ಅವರು ರಾಜಕೀಯರಂಗವನ್ನು ತ್ಯಜಿಸಿ, ನಮ್ಮ ಹಳ್ಳಿಗಳ ಆರ್ಥಿಕಜೀವನದ ಕಡೆಗೆ ತಮ್ಮ ಸಂಪೂರ್ಣ ಕಟಾಕ್ಷವನ್ನು ಬೀರಿ, ಹಳ್ಳಿಯ ಕೈಗಾರಿಕೆಗಳ ಅಭಿವೃದ್ಧಿಗಾಗಿಯೇ ಒಂದು ಸಂಘವನ್ನು ಏರ್ಪಡಿಸಿರುವರು. (All India Village Industries Association.)

ಉಪವೃತ್ತಿಗಳು ಎಷ್ಟು ಮುಖ್ಯವೆಂಬುದನ್ನು ನಾವು ತಿಳಿದುಕೊಳ್ಳ ಬೇಕಾದರೆ, ರೈತರ ನಿರ್ಬಂಧವಿರಾಮದಿಂದ ನಮ್ಮ ದೇಶಕ್ಕೆ ಎಷ್ಟು ನಷ್ಟ

ವಾಗುತ್ತಿದೆಯೆಂಬುದನ್ನು ಗಮನಿಸಬೇಕು. ಇದಕ್ಕೆ ಕೆಳಗಿನ ಅಂಕಿಗಳು ಸಹಾಯಮಾಡುತ್ತವೆ.

ಪಂಜಾಬಿನ ರೈತರ ವಿಷಯವಾಗಿ ಬರೆಯುತ್ತ ಕಾಲ್ವರ್ಟ್ ಎಂಬುವರು ಪ್ರತಿವರ್ಷವೂ ರೈತರಿಗೆ 150 ದಿವಸಗಳು ಕೆಲಸವೆಂದೂ ಉಳಿದ 215 ದಿನಗಳು ರಜವೆಂದೂ ಹೇಳುತ್ತಾರೆ.[1] ಮದ್ರಾಸಿನಲ್ಲಿ ಒಂದೇ ಬೆಳೆಯನ್ನು ತೆಗೆಯುವ ರೈತರಿಗೆ ಸರಾಸರಿ 5 ತಿಂಗಳೂ ಎರಡು ಬೆಳೆಯನ್ನು ತೆಗೆಯುವವರಿಗೆ 8 ತಿಂಗಳೂ ಕೆಲಸ ಸಿಕ್ಕುವುದೆಂದು ಸ್ಲೇಟರವರು ಬರೆಯುತ್ತಾರೆ.[2] ಇ. ವಿ. ಲುಕಾಸ್‌ರವರು ಪಂಜಾಬಿನ ರೈತರು ವರ್ಷದಲ್ಲಿ 157 ದಿನಗಳು ಮಾತ್ರ ಕೆಲಸಮಾಡುತ್ತಾರೆನ್ನುವರು.[3] ರಜನೀಕಾಂತದಾಸರು ತಮ್ಮ ಒಂದು ಲೇಖನದಲ್ಲಿ ಸಂಯುಕ್ತಪ್ರಾಂತದ ರೈತರಿಗೆ ವರ್ಷಕ್ಕೆ ಏಳು ತಿಂಗಳು ಮಾತ್ರ ಕೆಲಸವೆನ್ನುತ್ತಾರೆ.[4] ಜಾಕ್ ಎಂಬುವರ ಲೆಕ್ಕದಿಂದ ಬಂಗಾಳದಲ್ಲಿ ಸಣಬನ್ನು ಬೆಳೆಯದ ಕಡೆಯಲ್ಲಿ ಮೂರು ತಿಂಗಳೂ ಸಣಬು, ಬತ್ತ, ಎರಡನ್ನೂ ಬೆಳೆಯುವೆಡೆಯಲ್ಲಿ ಇನ್ನಾರು ವಾರಗಳೂ ಕೆಲಸವುಂಟೆಂದು ತಿಳಿಯುವುದು.[5] ಮೈಸೂರು ಸೆನ್ಸಸ್ ಕಮಿಷನರವರು "ನಮ್ಮ ದೇಶದಲ್ಲಿ ನಿರುದ್ಯೋಗವೂ ಮತ್ತು ಸಾಕಾದಷ್ಟು ಕೆಲಸವಿಲ್ಲದಿರುವುದೂ ಪ್ರಬಲವಾಗಿವೆ; ನಮ್ಮ ದೇಶದಲ್ಲಿ ಒದಗುವ ಕೆಲಸಕ್ಕಿಂತಲೂ ಮಿತಿಮೀರಿದ ಜನಸಂಖ್ಯೆಯಿದೆ ಎಂಬುದರಲ್ಲಿ ಸಂದೇಹವೇ ಇಲ್ಲ" ಎಂದು ಅಭಿಪ್ರಾಯಪಡುತ್ತಾರೆ.[6] ಅಗ್ರಿಕಲ್ಚರಲ್ ಕಮಿಷನ್ನಿನವರೂ ರೈತರಲ್ಲಿ ಬಹುಮಂದಿಗೆ ಪ್ರತಿವರ್ಷದಲ್ಲಿಯೂ 2 ರಿಂದ 4 ತಿಂಗಳುಗಳಾದರೂ ಪೂರ್ಣವಿರಾಮವಿದೆಯೆಂಬುದನ್ನು ಒಪ್ಪುತ್ತಾರೆ.

ಈ ಬಗೆಯ ನಿರ್ಬಂಧವಿರಾಮದಿಂದ ಎಷ್ಟು ನಷ್ಟವೆಂಬುದನ್ನು ಗಮನಿಸಿರಿ. ರಿಚರ್ಡ್‌ಗ್ರೆಗ್ ಎಂಬವರು ಈ ಹಾನಿಯನ್ನು ವಿಶದವಾಗಿ ವರ್ಣಿಸಿರುವರು. ರೈತರ ವಿರಾಮಕಾಲದ ಶಕ್ತಿಯನ್ನು ಎಲೆಕ್ಟ್ರಿಕ್ ಶಕ್ತಿಯೊಡನೆ ಹೋಲಿಸಿ, ಅತ್ಯಲ್ಪವೆಂದರೂ ನಮ್ಮ ಹಳ್ಳಿಗಳಲ್ಲಿ 10700

ಸಾವಿರ ಕುದುರೆಯ ಬಲದಷ್ಟು ಶಕ್ತಿಯು ಉಪಯೋಗವಿಲ್ಲದೆ ವ್ಯರ್ಥವಾಗುತ್ತಿದೆಯೆಂಬುದಾಗಿ ಬರೆಯುತ್ತಾರೆ. ಎಂದರೆ ಅಷ್ಟು ಶಕ್ತಿಯುಳ್ಳ ರೈಲ್ವೆ ಎಂಜನ್‌ಗಳಿಗೆ ಬೆಂಕಿಯನ್ನೂ ನೀರನ್ನೂ ಒದಗಿಸಿ ಅವುಗಳಿಂದ ಕೆಲಸವನ್ನು ತೆಗೆಯದೆಯೇ ಇದ್ದರೆ, ಸಮಾಜಕ್ಕೆ ಎಷ್ಟು ಹಾನಿಯೆಂಬುದನ್ನು ಗಮನಿಸಿ.

ಇಷ್ಟು ಅಪಾರವಾದ ಶಕ್ತಿಯನ್ನು ಸಂಪಾದನೆಯಾಗುವ ಮಾರ್ಗದಲ್ಲಿ ಉಪಯೋಗಿಸಬೇಕಲ್ಲವೆ ? ಇದೆಂತು ? ಈ ಪ್ರಶ್ನೆಗೆ ಸಮಂಜಸವಾದ ಉತ್ತರವು ದೊರೆಯಬೇಕಾದರೆ ನಾವು ಇತರರ ಅನುಭವದಿಂದ ಲಾಭವನ್ನು ಪಡೆಯಬೇಕು. ನಮ್ಮ ಪ್ರಾಚೀನರು ಈ ಸಮಸ್ಯೆಯನ್ನು ಬಿಡಿಸಲೋಸುಗವೇ ತಮ್ಮ ಹಳ್ಳಿಗಳಲ್ಲಿ ಒಂದು ವಿಧವಾದ ಔದ್ಯೋಗಿಕಸಮತೆ (Balance of Occupations) ಯನ್ನು ಒದಗಿಸಿಕೊಂಡಿದ್ದರು. ಹಳ್ಳಿಯ ಜನಗಳಲ್ಲಿ ಬಹುಮಂದಿ ಬೇಸಾಯಗಾರರೇ ಆಗಿದ್ದರೂ ಪ್ರತಿ ಹಳ್ಳಿಯಲ್ಲಿಯೂ ಕಮ್ಮಾರ, ಬಡಗಿ, ಕುಂಬಾರ, ನೆಯ್ಗೆಯವನು ಮುಂತಾದ ಬೇರೆಬೇರೆ ಕಸಬುದಾರರು ಇರುತ್ತಿದ್ದರು. ಬೇಸಾಯಗಾರರೂ ಕೂಡ ತಮ್ಮ ಮುಖ್ಯವಾದ ಕಸಬಿನೊಡನೆ ಕೋಳಿ, ಮೇಕೆ ಮೊದಲಾದುವುಗಳನ್ನು ಸಾಕುವುದು, ನೂಲುವುದು ಮುಂತಾದ ಉಪವೃತ್ತಿಗಳನ್ನು ಇಟ್ಟುಕೊಳ್ಳುತ್ತಿದ್ದರು. ಪಾಶ್ಚಾತ್ಯದೇಶಗಳಲ್ಲಿ ಇಂದಿನ ಯಂತ್ರಯುಗದಲ್ಲಿಯೂ ಕೂಡ ಸಣ್ಣಪುಟ್ಟ ರೈತರು ತಮ್ಮ ಮುಖ್ಯವಾದ ಕಸಬಿನಜೊತೆಗೆ ಬೇರೆ ಅವಲಂಬನವನ್ನೂ ಇಟ್ಟುಕೊಂಡಿರುವರು. ಜರ್ಮನಿ, ಡೆನ್ಮಾರ್ಕ್, ಇಟಲಿ ಮೊದಲಾದ ದೇಶಗಳ ರೈತರೂ ಉಪವೃತ್ತಿಗಳ ಸಹಾಯವಿಲ್ಲದೆ ಬದುಕಲಾರರು. ಜನಸಾಂದ್ರತೆಯು ಬಹಳ ಹೆಚ್ಚಾಗಿರುವ ಜಪಾನ್ ಮತ್ತು ಚೈನಾ ದೇಶದಲ್ಲಿ ರೇಷ್ಮೆಯ ವ್ಯವಸಾಯ, ಹಣ್ಣುಹಂಪಲುಗಳನ್ನು ಬೆಳೆಯುವುದು ಮುಂತಾದ ಉಪವೃತ್ತಿಗಳು ಬಳಕೆಯಲ್ಲಿವೆ. ಆದುದರಿಂದಲೇ ಡಾರ್ಲಿಂಗ್ ರವರು—"ಸಣ್ಣಪುಟ್ಟ ರೈತರು ಯಾವ ದೇಶದಲ್ಲಿಯೇ ಇರಲಿ ವ್ಯವಸಾಯ

ವೊಂದರಿಂದಲೇ ಖಂಡಿತವಾಗಿಯೂ ಜೀವನಮಾಡಲಾರರು; ಅವರು ಉಪವೃತ್ತಿಗಳನ್ನು ಒದಗಿಸಿಕೊಳ್ಳಬೇಕು; ಇಲ್ಲವೆ ಸಾಹುಕಾರರ ಬಲೆಗೆ ಬೀಳಬೇಕು" ಎಂದು ಹೇಳುವರು.[8]

ಈ ವಿಷಯವು ಎಲ್ಲರಿಗೂ ತಿಳಿದಿವೆ. ಆದರೇನು! ನಮ್ಮ ಹಳ್ಳಿಗಳಲ್ಲಿ ಹಿಂದೆ ಬಳಕೆಯಲ್ಲಿದ್ದ ಅನೇಕ ಕೈಗಾರಿಕೆಗಳು ಇಂದು ಮಲಿನವಾಗಿವೆ. ಕೈಗಾರಿಕೆಗಳಲ್ಲಿಯೇ ಆಸಕ್ತರಾಗಿದ್ದ ನಮ್ಮ ನೆಯ್ಗೆಯವರೂ ಬಡಗಿಗಳೂ ಇತರರೂ ಇಂದು ಬಹು ಮರ್ದೆಸೆಯಲ್ಲಿರುವರು. ಸಾಮಾನ್ಯರೈತರಿಗಿಂತಲೂ ಇವರ ಸ್ಥಿತಿಯು ಇನ್ನೂ ಶೋಚನೀಯವಾಗಿರುವುದು. ಮೈಸೂರು ದೇಶವ ಸೆನ್ಸಸ್ ವರದಿಯಿಂದ ಹೊರಬೀಳುವ ಈ ಕೆಳಗಿನ ಅಂಕಿಗಳು ಈ ವಿಷಯವನ್ನು ಸ್ಪಷ್ಟಪಡಿಸುವುವು.

**ಕೆಲವು ಕೈಗಾರಿಕೆಗಳಲ್ಲಿ ಆಸಕ್ತರಾಗಿದ್ದ ಹಳ್ಳಿಯವರ ಸಂಖ್ಯೆ**[9]

| | 1871 | 1931 |
|---|---|---|
| 1. ಅರಳೆಯನ್ನು ನೂಲುವವರು ಮತ್ತು ನೇಯುವವರು | 69500 | 35000 |
| 2. ಉಣ್ಣೆಯನ್ನು ನೂಲುವವರು ಮತ್ತು ನೇಯುವವರು | 18555 | 13603 |
| 3. ಗಾಣಿಗರು | 6088 | 4383 |
| 4. ಲೋಹದಲ್ಲಿ ಕೆಲಸಮಾಡುವವರು | 24458 | 11314 |

ಈ ರೀತಿಯಾಗಿ ನಮ್ಮ ಕೈಗಾರಿಕೆಗಳು ಸಾಯಲು ಕಾರಣಗಳಾವುವು? ಪರದೇಶದ ಯಂತ್ರಗಳಿಂದ ತಯಾರಾದ ಸಾಮಾನುಗಳ ಪೈಪೋಟಿಯೇ ಬಹು ಮುಖ್ಯ ಕಾರಣವೆಂಬುದನ್ನು ಮರೆಯಬಾರದು. ಬ್ರಿಟಿಷರು ನಮ್ಮ ದೇಶಕ್ಕೆ ಬರುವ ಸಮಯದಲ್ಲಿ ನಮ್ಮ ದೇಶದಿಂದ ಅವರಿಗೆ ಹತ್ತಿಯ ಬಟ್ಟೆಯನ್ನು ಒದಗಿಸಿಕೊಡುತ್ತಿದ್ದೆವು. ಇಂದು ಲಾಂಕಾಷೈರ್ ಒಂದರಿಂದಲೇ ಕೋಟ್ಯಂತರ ರೂಪಾಯಿಗಳ ಬೆಲೆಬಾಳುವಷ್ಟು ಬಟ್ಟೆಯನ್ನು ನಾವು ತರಿಸುತ್ತಿರುವೆವು. ಯಂತ್ರಗಳಿಂದ ತಯಾರಿಸುವಷ್ಟು ಸುಲಭ

ವಾಗಿಯೂ ಅಗ್ಗವಾಗಿಯೂ ಚೆನ್ನಾಗಿಯೂ ಕೈಮಗ್ಗಗಳಿಂದ ಬಟ್ಟೆಗಳನ್ನು ತಯಾರಿಸುವುದಕ್ಕಾಗುವುದಿಲ್ಲ. ನಮ್ಮ ಕಸಬುದಾರರೂ ಕೂಡ ತಮ್ಮ ಕಂದಾಚಾರದ ಪದ್ಧತಿಗಳನ್ನು ಬಿಟ್ಟು ಹೊಸಹೊಸ ಮಾದರಿಯ ಪದಾರ್ಥ ಗಳನ್ನು ತಯಾರುಮಾಡಲಾರರು. ಅವರಲ್ಲಿ ಆರ್ಷೇಯವಾದ ಕುಶಲತೆಯು ಸ್ವಲ್ಪಮಟ್ಟಿಗಿದ್ದರೂ ಅವರಿಗೆ ಶಾಸ್ತ್ರೀಯವಾದ ಶಿಕ್ಷಣವಿಲ್ಲ. ಈ ಸಂದರ್ಭ ದಲ್ಲಿ ಮೈಸೂರು ವಿದ್ಯಾಭ್ಯಾಸದ ಇಲಾಖೆಯವರು ಕೊಡಬೇಕೆಂದಿರುವ ವೃತ್ತಿಶಿಕ್ಷಣವು ಉಪಯೋಗಕರವಾಗಬಹುದೆಂಬ ನಂಬುಗೆಯಿದೆ.[10] ಪಾಶ್ಚಾತ್ಯಸಂಸ್ಕೃತಿಯ ಸಂಪರ್ಕದಿಂದ ಜನರ ಮನೋಭಿಪ್ರಾಯವೂ ಬಲು ಮಟ್ಟಿಗೆ ಬದಲಾವಣೆಯನ್ನು ಹೊಂದಿರುವುದು. ಹಿಂದೆ ಒರಟುಬಟ್ಟೆಯನ್ನು ಹೊದೆದು ಕಾಲಹಾಕುತ್ತಿದ್ದವರು ಇಂದು ಮಾಂಚೆಸ್ಟರ್ ಮಲ್ಲನ್ನೇ ಅಪೇಕ್ಷಿ ಸುವರು. ಈ ಕಾರಣಗಳೆಲ್ಲವೂ ನೇರಿ ನಮ್ಮ ಹಳ್ಳಿಗಳಲ್ಲಿದ್ದ ಅನೇಕವೃತ್ತಿ ಗಳನ್ನು ನಾಶಮಾಡಿವೆ. ಹಳ್ಳಿಯ ಜೀವನವು ಸುಖದಾಯಕವಾಗಬೇಕಾದರೆ ಈ ವೃತ್ತಿಗಳ ಪುನರುಜ್ಜೀವನವು ಅವಶ್ಯಕ. ಆದರೆ (1) ಈ ವೃತ್ತಿಗಳ ಆಚ ರಣೆಯಲ್ಲಿ ಹಿಂದಿನ ಕಂದಾಚಾರದ ಪದ್ಧತಿಯನ್ನೇ ಅನುಸರಿಸುತ್ತ ಬರಲಾ ಗದು ; (2) ವೃತ್ತಿಯನ್ನು ಕೈಗೊಳ್ಳುವವರಿಗೆ ವೃತ್ತಿಶಿಕ್ಷಣವು ಅತ್ಯಾ ವಶ್ಯಕ; (3) ಈ ವೃತ್ತಿಗಳೆಲ್ಲವೂ ಬಡವರಿಗೆ ಅನುಕೂಲವಾಗಿರಬೇಕಾದು ದರಿಂದ ಅವರಿಗೆ ಬಂಡವಾಳವನ್ನು ಒದಗಿಸಲು ಶಕ್ತಿಯುಳ್ಳ ಪರಸ್ಪರ ಸಹಾಯಕ ಸಂಘಗಳು ಬೆಳೆಯಬೇಕು ; (4) ಯಾವ ವೃತ್ತಿಯನ್ನು ನಾವು ಬೆಳೆಯಿಸಬೇಕಾದರೂ ತಯಾರಾದ ಪದಾರ್ಥಗಳಿಗೆ ಗಿರಾಕಿಗಳು ದೊರೆಯುವಂತಿರಬೇಕು. ಇವುಗಳನ್ನೆಲ್ಲಾ ಗಮನದಲ್ಲಿಟ್ಟುಕೊಂಡು ಆಯಾಸನ್ನಿವೇಶಗಳಿಗೆ ಅನುಕೂಲವಾದ ವೃತ್ತಿಗಳನ್ನು ಚುನಾಯಿಸಬೇಕು.

ಸಾಮಾನ್ಯವಾಗಿ ಪ್ರತಿಯೊಬ್ಬ ರೈತನೂ ಅನುಸರಿಸಬಹುದಾದ ಉಪವೃತ್ತಿಯೆಂದರೆ ಪಶುಪಾಲನೆಯೇ ಸರಿ. ನಮ್ಮ ದೇಶದಲ್ಲಿ ಅದರ ಲ್ಲಿಯೂ ಮೈಸೂರುದೇಶದಲ್ಲಿ ಪಶುಪಾಲನೆಗೆ ಹೆಚ್ಚು ಅವಕಾಶವಿದೆ. ಆದರೆ

ಕೆಲಸಕ್ಕೆ ಬಾರದ ಪಶುಗಳನ್ನು ಕಾಪಾಡುವುದಕ್ಕಿಂತ ಉತ್ತಮವಾದ ಪಶುಗಳನ್ನು ಕಾಪಾಡಿ, ಶಾಸ್ತ್ರೀಯವಾಗಿ ಹಾಲುಮೊಸರುತುಪ್ಪಗಳನ್ನು ತಯಾರುಮಾಡುವುದು ಮೇಲು. ಪಶುಗಳಿಗೆ ಶುದ್ಧವಾದ ಹುಲ್ಲು ಮತ್ತು ಇತರ ಆಹಾರಗಳನ್ನು ಒದಗಿಸಿಕೊಳ್ಳಲು ಸಕಲಪ್ರಯತ್ನವೂ ನಡೆಯಬೇಕು. ಈ ವಿಷಯುಗಳನ್ನು ಹಿಂದೆಯೇ ವಿಮರ್ಶಿಸಿರುವೆವು.

ನೆಯ್ಗೆಯ ಕೆಲಸವು ಇನ್ನೊಂದು ಮುಖ್ಯಾವಲಂಬನ. ನೂರಾರು ವರ್ಷಗಳಿಂದ ಯಂತ್ರಗಳ ಪೈಪೋಟಿಯು ಹೆಚ್ಚುತ್ತಾಬಂದು, ಕೈಮಗ್ಗಗಳು ಬಹುನೊಂದಿವೆ. ಆದರೆ ಇಂದೂ ಇಂಡಿಯಾದೇಶದ ನಾನಾಭಾಗಗಳಲ್ಲಿಯೂ ಬಹುಮಂದಿ ನೆಯ್ಗೆಯವರಿರುವರು. ಮದ್ರಾಸು ಆಧಿಪತ್ಯದಲ್ಲಿಯೂ ಮೈಸೂರಿನಲ್ಲಿಯೂ ಇವರ ಸಂಖ್ಯೆಯು ಹೆಚ್ಚಾಗಿಯೇ ಇದೆ. ಆದರೆ ಇವರು ಅನುಸರಿಸುತ್ತಿರುವ ಮಾರ್ಗದಲ್ಲಿ ಅನೇಕ ನ್ಯೂನಾತಿರೇಕಗಳಿವೆ. ಅವರ ಪದ್ಧತಿಯಲ್ಲಿ ಬಹುವಾಗಿ ಬದಲಾವಣೆಗಳಾಗಬೇಕಲ್ಲದೆ, ಪರಸ್ಪರ ಸಹಾಯಕಸಂಘಗಳ ಮೂಲಕ ನೂಲು, ನೆಯ್ದಬಟ್ಟೆ ಇವುಗಳ ವ್ಯಾಪಾರಕ್ಕೆ ಅನುಕೂಲವನ್ನು ಒದಗಿಸಿಕೊಡಬೇಕು. ಮೈಸೂರು ಸರ್ಕಾರದವರು ನೆಯ್ಗೆಯವರ ಪರಸ್ಪರ ಸಹಾಯಸಂಘಕ್ಕೆ ಕೊಡುತ್ತಿರುವ ಉತ್ತೇಜನವು ಸ್ತೋತ್ರಾರ್ಹವಾಗಿದೆ.[11] ಹಳೆಯ ರೀತಿಯ ಮಗ್ಗಗಳನ್ನು ಬದಲಾಯಿಸಿ ಉತ್ತಮವಾದ ಫ್ಲೈಷಟಲ್ ಮಗ್ಗಗಳನ್ನು ಬಳಕೆಗೆ ತರಬೇಕು. ಮಗ್ಗದವರೂ ಕೂಡ ದಿನದಿನವೂ ಬದಲಾಗುತ್ತಿರುವ ತಮ್ಮ ಗಿರಾಕಿಗಳ ರುಚಿಗೆ ಅನುಸಾರವಾಗಿ ಹೊಸಹೊಸ ನಮೂನೆಯ ಬಟ್ಟೆಗಳನ್ನು ತಯಾರಿಸಬೇಕು.

ಮೈಸೂರುದೇಶದಲ್ಲಿ ಇನ್ನೊಂದು ಮುಖ್ಯವಾದ ಉಪಾವಲಂಬನವಿದೆ; ಅದೇ ರೇಷ್ಮೆಯ ವ್ಯವಸಾಯ. ಮೈಸೂರಿನ ವಾಯುಗುಣವು ರೇಷ್ಮೆಯ ವ್ಯವಸಾಯಕ್ಕೆ ಬಹು ಅನುಕೂಲವಾಗಿದೆ. ಸರ್ಕಾರದವರ ಪ್ರೇರಣೆಯಿಂದಲೂ, ಸಹಾಯದಿಂದಲೂ ರೇಷ್ಮೆಯಹುಳುಗಳನ್ನು ಸಾಕುವುದೂ

ಬಹುವಾಗಿ ವಾಡಿಕೆಗೆ ಬರುತ್ತಿದೆ. ಆದರೆ ಪರದೇಶದಿಂದ ಬರುವ ರೇಷ್ಮೆ ಮತ್ತು ಕೃತಕರೇಷ್ಮೆಗಳ ಪೈಪೋಟಿಯು ನಮ್ಮ ರೇಷ್ಮೆಯ ವ್ಯವಸಾಯಕ್ಕೆ ಅಡ್ಡಿಯಾಗಿದೆ. ಇದರ ನಿವಾರಣೆಗಾಗಿ ಇಂಡಿಯ ಸರ್ಕಾರದವರ ಸಹಾಯವು ಆವಶ್ಯಕವಾಗುತ್ತಿದೆ.

ಮಹಾತ್ಮಾಗಾಂಧಿಯವರ ಪ್ರಯತ್ನದ ಫಲವಾಗಿ ಇನ್ನೊಂದು ಅವಲಂಬನವು ಸಮಾಜದ ದೃಷ್ಟಿಯನ್ನು ತನ್ನ ಕಡೆಗೆ ಸೆಳೆದಿದೆ; ಅದೇ ನೂಲುವುದು. ಸಾಮಾನ್ಯವಾಗಿ ಪ್ರಾಚೀನಕಾಲದ ಬೇಸಾಯಗಾರರ ಪ್ರತಿ ಕುಟುಂಬದಲ್ಲಿಯೂ ಚರಕಗಳು ಸಿದ್ಧವಾಗಿಯೇ ಇದ್ದುವು. ಬೇಸಾಯ, ಪಶುಪಾಲನೆ, ನೂಲುವುದು—ಇವು ಮೂರೂ ಪ್ರತಿಯೊಬ್ಬ ರೈತನ ಖಜಾನೆಗಳಾಗಿದ್ದುವು. ನಮ್ಮ ದೇಶದಲ್ಲಿಯೂ ಅನೇಕಕಡೆ ಚರಕಗಳು ಪ್ರಬಲವಾಗಿದ್ದುವು. ಆದರೆ ಇಟಾಲಿಯನರ ವಿಷವಾಯುವಿನ ಮುಂದೆ ನಿಲ್ಲಲಾರದೆ ಓಡಿಹೋದ ಅಬಿಸೀನಿಯ ಚಕ್ರವರ್ತಿಯಂತೆ ಯಂತ್ರಗಳ ಢಕ್ಕೆಯನ್ನು ತಡೆಯಲಾರದೆ ಚರಕಗಳು ಮೂಲೆಪಾಲಾಗಿದ್ದುವು. ಗಾಂಧಿಯವರು ರೈತರ ಉದ್ಧಾರಕ್ಕೆ ಮತ್ತು ನಮ್ಮ ದೇಶದಲ್ಲಿ ಸ್ವರಾಜ್ಯಸ್ಥಾಪನೆಗೆ ಚರಕವೇ ಪ್ರಧಾನಯಂತ್ರವೆಂದು ಸಾರಿ, ಇದಕ್ಕಾಗಿ ಬಹುಶ್ರಮವನ್ನು ವಹಿಸಿದರು. ತತ್ಫಲವಾಗಿ ಅನೇಕ ಹಳ್ಳಿಗಳಲ್ಲಿ ಚರಕಗಳು ಶಬ್ದಮಾಡಹತ್ತಿವೆ. ನಮ್ಮ ಮೈಸೂರು ಸರಕಾರದವರೂ ಕೆಲವು ಖಾದೀ ಕೇಂದ್ರಗಳನ್ನು ಸ್ಥಾಪಿಸಿ, ಈ ಉಪಾವಲಂಬನಕ್ಕೆ ಪ್ರೋತ್ಸಾಹವನ್ನು ಕೊಡುತ್ತಿದ್ದಾರೆ. ಬದನವಾಳದ ಸುತ್ತಮುತ್ತ ಅನೇಕ ಕುಟುಂಬದವರಿಗೆ ಹೊಸಜೀವನದ ಹಾದಿಯೊಂದು ದೊರೆತಂತಾಗಿದೆ. ಚರಕವನ್ನೇಕೆ ಪುನರುದ್ಧಾರಮಾಡಬೇಕೆಂಬ ವಿಷಯದಲ್ಲಿ ಗಾಂಧಿಯವರು ಕೊಟ್ಟಿರುವ ಕೆಲವು ಕಾರಣಗಳನ್ನು ಯಾವ ಉಪಾವಲಂಬನಕ್ಕಾದರೂ ಜೋಡಿಸಿ ನೋಡಬಹುದು. ಆದುದರಿಂದ ಆ ಕಾರಣಗಳನ್ನು ಇಲ್ಲಿ ಹೇಳೋಣ.

1. ಇದು ತತ್‍ಕ್ಷಣವೇ ಸಾಧ್ಯ; ಹೆಚ್ಚು ಬಂಡವಾಳವು ಬೇಕಿಲ್ಲ; ಹೆಚ್ಚು ಬುದ್ಧಿಶಕ್ತಿಯು ಬೇಕಿಲ್ಲ; ಇದು ಹೊಸದಲ್ಲ.

2. ಆಹಾರಕ್ಕೆ ಎಷ್ಟು ಗಿರಾಕಿಗಳು ದೊರೆಯುವರೋ, ನೂಲಿಗೂ ಅಷ್ಟೇ ಗಿರಾಕಿಗಳು ದೊರೆಯುವರು.

3. ಕ್ಷಾಮಕಾಲದಲ್ಲಿಯೂ ಚರಕವನ್ನು ನಡೆಯಿಸಬಹುದು.

4. ಜನರ ಮತಕ್ಕಾಗಲಿ, ಪದ್ಧತಿಗಾಗಲಿ ವಿರೋಧವಾಗಿಲ್ಲ.

5. ಕುಟುಂಬದವರೆಲ್ಲರೂ ಮನಬಂದಾಗಲೆಲ್ಲ ಈ ಕೆಲಸವನ್ನು ಮಾಡಬಹುದು; ಇದಕ್ಕಾಗಿ ಮನೆಯನ್ನು ಬಿಟ್ಟುಹೋಗಬೇಕಾದುದೇ ಇಲ್ಲ.

ಅವರು ಇನ್ನೂ ಕೆಲವು ಕಾರಣಗಳನ್ನು ಕೊಡುವರು.[12] ಅವು ನಮಗೆ ಅಷ್ಟು ಪ್ರಕೃತವಾದುವಲ್ಲ.

ಗಾಂಧಿಯವರ ಮತ್ತು ಅವರ ಅನುಯಾಯಿಗಳ ಚಳುವಳಿಯು ಪ್ರಬಲವಾಗಿದ್ದಾಗ ಖಾದಿಯು ವಿಶೇಷವಾಗಿ ಪ್ರಚಾರದಲ್ಲಿದ್ದಿತು. ಆದರೆ ಇದು ಸಹಜವಾಗಿ ಬೇರೂರಿ ನಿಲ್ಲುವುದೇ ಎಂಬುದನ್ನು ಹೇಳುವುದು ಕಷ್ಟ. ಕೃತಕವಾದ ಉತ್ತೇಜನವು ಇರುವವರೆಗೂ ಜೀವಿಸಿದ್ದು ಅನಂತರ ಮೃತಿ ನೈದಿದರೆ ಪ್ರಯೋಜನವೇನು? ಅನೇಕ ಅರ್ಥಶಾಸ್ತ್ರಜ್ಞರು ಚರಕಕ್ಕಿಂತಲೂ ಕೈಮಗ್ಗಕ್ಕೆ ಹೆಚ್ಚು ಪ್ರಾಧಾನ್ಯವನ್ನು ಕೊಡುತ್ತಾರೆ.

ಈ ಉಪಾವಲಂಬನಗಳ ವಿಷಯದಲ್ಲಿ ಅಗ್ರಿಕಲ್ಚರಲ್ ಕಮಿಷನ್ನಿನವರು ಹೆಚ್ಚು ಭರವಸೆಯನ್ನಿಟ್ಟಿಲ್ಲ. ಇದಕ್ಕೆ ಪ್ರತಿಯಾಗಿ ಅಕ್ಕಿಯ ಮಿಲ್ಲುಗಳು, ಅರಳೆಯ ಜಿನ್ನುಗಳು ಮುಂತಾದುವನ್ನು ಹಳ್ಳಿಗಳಲ್ಲಿ ಸ್ಥಾಪಿಸಿ, ರೈತರಿಗೆ ಹೆಚ್ಚು ಅವಲಂಬನವನ್ನು ದೊರಕಿಸಬಹುದೆಂದೂ, ವ್ಯವಸಾಯದ ಮುಟ್ಟುಗಳನ್ನು ತಯಾರುಮಾಡುವ ಕಾರ್ಖಾನೆಗಳನ್ನು ಸ್ಥಾಪಿಸಬಹುದೆಂದೂ ಹೇಳುತ್ತಾರೆ. ಅವರ ಅಭಿಪ್ರಾಯವೇನೆಂದರೆ —"ರೈತರು ತಮ್ಮ ಕಸಬಾದ ವ್ಯವಸಾಯದಲ್ಲಿ ಇರುವಷ್ಟು ಚತುರತೆಯನ್ನು ಇನ್ನಾವ ಕಸಬಿನಲ್ಲಿಯೂ ಪ್ರಕಟಿಸಲಾರರು. ಆದುದರಿಂದ ಅವರ ಅಭಿವೃದ್ಧಿಯು ವ್ಯವ

ಸಾಯದ ಅಭಿವೃದ್ಧಿಯನ್ನು ಅನುಸರಿಸುವುದೇ ವಿನಾ ಉಪಾವಲಂಬನಗಳ ಬೆಳವಣಿಗೆಯನ್ನಲ್ಲ.[13] " ಎಂಬುದು.

ನಮ್ಮ ದೇಶದಲ್ಲಿ ಕಾರ್ಖಾನೆಗಳ ಅಭಿವೃದ್ಧಿಯೆಂದರೆ, ಸರ್ ಎಂ. ವಿಶ್ವೇಶ್ವರಯ್ಯನವರಿಗೆ ಪ್ರಾಣ. ಆದರೆ ಅವರೂ ಕೂಡ ರೈತರಿಗೆ ಉಪಾವಲಂಬನವು ಮುಖ್ಯವೆಂಬುದಾಗಿ ಬರೆಯುತ್ತಾರೆ. ಅವರು ಉಪಾವಲಂಬನಗಳ ಪಟ್ಟಿಯೊಂದನ್ನು ಕೊಟ್ಟು ಅವುಗಳಲ್ಲಿ ಆಯಾ ಸನ್ನಿವೇಶಕ್ಕೆ ಅನುಗುಣವಾದ ಅವಲಂಬನಗಳನ್ನು ಆರಿಸಿಕೊಳ್ಳಬಹುದೆಂಬುದಾಗಿ ಹೇಳುತ್ತಾರೆ.[14]

1. ವ್ಯವಸಾಯದ ಮುಟ್ಟುಗಳನ್ನು ತಯಾರಿಸುವುದು.
2. ಪಶುಪಾಲನೆ.
3. ಹಣ್ಣುಗಿಡಗಳು.
4. ತರಕಾರಿ.
5. ಸಕ್ಕರೆಯ ತಯಾರಿ.
6. ಮೀನು ಹಿಡಿಯುವುದು.
7. ಬಡಗಿಯ ಕೆಲಸ; ಬಂಡಿಗಳನ್ನು ಮಾಡುವುದು.
8. ನೂಲುವುದು ; ನೆಯ್ಯುವುದು.
9. ರೇಷ್ಮೆ.
10. ಮಡಕೆಗಳು.
11. ಹಿತ್ತಾಳೆ, ತಾಮ್ರ, ಚಾಕು, ಕತ್ತರಿ.
12. ದೀಪದಕಡ್ಡಿ.
13. ಜೋಡು ಹೊಲಿಯುವುದು.
14. ಹಗ್ಗಗಳು.
15. ಹೆಣಿಗೆ; ಕಸೂತಿ ಕೆಲಸಗಳು.
16. ಕಾಗದ.
17. ಆಟದ ಸಾಮಾನುಗಳು.

ಇವುಗಳೊಡನೆ ಜೇನುಹುಳುಗಳನ್ನು ಸಾಕುವುದು, ಕೋಳಿಗಳನ್ನು ಸಾಕುವುದು, ಆಡು ಕುರಿಗಳನ್ನು ಸಾಕುವುದು, ಅರಗಿನಲ್ಲಿ ಕೆಲಸಮಾಡುವುದು ಮುಂತಾದುವನ್ನೂ ಅವಲಂಬಿಸಬಹುದು.

ಒಟ್ಟಿನಲ್ಲಿ ಯಾವ ಉಪಾವಲಂಬನವನ್ನಾದರೂ ಇಟ್ಟುಕೊಳ್ಳದೆ ರೈತರ ಜೀವನದ ಅಂತಸ್ತು ಎಂದೂ ಉತ್ತಮವಾಗುವುದಿಲ್ಲ.



# ೭. ವ್ಯಾಪಾರ (ವಿಕ್ರಯ)



ರೈತರು ಬೆಳೆಯುವ ದವಸಗಳನ್ನೂ ಹಣ್ಣುಹಂಪಲುಗಳನ್ನೂ, ಅವರು ತಯಾರಿಸಿದ ಸಾಮಾನುಗಳನ್ನೂ ವಿಕ್ರಯಿಸಲು ಸರಿಯಾದ ಸೌಕರ್ಯಗಳಿಲ್ಲ; ಅವರ ವ್ಯಾಪಾರದಲ್ಲಿರುವ ಅಡಚಣೆಗಳನ್ನು ನಿವಾರಣೆ ಮಾಡಿ, ಅವರು ಮಾರಬಹುದಾದ ಪದಾರ್ಥಗಳಿಂದ ಅವರಿಗೆ ಹೆಚ್ಚು ಲಾಭವು ದೊರೆಯುವಂತೆ ಮಾಡುವುದು ಅವರ ಕಷ್ಟನಿವಾರಣೆಗೆ ಒಂದು ಮುಖ್ಯವಾದ ಉಪಾಯ.

ಪುರಾತನಕಾಲದಿಂದಲೂ ನಮ್ಮ ದೇಶಕ್ಕೂ, ಪಾಶ್ಚಾತ್ಯ ಪೌರಸ್ತ್ಯ ದೇಶಗಳಿಗೂ ನಿಕಟವಾದ ವ್ಯಾಪಾರಸಂಬಂಧವಿದ್ದಿತೆಂಬುದಕ್ಕೆ ಅನೇಕ ಆಧಾರಗಳಿವೆ. ನಮ್ಮ ದೇಶದ ಹಡಗುಗಳು ಈಜಿಪ್ಟ್, ರೋಮ್, ಗ್ರೀಸ್ ಮೊದಲಾದ ಪಾಶ್ಚಾತ್ಯದೇಶಗಳ ಹತ್ತಿರದಲ್ಲಿಯೂ, ಚೈನಾ, ಇಂಡೋಚೈನಾ, ಕ್ಯಾಂಬೋಡಿಯ ಮಲಯಪರ್ಯಾಯದ್ವೀಪ ಮೊದಲಾದ ಪೌರಸ್ತ್ಯರಾಷ್ಟ್ರಗಳ ಹತ್ತಿರದಲ್ಲಿಯೂ ವಿಶೇಷವಾಗಿ ಓಡಾಡುತ್ತಿದ್ದುವು. "ಪೆಗು, ಜಾವಾ, ಸುಮಾತ್ರಾ, ಬೋರ್ನಿಯೋ ಮೊದಲಾದ ದೇಶಗಳಲ್ಲಿ ನಮ್ಮ ವರ್ತಕರು ನೆಲೆಸಿ ಅಲ್ಲಿಂದ ನಮ್ಮ ದೇಶಕ್ಕೆ ಹೊನ್ನಿನ ಹೊಳೆಯನ್ನು ಹರಿಸುತ್ತಿದ್ದುದೂ, ನಮ್ಮ ಹಿಂದೂ ಧರ್ಮವನ್ನೂ, ಸಂಸ್ಕೃ

ತಿಯನ್ನೂ ಆಯಾ ದೇಶಗಳಲ್ಲಿ ಹರಡುತ್ತಿದ್ದುದೂ ಪ್ರಾಚೀನ ಇತಿಹಾಸ ಗಳಿಂದ ತಿಳಿದುಬರುತ್ತದೆ.[1]

ಪಾಶ್ಚಾತ್ಯದೇಶಗಳಲ್ಲಿ ವ್ಯಾಪಾರದ ಪೈಪೋಟಿಯು ಹುಟ್ಟುವುದಕ್ಕೆ ನಮ್ಮ ದೇಶದ ವ್ಯಾಪಾರವೇ ಕಾರಣವೆಂಬುದು ಸರ್ವವಿದಿತವಾಗಿದೆ. ಕ್ರಿ. ಶ. 15 ನೆಯ ಶತಮಾನದಿಂದೀಚೆಗೆ ನಡೆದಿರುವ ಮನುಷ್ಯಜೀವನದ ಚರಿತ್ರೆಗೆ ನಮ್ಮ ದೇಶದ ವ್ಯಾಪಾರವೇ ಮೂಲವೆಂದು ಹೇಳಬಹುದು. ಒಬ್ಬ ಇತಿಹಾಸಕಾರನು ಹೇಳುವಂತೆ "ಮೆಣಸಿನ ಬೆಲೆಯು ಹೆಚ್ಚಿದುವೇ ಇಂಡಿಯಾದಲ್ಲಿ ಯೂರೋಪಿನವರು ರಾಜ್ಯಕಟ್ಟಲು ಕಾರಣವಾಯಿತು." ಎನ್ನಬಹುದು.

ಹೀಗೆ 'ಪುರಾತನಕಾಲದಿಂದಲೂ ನಮ್ಮ ಜನಾಂಗದವರು ನಮ್ಮ ದೇಶದ ವ್ಯಾಪಾರದ ಅಭಿವೃದ್ಧಿಗಾಗಿ ಹೆಚ್ಚು ಗಮನವನ್ನು ಕೊಡುತ್ತಿದ್ದರು. ಆದರೂ ನಮ್ಮ ಹಳ್ಳಿಗಳು ತಮ್ಮ ಆತ್ಮಾವಲಂಬನವನ್ನು ಕಳೆದುಕೊಂಡಿರ ಲಿಲ್ಲ. ಪ್ರಯಾಣಸೌಕರ್ಯಗಳು ಕಡಮೆಯಾಗಿದ್ದುದರಿಂದಲೂ, ಒಂದು ಹಳ್ಳಿಗೂ, ದೂರದಲ್ಲಿರುವ ಇನ್ನೊಂದು ಹಳ್ಳಿಗೂ ಸಂಪರ್ಕವು ಕಡಮೆ ಯಾಗಿದ್ದುದರಿಂದಲೂ, ಪ್ರತಿಹಳ್ಳಿಯಲ್ಲಿಯೂ ಅಲ್ಲಿಯ ನಿವಾಸಿಗಳಿಗೆ ಬೇಕಾಗಬಹುದಾದ ಆಹಾರ, ಬಟ್ಟೆ ಮೊದಲಾದವುಗಳು ಅಲ್ಲಿಯೇ ತಯಾರಾಗುತ್ತಿದ್ದುವು. ಅನಿವಾರ್ಯಪಕ್ಷದಲ್ಲಿ ಮಾತ್ರ ರೈತರು ತಮ್ಮ ಪದಾರ್ಥಗಳನ್ನು ಕೊಟ್ಟು ಅದಕ್ಕೆ ಪ್ರತಿಯಾಗಿ ಬೇಕಾದುದನ್ನು ಕೊಳ್ಳು ತ್ತಿದ್ದರು. ಹಣವನ್ನು ವಿಶೇಷವಾಗಿ ಉಪಯೋಗಿಸುತ್ತಿರಲಿಲ್ಲ. ಇಂತಹ ವ್ಯಾಪಾರಕ್ಕೆ ಸಾಟಿವ್ಯಾಪಾರವೆಂಬ ಹೆಸರು ಇದೆ. (Trade by Barter) ಅಕ್ಕಪಕ್ಕದಲ್ಲಿರುವ ಹಳ್ಳಿಗಳೊಡನೆ ಮಾತ್ರ ವ್ಯವಹಾರವು ನಡೆಯುತ್ತಿ ದ್ದಿತು. ಇದಕ್ಕಾಗಿಯೇ ಸಂತೆಗಳೂ, ಜಾತ್ರೆಗಳೂ ರೈತರನ್ನು ಆಕರ್ಷಿಸು ತ್ತಿದ್ದುದು.

ಪಾಶ್ಚಾತ್ಯಸಂಸ್ಕೃತಿಯ ಸಂಪರ್ಕವೂ, ವಿಜ್ಞಾನಶಾಸ್ತ್ರದ ಪ್ರತಿ ಭೆಯಿಂದ ಪ್ರಯಾಣಸೌಕರ್ಯದಲ್ಲಾಗಿರುವ ಕ್ರಾಂತಿಯೂ, ನಮ್ಮ

ನಾಡನ್ನು ಇತರ ದೇಶಗಳ ಮಧ್ಯಕ್ಕೆಳೆದು, ನಮ್ಮ ಹಳ್ಳಿಯ ಆತ್ಮಾವಲಂಬನೆಯನ್ನು (Self Sufficiency) ತೊಲಗಿಸಿವೆ. ಮೂಲೆಮೂಲೆಯ ಹಳ್ಳಿಯವರೂ ಅಗ್ಗವಾದ ಗಿರಣಿಯ ಬಟ್ಟೆಗಳನ್ನು ಕೊಳ್ಳಬೇಕಾಗಿದೆ. ಸೀಮೆಯೆಣ್ಣೆ, ಬೆಂಕಿಯಪೊಟ್ಟಣ, ಕಾಗದ ಮೊದಲಾದ ಪದಾರ್ಥಗಳು ಬಳಕೆಗೆ ಬಂದಿವೆ. ಈಚೀಚೆಗೆ ಹಳ್ಳಿಗಳಲ್ಲಿಯೂ ಕಾಫಿ, ಸಕ್ಕರೆ, ರವೆ ಮೊದಲಾದುವುಗಳ ಉಪಯೋಗವು ಹೆಚ್ಚಿದೆ. ಅಲ್ಲದೆ, ನಮ್ಮ ನಿತ್ಯದ ಬಳಕೆಗೆ ಬೇಕಾಗುವ ಸರಕುಗಳು ನಾವು ತಯಾರಿಸುವುದಕ್ಕಿಂತ ಅಗ್ಗವಾಗಿ ದೊರೆಯುವುದಾದರೆ, ಅವುಗಳನ್ನು ಕೊಳ್ಳುವುದೇ ಮೇಲೆಂಬ ಭಾವನೆಯು ನಮ್ಮ ಹಳ್ಳಿಗಳಲ್ಲಿಯೂ ಹರಡುತ್ತಿದೆ. ಈ ಮಧ್ಯೆ ಕಂದಾಯಕಾಣಿಕೆಗಳಿಗಾಗಿಯೂ, ಸಾಲಸೋಲಗಳಿಗಾಗಿಯೂ ಹಣವನ್ನು ಬಳಸುವುದು ಬೆಳೆಯುತ್ತ ಬರುತ್ತಿದೆ. ಈ ಕಾರಣಗಳಿಂದ ರೈತರಿಗೆ ತಾವು ಬೆಳೆದ ಪದಾರ್ಥಗಳನ್ನು ಮಾರಲು ಸೌಕರ್ಯವು ಹೆಚ್ಚು ಹೆಚ್ಚು ಆಗತ್ಯವಾಗುತ್ತಿದೆ.

ಪರದೇಶದೊಡನಾಗುವ ವ್ಯಾಪಾರದ ಪಟ್ಟಿಯನ್ನು ಪರೀಕ್ಷಿಸಿದರೆ ಆ ವ್ಯಾಪಾರದಲ್ಲಿ ರೈತರು ಮುಖ್ಯಪಾತ್ರವನ್ನು ವಹಿಸುತ್ತಿರುವುದು ಗೋಚರವಾಗುವುದು. 1933-34 ರಲ್ಲಿ ನಮ್ಮ ದೇಶದಿಂದ ಹೊರಗೆ ರಫ್ತಾದ ಪದಾರ್ಥಗಳಲ್ಲಿ ಅರಳೆಯೊಂದೇ 26 ಕೋಟಿ 59 ಲಕ್ಷ ರೂಪಾಯಿನದಾಗಿದ್ದಿತು. 13 ಕೋಟಿ 66 ಲಕ್ಷ ರೂಪಾಯಿಗಳ ಎಣ್ಣೆಬೀಜವೂ, 11 ಕೋಟಿ 75 ಲಕ್ಷ ರೂಪಾಯಿಗಳ ಅಕ್ಕಿ, ಗೋಧಿ, ಜೋಳ ಮೊದಲಾದ ದವಸಗಳೂ, 90 ಲಕ್ಷ ರೂಪಾಯಿಗಳ ಹೊಗೆಯ ಸೊಪ್ಪೂ ರಫ್ತಾದುವು.[2] ನಮ್ಮ ರಫ್ತಿನಲ್ಲಿ ಬಹುಭಾಗವು ರೈತರದೇ ಎಂಬುದನ್ನು ನಿಸ್ಸಂಕೋಚವಾಗಿ ಹೇಳಬಹುದು.

ಹೀಗೆ ಪರದೇಶದೊಡನೆ ವ್ಯಾಪಾರವು ಬೆಳೆಯುತ್ತ ಬಂದಂತೆಲ್ಲ, ಮತ್ತು ಒಳದೇಶದಲ್ಲಿಯೇ ವ್ಯಾಪಾರ ಸೌಕರ್ಯಗಳು ಹೆಚ್ಚಿದಂತೆಲ್ಲ

ನಮ್ಮ ರೈತರು ತಮ್ಮ ಸ್ವಂತ ಉಪಯೋಗಕ್ಕೇ ಅಲ್ಲದೆ ವ್ಯಾಪಾರಕ್ಕೋಸ್ಕರವಾಗಿಯೂ ಬೆಳೆಯನ್ನು ತೆಗೆಯಲುಪಕ್ರಮಿಸಿದಾರೆ. ಆಹಾರಪದಾರ್ಥಗಳನ್ನು ಬೆಳೆಯುವುದಕ್ಕೆ ಬದಲಾಗಿ ಅರಳೆ, ಎಣ್ಣೆಯಬೀಜ, ಹೊಗೆಯ ಸೊಪ್ಪು, ಹಣ್ಣುಹಂಪಲು ಮೊದಲಾದುವನ್ನು ಬೆಳೆದು ಮಾರಿ, ಧನವನ್ನು ಆರ್ಜಿಸಬೇಕೆಂಬ ಆಸೆಯಿಂದಲೇ ಬೇಸಾಯ ಮಾಡಲುಪಕ್ರಮಿಸಿದ್ದಾರೆ. ಈ ಕೆಳಗಿನ ಅಂಕಿಗಳು ಈ ವಿಷಯವನ್ನು ಮನದಟ್ಟು ಮಾಡುವುವು.

## ಬ್ರಿಟಿಷ್ ಇಂಡಿಯದ ಬೇಸಾಯದ ಸೆನ್ಸಸ್ 1931-32.[3]

(1000 ಎಕರೆಗಳು)

| | | |
|---|---|---|
| I. | (a) ಆಹಾರಕ್ಕೆ ಉಪಯೋಗಿಸುವ ದವಸಗಳು | 205014 |
| | (b) ಹಣ್ಣು ಸಂಬಾರದ ಪದಾರ್ಥಗಳು ಇತ್ಯಾದಿ | 8389 |
| | (c) ಕಬ್ಬು, ಕಾಫೀ, ಟೀ | 3908 |
| II. | ಎಣ್ಣೆಯ ಬೀಜಗಳು | 15882 |
| III. | ಅರಳೆ, ಸಣಬು, ಹೊಗೆಸೊಪ್ಪು ಇತ್ಯಾದಿ | 46457 |

ಸರ್ಕಾರದವರ ಪ್ರೇರಣೆಯಿಂದಲೂ ಜನಗಳಲ್ಲಿ ಹೆಚ್ಚು ತಿಳುವಳಿಕೆಯು ಹರಡುತ್ತಿರುವುದರಿಂದಲೂ, ನೂತನ ವ್ಯವಸಾಯಕ್ರಮವೂ, ಸುಧಾರಿಸಿದ ಉಪಕರಣಗಳೂ,ಕೃತಕವಾದ ಗೊಬ್ಬರಗಳೂ ಹೆಚ್ಚುಹೆಚ್ಚಾಗಿ ಬಳಕೆಗೆ ಬರುತ್ತಿವೆ. ಇವು ಇನ್ನೂ ಹೆಚ್ಚು ಬಳಕೆಗೆ ಬರಬೇಕಾದುದು ಆವಶ್ಯಕ. 1931-32 ನೆಯ ಇಸವಿಯಲ್ಲಿ ಬ್ರಿಟಿಷ್ ಇಂಡಿಯಾದಲ್ಲೆಲ್ಲ ಒಟ್ಟು ಒಂದು ಕೋಟಿಯೂ 50 ಲಕ್ಷ ಎಕರೆಗಳಲ್ಲಿ ಉತ್ತಮವಾದ ಬೇಸಾಯ ಕ್ರಮವು ಜಾರಿಯಲ್ಲಿತ್ತೆಂದು ತಿಳಿಯಬರುವುದು.[4] ಅವುಗಳಲ್ಲಿ 53 ಲಕ್ಷ ಎಕರೆ ಅರಳೆಯೂ 35 ಲಕ್ಷ ಎಕರೆ ಗೋಧಿಯೂ ಉತ್ತಮವರ್ಗಕ್ಕೆ ಸೇರಿದ್ದುವು.

ಹೀಗೆ ರೈತರು ತಮ್ಮ ಬೇಸಾಯವನ್ನು ಹೆಚ್ಚುಹೆಚ್ಚಾಗಿ ಉತ್ತಮ ಪಡಿಸಿಕೊಳ್ಳಬೇಕಾಗಿದೆ. ಆದರೆ ರೈತರು ತಾವು ಕಷ್ಟಪಟ್ಟು ಬೇಸಾಯಮಾಡಿ ಇತರರ ಬೊಜ್ಜು ಬೆಳೆಯಿಸುವುದನ್ನು ಯಾರೂ ಒಪ್ಪತಕ್ಕುದಲ್ಲ. ಬೆಳೆದ ಪದಾರ್ಥಗಳಿಂದ ತಕ್ಕ ಲಾಭವು ತಮಗೇ ಬರುವುದೆಂದು ತೋರಿದ ಕೂಡಲೆ ರೈತರು ತಾವಾಗಿಯೇ ಹೊಸ ಮಾರ್ಗಗಳನ್ನು ಅನುಸರಿಸುವುದು ಸಹಜ. (C.F: sugar-cane cultivation in Mandya.) ಬೇಸಾಯದ ಲಾಭವೆಲ್ಲವೂ ಬೇಸಾಯಗಾರರಿಗೇ ಸಲ್ಲುವಂತೆ ಮಾಡುವುದು ವಿಹಿತ. ಇದಕ್ಕಾಗಿ ಬೆಳೆದ ಪದಾರ್ಥಗಳಿಗೆ ತಕ್ಕ ಬೆಲೆ ಸಿಕ್ಕುವಂತೆ ಅನುಕೂಲ ಪಡಿಸಬೇಕಾಗಿದೆ.

ಲಿ೯ಲಿತ್ಗೋ ಕಮಿಷನ್ನಿನವರು ನಮ್ಮ ದೇಶದ ಎಲ್ಲಾ ಕಡೆಯ ಲ್ಲಿಯೂ ಸಂಚಾರ ಮಾಡಿದರಷ್ಟೆ. ಪ್ರತಿಯೊಂದು ಪ್ರಾಂತದಲ್ಲಿಯೂ ಅವ ರೊಡನೆ ಸಹಕರಿಸಿದ ಪ್ರತಿಯೊಬ್ಬ ಮಹನೀಯನೂ ವ್ಯಾಪಾರ ಮಾರ್ಗ ದಲ್ಲಿ ರೈತರಿಗಿರುವ ಕುಂದುಕೊರತೆಗಳನ್ನು ಪರಿಹರಿಸುವುದು ಬಹು ಮುಖ್ಯ ವಾದ ಕರ್ತವ್ಯವೆಂಬುದನ್ನು ಪದೇ ಪದೇ ಅವರ ಮನದಟ್ಟುವಂತೆ ವಾದಿ ಸಿದ್ದಾನೆ.

ರೈತರು ಬೆಳೆದ ಪದಾರ್ಥಗಳನ್ನು ಗಿರಾಕಿಗಳು ದೊರೆಯುವ ಸ್ಥಳಗಳಿಗೆ ಸಾಗಿಸಲು ಇರುವ ಮಾರ್ಗಕ್ಕೆ ವ್ಯಾಪಾರಸೌಕರ್ಯಗಳಲ್ಲಿ ಅಗ್ರಸ್ಥಾನವು ದೊರೆತಿದೆ. ಪ್ರಯಾಣಸೌಕರ್ಯವೇ ವ್ಯಾಪಾರಸೌಕರ್ಯ ವೆನ್ನಬಹುದು. ರೈಲುಗಳೂ ರಸ್ತೆಗಳೂ ಇತರ ವಾಹನಗಳೂ ರೈತರಿಗೆ ಎಷ್ಟೆಷ್ಟು ದೊರೆಯುವುವೋ ರೈತರ ವ್ಯಾಪಾರದಲ್ಲಿರುವ ಕಷ್ಟಪರಂಪರೆಯು ಅಷ್ಟಷ್ಟು ದೂರವಾಗುವುದು. ಇದನ್ನರಿತಿದ್ದುದರಿಂದಲೇ ನಮ್ಮ ಪ್ರಾಚೀ ನರೂ ಸಹ ರಸ್ತೆಗಳನ್ನು ಹಾಕಿಸಿ, ಸಾಲು ಮರಗಳನ್ನು ನೆಡಿಸುವುದರಲ್ಲಿ ತಮ್ಮ ದಾತೃತ್ವವನ್ನು ವಿಶೇಷವಾಗಿ ಪ್ರದರ್ಶಿಸುತ್ತಿದ್ದರು. ಪ್ರತಿಹಳ್ಳಿ ಯಲ್ಲಿಯೂ ಜನಗಳು ಒಟ್ಟಿಗೆ ಸೇರಿ ತಮಗೆ ಅಗತ್ಯವಾದ ರಸ್ತೆಗಳನ್ನು ಸರಿಪಡಿಸಿಕೊಳ್ಳುತ್ತಿದ್ದರು.

ಬ್ರಿಟಿಷರು ನಮ್ಮ ದೇಶವನ್ನು ಆಳಲು ಮೊದಲುಮಾಡಿದಂದಿನಿಂದ ರಸ್ತೆಗಳೂ, ರೈಲುಗಳೂ ಬೆಳೆಯುತ್ತಬಂದಿವೆ. ಇತ್ತೀಚೆಗೆ ವಿಶೇಷವಾಗಿ ಬಳಕೆಗೆ ಬರುತ್ತಿರುವ ಬಸ್ಸುಗಳೂ, ಲಾರಿಗಳೂ ಗ್ರಾಮಜೀವನದಲ್ಲಿ ಒಂದು ಹೊಸಹುರುಪನ್ನುಂಟುಮಾಡುತ್ತಿವೆ. (ಪ್ರಯಾಣ ಸೌಕರ್ಯಗಳು ಗ್ರಾಮ ಜೀವನದಲ್ಲಿ ಮಾಡಬಹುದಾದ ಮಹಾಕ್ರಾಂತಿಯ ವಿಷಯವನ್ನು ಪ್ರತ್ಯೇಕವಾಗಿ ವಿಮರ್ಶಿಸೋಣ.)

ಸದ್ಯದಲ್ಲಿ ಒಂದು ವಿಷಯವನ್ನು ನೆನಪಿನಲ್ಲಿಡೋಣ. ಬ್ರಿಟಿಷರ ಆಳ್ವಿಕೆಯ ಫಲಿತಾಂಶವಾಗಿಯೋ ಅಥವಾ ನವಯುಗದ ಹೊಸಹುರುಪಿನ ಫಲಿತಾಂಶವಾಗಿಯೋ ನಮ್ಮ ದೇಶದಲ್ಲಿ ಪ್ರಯಾಣಸೌಕರ್ಯಗಳು ಹೆಚ್ಚುತ್ತಿದ್ದರೂ ಅವುಗಳಿಂದ ನಗರವಾಸಿಗಳಿಗೆ ಹೆಚ್ಚು ಪ್ರಯೋಜನವು ದೊರೆತಿರುವುದೇ ವಿನಾ ರೈತರಿಗೆ ಅಷ್ಟೊಂದು ಹೆಚ್ಚು ಫಲವು ದೊರೆಯುತ್ತಾ ಇಲ್ಲ. ಬೆಂಗಳೂರು ಪಟ್ಟಣದಲ್ಲಿ ನಡೆದ ಕಳೆದ ರೋಡ್ ಕಾಂಗ್ರೆಸ್ಸಿನಲ್ಲಿ ರಾಯ್ ಬಹದ್ದೂರ್ ಚೌದುರಿಲಾಲ್ ಚಂದರವರು ಹೇಳಿದಂತೆ "ನಮ್ಮ ಅನೇಕ ಹಳ್ಳಿಗಳು ವರ್ಷದ ಬಹುಭಾಗದಲ್ಲಿ ಹೊರಗಿನ ಪ್ರಪಂಚದ ಸಂಪರ್ಕವೇ ಇಲ್ಲದೆ ಬಾಳಬೇಕಾಗಿವೆ. ಇಂದೂ ಹಳ್ಳಿಗಳಿಗೆ ಚಕ್ರಗಳ ಮೇಲೆ ತಿರುಗುವ ವಾಹನಗಳ ದರ್ಶನವೇ ಆಗಲು ಲಭ್ಯವಿಲ್ಲ." ಕಾಡು ಹಾದಿಗಳಲ್ಲಿ ಗಂಟೆಗೆ ಎರಡು ಮೈಲಿಗಳಷ್ಟು ವೇಗವಾಗಿ ಹೋಗುವ ಎತ್ತಿನ ಬಂಡಿಗಳೇ ಹಳ್ಳಿಯ ರೈಲುಗಳು. ಹಾಲು, ಹಣ್ಣು, ಮೊಟ್ಟೆ, ತರಕಾರಿ ಮೊದಲಾದ್ದುವುಗಳನ್ನು ಇಂತಹ ಬಂಡಿಗಳಲ್ಲಿ ಎಷ್ಟು ಜಾಗ್ರತೆಯಾಗಿ ದೊಡ್ಡ ದೊಡ್ಡ ನಗರಗಳಿಗೆ ಸಾಗಿಸಬಹುದೆಂಬುದನ್ನು ಯೋಚನೆಮಾಡಿರಿ. ಆಸ್ಟ್ರೇಲಿಯಾ ನಲ್ಲಿ ಬೆಳೆದ ಸೇಬಿನ ಹಣ್ಣುಗಳನ್ನು ಮೈಸೂರು ಮಾರ್ಕೆಟ್ಟಿಗೆ ಸುಲಭವಾಗಿ ತರಿಸಬಹುದು; ನಾಲ್ವತ್ತು ಮೈಲಿ ದೂರದಲ್ಲಿರುವ ನಮ್ಮ ಹಳ್ಳಿಯಿಂದ ಹಣ್ಣುಗಳನ್ನು ಮೈಸೂರಿಗೆ ತರುವುದು ವಿಶ್ವಪ್ರಯತ್ನವಾಗಿದೆ.

ನ್ಯೂಜಿಲೆಂಡ್, ಆಸ್ಟ್ರೇಲಿಯ, ದಕ್ಷಿಣ ಆಫ್ರಿಕ, ಕೆನಡ ಮೊದಲಾದ ದೇಶಗಳಿಂದ ಹಣ್ಣುಹಂಪಲುಗಳನ್ನೂ, ಮೊಟ್ಟೆಯೇ ಮೊದಲಾದ ಬೇಗ

ಕೆಡಬಹುದಾದ ಪದಾರ್ಥಗಳನ್ನೂ ಇಂಗ್ಲೆಂಡ್, ಜರ್ಮನಿ ಮೊದಲಾದ ದೇಶಗಳಿಗೆ ಸುಲಭವಾಗಿಯೂ, ಸುರಕ್ಷಿತವಾಗಿಯೂ ಕಳುಹಿಸಲು ತಕ್ಕ ಸಾಧನಗಳಿವೆ. ಆದರೆ ನಮ್ಮ ದೇಶದಲ್ಲಿ ಒಂದು ಕಡೆ ಬೆಳೆಯುವ ತರಕಾರಿ, ಹಣ್ಣುಹಂಪಲುಗಳನ್ನು ಇನ್ನೊಂದು ಕಡೆಗೆ ಸಾಗಿಸುವುದು ಅಸಾಧ್ಯ. ಟ್ರಾವಕೂರಿನ "ಮಾರ್ತಾಂಡಂ ಗ್ರಾಮ ಪುನರ್ಘಟನಾಕೇಂದ್ರ" ದ ಯಜಮಾನರಾದ ಸ್ಪೆನ್ಸರ್ ಹಾಷ್‌ರವರು ಕೋಳಿಯ ಮೊಟ್ಟೆಗಳನ್ನು ದೊಡ್ಡದೊಡ್ಡ ನಗರಗಳಿಗೆ ಸಾಗಿಸಲು ಆಗುತ್ತಿರುವ ಕಷ್ಟವನ್ನು ವರ್ಣಿಸಿರುವರು.[6]

ಹಳ್ಳಿಯ ರಸ್ತೆಗಳನ್ನು ಕ್ರಮಪಡಿಸುವುದು, ಬಸ್ಸುಗಳನ್ನೂ ಲಾರಿಗಳನ್ನೂ ವಿಶೇಷವಾಗಿ ಬಳಕೆಗೆ ತರುವುದು, ರೈಲುಗಳಲ್ಲಿ ರೈತರು ಬೆಳೆದ ಪದಾರ್ಥಗಳಿಗೆ ಹೆಚ್ಚು ರಿಯಾಯತಿಯನ್ನು ತೋರಿಸುವುದು—ಇವೇ ಮೊದಲಾದ ಬಗೆಗಳಿಂದ ರೈತರಿಗೆ ವ್ಯಾಪಾರ ಸೌಕರ್ಯಗಳನ್ನು ಕಲ್ಪಿಸಿಕೊಡಬಹುದು. ಪ್ರಯಾಣಸೌಕರ್ಯವೇ ವ್ಯಾಪಾರದ ತಳಹದಿ. ಆದರೆ ಇದೊಂದರಿಂದಲೇ ರೈತರ ಕಷ್ಟವು ನಿವಾರಣೆಯಾಗುವುದಿಲ್ಲ.

ಮುಖ್ಯವಾಗಿ ರೈತರು ಪದಾರ್ಥಗಳನ್ನು ಬೆಳೆವುದರಲ್ಲಿ ಶಿಕ್ಷಿತರಾಗಿರುವರೇ ವಿನಾ ವ್ಯಾಪಾರ ಮಾಡುವುದರಲ್ಲಲ್ಲ. ವ್ಯಾಪಾರದಿಂದಲೇ ಜೀವನ ಮಾಡುವ ದಳ್ಳಾಳಿಗಳ ಮತ್ತು ಮಂಡಿ ವರ್ತಕರ ಚತುರತೆಯು ಇವರಿಗೆ ಎಂದಿಗೂ ಬಾರದು. ರೈತರ ಮತ್ತು ಜನಸಾಮಾನ್ಯದ ಮಧ್ಯೆ ವರ್ತಕರು ಬಂದು ಅತಿಯಾದ ಲಾಭವನ್ನು ಸಂಪಾದಿಸುತ್ತಿದಾರೆ. ಇದು ನಮ್ಮ ದೇಶ ಒಂದರಲ್ಲಿಯೇ ಅಲ್ಲ. ಅಮೆರಿಕದ ಸಂಯುಕ್ತರಾಷ್ಟ್ರದ ರೈತರ ವ್ಯಾಪಾರದ ವಿಷಯವನ್ನು ವಿಮರ್ಶೆ ಮಾಡುತ್ತಾ ರೂಸ್‌ವೆಲ್ಟ್ ಮಹಾಶಯನು ಈ ರೀತಿಯಾಗಿ ಹೇಳಿರುವನು. "ಈಗಿರುವ ವ್ಯಾಪಾರದ ಪದ್ಧತಿಯು ಅಸಹನೀಯವಾಗಿದೆ. ವರ್ತಕರೂ ದಳ್ಳಾಳಿಗಳೂ ಪದಾರ್ಥಗಳನ್ನು ಬೆಳೆಯುವ ರೈತರಿಗಿಂತಲೂ ಹೆಚ್ಚು ಲಾಭವನ್ನು ಪಡೆಯುತ್ತಿದಾರೆ. ಅವರು ಸಮಾ

ಜಕ್ಕೆ ಮಾಡುತ್ತಿರುವ ಉಪಕಾರಕ್ಕೆ ನೂರ್ಮಡಿಯಾಗಿ ಪ್ರತಿಫಲವನ್ನು ಪಡೆಯುತ್ತಿದ್ದಾರೆ."[6] ಈ ಸಂದರ್ಭದಲ್ಲಿ ಒಂದು ಪ್ರದರ್ಶನದಲ್ಲಿಟ್ಟಿದ್ದ ಒಂದು ಚಿತ್ರವು ನೆನಪಿಗೆ ಬರುವುದು: ಆ ಚಿತ್ರದಲ್ಲಿ ಹಸುವನ್ನು ಸಾಕುವ ರೈತನು ಕೃಶನಾಗಿ ನಿಂತಿರುವನು; ಹಾಲನ್ನು ಕೊಳ್ಳುವ ಗಿರಾಕಿಯೂ ಒಣಗಿಹೋಗಿರುವನು; ಹಾಲನ್ನು ಮಾರುವ ದಳ್ಳಾಳಿಯು ಇವರ ನಡುವೆ ಬೊಜ್ಜು ಬೆಳೆಯಿಸಿಕೊಂಡು ಅಟ್ಟಹಾಸದಿಂದ ನಿಂತಿರುವನು.

ಈ ಚಿತ್ರವು ನಮ್ಮ ರೈತರ ವ್ಯಾಪಾರದ ದುಸ್ಸ್ಥಿತಿಯನ್ನು ಸ್ಪಷ್ಟಪಡಿಸುವುದು. ಆದರೆ ವರ್ತಕರೂ ದಳ್ಳಾಳಿಗಳೂ ಸಮಾಜದಲ್ಲಿ ಅಗತ್ಯವಿಲ್ಲವೆಂದು ಹೇಳಲಾಗುವುದಿಲ್ಲ. ಈ ಮಧ್ಯವರ್ತಿಗಳು ಕೆಲವು ವಿಧದಲ್ಲಿ ಸಮಾಜಸೇವೆ ಮಾಡುತ್ತಿದಾರೆ. ಮೊದಲು ರೈತರು ಚಿಲ್ಲರೆ ಚಿಲ್ಲರೆಯಾಗಿ ಬೆಳೆದ ದವಸಗಳನ್ನು ಒಟ್ಟುಗೂಡಿಸುವುದು, ದೇಶದ ಯಾವ ಯಾವ ಕಡೆಯಲ್ಲಿ ಈ ಪದಾರ್ಥಗಳು ಬೇಕಾಗಿವೆಯೋ ಅಲ್ಲಿಗೆ ಪದಾರ್ಥಗಳನ್ನು ಒದಗಿಸಿಕೊಡುವುದು, ಸುಗ್ಗಿಯಕಾಲದಲ್ಲಿ ಶೇಖರಿಸಿ ಇಲ್ಲದಕಾಲದಲ್ಲಿ ಪದಾರ್ಥಗಳನ್ನು ಒದಗಿಸುವುದು, ಈ ಮಧ್ಯೆ ಪದಾರ್ಥಗಳನ್ನು ಸುರಕ್ಷಿತವಾಗಿಟ್ಟಿರುವುದು—ಈ ಕೆಲಸಗಳು ಸಾಮಾನ್ಯವಾದುವಲ್ಲ.[7] ಇವಕ್ಕೆ ಜಾಣ್ಮೆಯೂ ಧೈರ್ಯವೂ ಬೇಕು. ಆದುದರಿಂದ ವರ್ತಕರ ಸಹಾಯವೇ ಇಲ್ಲದೆ ರೈತರನ್ನು ಕಾಪಾಡುತ್ತೇವೆಂಬುದು ಹುಚ್ಚುತನ.

ಆದರೆ ಇಂದು ರೈತರು ವರ್ತಕರ ಅಡಿಯಾಳುಗಳಾಗಿರುವರು. ಇದಕ್ಕೆ ಕಾರಣಗಳು ಅನೇಕ. ರೈತರು ವ್ಯಾಪಾರದಲ್ಲಿ ಚತುರರಲ್ಲವೆಂಬಂಶವನ್ನು ಹಿಂದೆಯೇ ಹೇಳಲಾಗಿದೆ. ವರ್ತಕರೂ ದಳ್ಳಾಳಿಗಳೂ ಪಳಗಿದವರು. ವರ್ತಕರು ಸಾಮಾನ್ಯವಾಗಿ ಒಂದೆಡೆಯಲ್ಲಿಯೇ ವಾಸಮಾಡುತ್ತಿರುವುದರಿಂದ ತಮ್ಮ ತಮ್ಮಲ್ಲಿ ಸಂಘಗಳನ್ನು ಸ್ಥಾಪಿಸಿಕೊಂಡು ಪೈಪೋಟಿಯನ್ನು ಕಡಮೆಮಾಡಿಕೊಳ್ಳಬಲ್ಲರು. ಬೊಂಬಾಯಿನ ಕ್ರಾಫರ್ಡ್

ಮಾರ್ಕೆಟ್ಟಿನ ಹಣ್ಣು ಮತ್ತು ತರಕಾರಿ ಮಾರುವ ವರ್ತಕರ ಸಂಘವು ಇದಕ್ಕೊಂದು ನಿದರ್ಶನವಾಗಿದೆ.[8] ರೈತರಲ್ಲಿ ಇಂತಹ ಸಂಘಗಳು ಇರುವುದಿಲ್ಲ. ಆದುದರಿಂದ ವರ್ತಕರು ಯಾವ ಪದ್ಧತಿಯನ್ನು ಜಾರಿಗೆ ತಂದರೂ ರೈತರು ಒಪ್ಪಲೇ ಬೇಕಾಗುವುದು.

ಪ್ರತಿಯೊಂದು ಮಾರ್ಕೆಟ್ಟಿನಲ್ಲಿಯೂ ಮಾದರಿ, ರುಸುಂ, ದಳ್ಳಾಳಿ, ದಾನ, ಧರ್ಮ, ಅರೆವಾಸಿ ಮುಂತಾದ ನೆಪದಿಂದ ವರ್ತಕರು ರೈತರಿಂದ ಎಷ್ಟು ಸುಲಿಗೆಯನ್ನು ಮಾಡುತ್ತಿದಾರೆಂಬುದನ್ನು ನೋಡಿರಿ. ಮೈಸೂರಿನ ಮುಖ್ಯವ್ಯಾಪಾರಸ್ಥಳಗಳಲ್ಲಿ ಈ ವಿಧವಾದ ವಸೂಲಿಯ ಲೆಕ್ಕವನ್ನು ಕೆಳಗೆ ಕೊಟ್ಟಿದೆ.[9]

**ದಾವಣಗೆರೆ—**

(i) ಕಡಲೆಕಾಯಿ ಒಟ್ಟು ಬೆಲೆ 41 7 0

ಖರ್ಚು

| | | | |
|---|---|---|---|
| ದಳ್ಳಾಳಿ | 0 | 13 | 6 |
| ಧರ್ಮ | 0 | 1 | 0 |
| ರುಸುಂ | 0 | 1 | 0 |
| ಹೋಮಲಿ | 0 | 4 | 6 |
| ಪಕ್ಕಿ | 0 | 3 | 0 |
| | 1 | 7 | 0 |

(ii) ಜೋಳ ಒಟ್ಟು ಬೆಲೆ 695 15 6

ಖರ್ಚು

| | | | |
|---|---|---|---|
| ದಳ್ಳಾಳಿ | 10 | 13 | 6 |
| ಧರ್ಮ | 0 | 11 | 0 |

| | | | |
|---|---|---|---|
| ರುಸುಂ | 0 | 11 | 0 |
| ಹೋಮಲಿ | 2 | 2 | 3 |
| ಒಟ್ಟು | 14 | 5 | 9 |

(iii) ಅರಳೆ ಒಟ್ಟು ಬೆಲೆ 658 1 7

ಖರ್ಚು

| | | | |
|---|---|---|---|
| ದಳ್ಳಾಳಿ | 10 | 4 | 6 |
| ಧರ್ಮ | 0 | 4 | 0 |
| ರುಸುಂ | 0 | 4 | 0 |
| ಹೋಮಲಿ | 2 | 6 | 0 |
| ಪಕ್ಕಿ | 0 | 14 | 0 |
| ಚಿಂತಲಿ | 0 | 12 | 0 |
| ಒಟ್ಟು | 14 | 12 | 6 |

**ಚಿತ್ರದುರ್ಗ—**

(i) ಅರಳೆ ಒಟ್ಟು ಬೆಲೆ 77 15 0

ಖರ್ಚು

| | | | |
|---|---|---|---|
| ದಳ್ಳಾಳಿ | 1 | 10 | 0 |
| ಧರ್ಮ | 0 | 1 | 0 |
| ಹೋಮಲಿ | 0 | 6 | 0 |
| ಪಕ್ಕಿ | 0 | 2 | 0 |
| ಗೋಧನ | 0 | 1 | 0 |
| ರುಸುಂ | 0 | 1 | 0 |
| ಭಟ್ಟಾರ | 1 | 8 | 0 |
| ಒಟ್ಟು | 3 | 13 | 0 |

**ಶಿವಮೊಗ್ಗ—**

(i) ಅಡಕೆ

ದಳ್ಳಾಳಿ ಮಣ 1ಕ್ಕೆ 0 2 0

ಪಡಿಕಟ್ಟು 100 ರೂ. ಗೆ 0 4 0

ನಗದು ಹಣ ಬೇಕಾದರೆ ಶೇಕಡ 12 ರಂತೆ ಡಿಸ್ಕೌಂಟ್. ಇಲ್ಲದಿದ್ದರೆ ಒಂದು ತಿಂಗಳ ವಾಯಿದೆ.

ಕೂಲಿ—100 ಮಣಕ್ಕೆ 1½ ಮಣ.

ತಾರಾಪಡಿ ಒಂದು ಗುಡ್ಡೆಗೆ 3 ಬೊಗಸೆ.

ಸಾಮಾನ್ಯವಾಗಿ ದಳ್ಳಾಳಿಗಳೆಲ್ಲರೂ ವರ್ತಕರ ಆಶ್ರಯದಲ್ಲಿ ಜೀವನಮಾಡುವವರು. ಆದುದರಿಂದ ಪ್ರತಿವ್ಯಾಪಾರದಲ್ಲಿಯೂ ಅವರು ವರ್ತಕರಿಗೆ ಹೆಚ್ಚಾಗಿ ಸಹಾಯಮಾಡುವರೇ ವಿನಾ ರೈತರಿಗಲ್ಲ. ಆದ ಕಾರಣ ತೂಕ ತುಂಡುಗಳಲ್ಲಿ ಅನೇಕವೇಳೆ ರೈತರಿಗೆ ಮೋಸವಾಗ ಬಹುದು.[10]

ವರ್ತಕರನೇಕರು ರೈತರಿಗೆ ಸಾಲವನ್ನು ಕೊಡುತ್ತಿರುವರು ; ಆದು ದರಿಂದ ರೈತರು ತಾವು ಬೆಳೆದ ಪದಾರ್ಥಗಳನ್ನು ಆಯಾ ವರ್ತಕರಿಗೇ ಸಾಮಾನ್ಯವಾಗಿ ಮಾರಬೇಕಾಗುವುದು. ಇದರಿಂದಲೂ ಅಳತೆ, ತೂಕ, ದರ ಮುಂತಾದುವುಗಳಲ್ಲಿ ರೈತರಿಗೆ ನಷ್ಟವುಂಟು.

ಸುಗ್ಗಿಯಕಾಲದಲ್ಲಿ ದಿನಸಿಗಳಿಗೆ ಬೆಲೆ ಕಡಮೆ. ಅಲ್ಲದೆ ಒಂದೊಂದು ಸಂತೆಗೂ ಬೆಲೆಯಲ್ಲಿ ಏರುಪೇರಿರುವದು ಸ್ವಾಭಾವಿಕ. ಕೆಳಗಿನ ಅಂಕಿಗಳು ಈ ವಿಷಯವನ್ನು ವಿಶದಪಡಿಸುವುವು.[11]

## ಕಡಲೆಯಕಾಯಿ ಪಲ್ಲ ಒಂದಕ್ಕೆ. 1933

| ಊರಿನ ಹೆಸರು | ಜನವರಿ | ಫೆಬ್ರವರಿ | ಮಾರ್ಚಿ | ಏಪ್ರಿಲ್ | ಮೇ | ಜೂನ್ | ಜುಲೈ | ಆಗಸ್ಟ್ | ಸೆಪ್ಟೆಂ | ಅಕ್ಟೋ | ನವಂ | ಡಿಸೆಂ |
|---|---|---|---|---|---|---|---|---|---|---|---|---|
| ಅರಸೀಕೆರೆ | 4- 6-0 | 5- 8-0 | 6- 0 0 | 6 0-0 | 6- 2-0 | 6- 8 0 | 6- 8-0 | 6- 8-0 | 6- 0-0 | 4- 4-0 | 4- 0 0 | 4- 8 0 |
| ದಾವಣಗೆರೆ | 5-10 0 | 7- 8-0 | 6- 9-0 | 5-10-0 | 7- 8 0 | 8- 7-0 | 8- 7 0 | 4-11-0 | 3-12-0 | 3-14 0 | 3- 8-0 | 4- 0-0 |
| ತುಂಕೂರು | — | 6-11-0 | 6 11-0 | 6-11-0 | 6-1[illegible]-0 | 5-12-0 | 6-11-0 | 7- 2-0 | 5 5 0 | 3- 9-0 | 3- 2-0 | 4- 0-0 |
| ಚಳ್ಳಕೆರೆ | 5- 2-0 | 7- 7-0 | 7- 0-0 | 6- 1-0 | 5- 9 0 | 5- 9 0 | 5- 2-0 | 4-11-0 | 4-11-0 | 4- 3-0 | 3- 4-0 | 3. 8-2 |

## ಬತ್ತ ಪಲ್ಲ ಒಂದಕ್ಕೆ. 1932

| ಊರಿನ ಹೆಸರು | ಜನವರಿ | ಫೆಬ್ರವರಿ | ಮಾರ್ಚಿ | ಏಪ್ರಿಲ್ | ಮೇ | ಜೂನ್ | ಜುಲೈ | ಆಗಸ್ಟ್ | ಸೆಪ್ಟೆಂ | ಅಕ್ಟೋ | ನವಂ | ಡಿಸೆಂ |
|---|---|---|---|---|---|---|---|---|---|---|---|---|
| ಬೆಂಗಳೂರು | 4-11-3 | 4-11-0 | 5-15 0 | 5-13-9 | 5-13-0 | 6- 0-3 | 6- 3 0 | 5- 3-0 | 5 3-0 | 4-13-0 | 4-13-0 | 4- 7 0 |
| ಮೈಸೂರು | 5- 4-0 | 6- 5 0 | 6- 0-0 | 6- 0-0 | 6- 2-0 | 6- 6-6 | 6- 6-0 | 6- 7-0 | 6- 4-0 | — | 6- 8-0 | 4-10-0 |
| ತುಂಕೂರು | 5 -0 0 | 5-12 0 | 6- 2-0 | 4-12-0 | 4-11-0 | 5-14-0 | 5-14-0 | 5-11-0 | 4-12-0 | 4-11-0 | 4- 8-0 | 4- 8-0 |
| ಸಾಗರ | 4- 1-0 | 3 14 0 | 3- 8-0 | 3-14-0 | '4- 4 0 | 4- 3-0 | 4- 3-0 | 4- 1.0 | 4- 2-0 | 3-11-0 | 3- 8 0 | 4- 9 0 |

ರೈತರು ಬೆಲೆಯ ಏರುಪೇರಿನ ಸಹಾಯವನ್ನು ಹೊಂದಲಾರರು. ಏಕೆಂದರೆ, ಕಂದಾಯವನ್ನು ಕೊಡುವುದಕ್ಕೂ, ಬಡ್ಡಿಯನ್ನು ತೆರುವುದಕ್ಕೂ ಮದುವೆ-ಮುಂಜಿಗಳನ್ನು ಮಾಡುವುದಕ್ಕೂ ಇವರಿಗೆ ಸುಗ್ಗಿಯ ಕಾಲದಲ್ಲಿಯೇ ಹಣವು ಬೇಕಾಗುವುದು; ಅಥವಾ ಇವರು ಮುಂಗಡವಾಗಿಯೇ ಹಣವನ್ನು ಪಡೆದು ಸುಗ್ಗಿಯಕಾಲದಲ್ಲಿಯೇ ದಿನಸಿಯನ್ನು ಕೊಡಲು ಒಪ್ಪಿರಬಹುದು: ಅಥವಾ ತಾವು ಮಾರಬಹುದಾದ ದಿನಸಿಯನ್ನು ಕೂಡಿಡಲು ಇಷ್ಟವಿದ್ದರೂ ಅವಕಾಶವಿಲ್ಲದಿರಬಹದು; ವಾಸಕ್ಕೇ ಯೋಗ್ಯವಲ್ಲದ ಮನೆಗಳು, ಇಲಿಹೆಗ್ಗಣಗಳ ಕಾಟ, ಕ್ರಿಮಿಕೀಟಗಳ ಕಿರುಕುಳ–ಇವುಗಳಿಂದ ಸುಗ್ಗಿಯಲ್ಲಿಯೇ ಮಾರಬೇಕಾಗಬಹುದು. ಅದಲ್ಲದೆ, ಈಗ ನಮ್ಮಲ್ಲಿ ಬಳಕೆಯಲ್ಲಿರುವ ಕೂಡಿಡುವ ಪದ್ಧತಿಯಲ್ಲಿ ಹೆಚ್ಚು ನಷ್ಟವೇ ವಿನಾ ಲಾಭವಿಲ್ಲ. ಗೋಧಿಯನ್ನು ಕೂಡಿಡುವ ವಿಷಯಲ್ಲಿ ಮೆಸರ್ಸ್ ಗ್ರಾಂಟ್ ಗರ್ವಾ ಮತ್ತು ಬಂಟಿಂಗ್ ಕಂಪೆನಿಯವರು ಲಿಂಲಿದ್ಗೋ ಕಮಿಾಷನ್ನಿನವರ ಮುಂದೆ ಸಾಕ್ಷ್ಯಹೇಳುತ್ತಾ ನಮ್ಮ ದೇಶದಲ್ಲಿ ಕ್ರಿಮಿಕೀಟಗಳಿಂದ ಶೇಕಡ 2½ ಯಷ್ಟು ಗುಣಿಗಳಲ್ಲಿ ಕೂಡಿಡುವುದರಿಂದ ಶೇಕಡ 5 ರಷ್ಟು ನಷ್ಟವಾಗುವುದೆಂದು ಹೇಳುತ್ತಾರೆ.[12]

ತೂಕ, ಅಳತೆ ಇವುಗಳಲ್ಲಿರುವ ಕೊರತೆಯನ್ನು ಹೇಳತೀರದು. ಮೈಸೂರಿನಂತಹ ಒಂದು ಸಣ್ಣ ಪ್ರಾಂತದಲ್ಲಿಯೇ ಒಂದು ಖಂಡುಗವೆಂದರೆ ಕೊಪ್ಪದಲ್ಲಿ 50 ಸೇರು, ಬನ್ನೂರಿನಲ್ಲಿ 100 ಸೇರು, ಮೈಸೂರಿನಲ್ಲಿ 160-180 ಸೇರು, ಹಾಸನದಲ್ಲಿ 200 ಸೇರು, ನೆಲಮಂಗಲದಲ್ಲಿ 320 ಸೇರು, ಗೋರಿಬಿದನೂರಿನಲ್ಲಿ 2000 ಸೇರು, ದಾವಣಗೆರೆಯಲ್ಲಿ 400 ಸೇರು, ಚನ್ನಗಿರಿಯಲ್ಲಿ 1000 ಸೇರು, ಮತ್ತು ಷಿಕಾರಿಪುರದಲ್ಲಿ 1600 ಸೇರು. ತೂಕದ ಒಂದುಸೇರಿಗೆ 22-24-28-32-36 ತೊಲ. ಒಂದು ಮಣಕ್ಕೆ 40-44-48-60 ಸೇರು. ಇದಂತಿರಲಿ; ಸಾಮಾನ್ಯವಾಗಿ ಸರಕಾರದವರಿಂದ ತಯಾರಾದ ತೂಕದ ಬಟ್ಟುಗಳೂ, ಸೇರುಗಳೂ ಉಪಯೋಗದಲ್ಲಿರುವುದಕ್ಕೆ ಪ್ರತಿ

ಯಾಗಿ ಬಹುವಿಧವಾದ ತೂಕದ ಕಲ್ಲುಗಳೂ, ಸೇರುಗಳೂ ಬಳಕೆಯಲ್ಲಿವೆ. ಪಂಜಾಬು ಬ್ಯಾಂಕು ಕಮಿಟಿಯವರು ಪರೀಕ್ಷಿಸಿದ 1407 ಗಜಗಡ್ಡಿಗಳಲ್ಲಿ ಶೇಕಡ 69 ಕಡ್ಡಿಗಳೂ, 5907 ತೂಕದ ಕಲ್ಲುಗಳಲ್ಲಿ 29 ಕಲ್ಲುಗಳೂ ತಪ್ಪಾಗಿದ್ದುವಂತೆ.[13] ಅಲ್ಲದೆ ಅಳತೆಮಾಡುವವರ ಚಮತ್ಕಾರವೂಕೂಡ ರೈತರಿಗೆ ವಿರೋಧವಾಗಿಯೇ ಇರುವುದು; ಮತ್ತು ಲಾಟುಗಳನ್ನು ಒಟ್ಟೊಟ್ಟಿಗೆ ತೂಗುವುದರ ಬದಲು ಚಿಲ್ಲರೆಯಾಗಿ ತೂಗುವುದರಿಂದಲೂ ರೈತರಿಗೆ ನಷ್ಟ. ಏಕೆಂದರೆ ಪ್ರತಿಸಲವೂ, ಸ್ವಲ್ಪಸ್ವಲ್ಪ ಮುಂಗೋಲಾಗಿ ತೂಗಿದರೂ ಒಟ್ಟಿನಲ್ಲಿ ಬಹುನಷ್ಟವಾಗುವುದು.

ಇನ್ನು ಪರದೇಶದ ವ್ಯಾಪಾರದ ಕಡೆಗೆ ಸ್ವಲ್ಪ ಗಮನವನ್ನು ಕೊಡೋಣ. ಪ್ರತಿವರ್ಷವೂ ನಮ್ಮ ನಾಡಿನಿಂದ ಪರದೇಶಗಳಿಗೆ ನೂರಾರು ಕೋಟಿ ರೂಪಾಯಿಗಳ ಬೆಲೆಬಾಳುವ ಆಹಾರಪದಾರ್ಥ, ಅರಳೆ, ಟೀ, ಸಣಬು, ಎಣ್ಣೆಯಬೀಜ ಮೊದಲಾದುವು ರಫ್ತಾಗುತ್ತಿವೆ. ಈ ವ್ಯಾಪಾರವು ಬೆಳೆದಷ್ಟೂ, ನಮ್ಮನಾಡಿನ ಸಾಮಾನುಗಳಿಗೆ ಗಿರಾಕಿಗಳು ಹೆಚ್ಚಿದಷ್ಟೂ ನಮ್ಮ ರೈತರ ಜೀವನದ ಅಂತಸ್ತು ಬೆಳೆಯುವುದರಲ್ಲಿ ಸಂದೇಹವಿಲ್ಲ. ಆದರೆ ಈ ಸಂದರ್ಭದಲ್ಲಿರುವ ಅನೇಕ ಅಡಚಣೆ ಗಳನ್ನು ಮರೆಯಬಾರದು. ಇಂಗ್ಲೆಂಡ್, ಜರ್ಮನಿ, ಫ್ರಾನ್ಸ್ ಮೊದಲಾದ ದೇಶಗಳಿಗೆ ನಾವು ಹೆಚ್ಚು ಹೆಚ್ಚು ದಿನಸಿಗಳನ್ನೂ ಎಣ್ಣೆಯ ಬೀಜವನ್ನೂ ಕಳುಹಿಸುತ್ತಿದ್ದೆವು. ಮಹಾಯುದ್ಧದಿಂದೀಚೆಗೆ ಯೂರೋಪಿನ ಪ್ರತಿ ರಾಷ್ಟ್ರದಲ್ಲಿಯೂ ತಮಗೆ ಬೇಕಾಗಬಹುದಾದ ಎಲ್ಲಾ ಪದಾರ್ಥಗಳನ್ನೂ ತಮ್ಮ ರಾಷ್ಟ್ರದಲ್ಲಿಯೇ ಅಥವಾ ತಮಗೆ ಸೇರಿದ ಸ್ವಾಸ್ಥ್ಯಗಳಲ್ಲಿಯೇ ಒದಗಿಸಿಕೊಳ್ಳಬೇಕೆಂಬ ಆಸೆಯು ಬಲವಾಗುತ್ತ ಬಂದಿದೆ. ಅದರ ಪರಿ ಣಾಮವಾಗಿ ಎಲ್ಲ ರಾಷ್ಟ್ರಗಳ ಸುತ್ತಲೂ ಸುಂಕದ ಗೋಡೆಗಳು ಅಗಾಧ ವಾಗಿ ಬೆಳೆಯುತ್ತಿವೆ. ದುರ್ಭಿಕ್ಷದಲ್ಲಿ ಅಧಿಕಮಾಸ ಬೇರೆ; ಕೆನಡ, ಆಸ್ಟ್ರೇ ಲಿಯ, ಈಜಿಪ್ಟ್, ದಕ್ಷಿಣಆಫ್ರಿಕ, ಸಿಲೋನ್ ಮೊದಲಾದ ಬ್ರಿಟಿಷ್

ಸಾಮ್ರಾಜ್ಯಾಂತರ್ಗತರಾಷ್ಟ್ರಗಳೂ, ಆರ್ಜೆಂಟೈನ, ಅಮೆರಿಕದ ಸಂಯುಕ್ತ ರಾಷ್ಟ್ರ ಮೊದಲಾದ ರಾಷ್ಟ್ರಗಳೂ ನಮ್ಮ ದೇಶದ ರೈತರು ಬೆಳೆಯುವ ಪದಾರ್ಥಗಳನ್ನೇ ವಿಶೇಷವಾಗಿ ಬೆಳೆದು ಪಾಶ್ಚಾತ್ಯರ ಮಾರ್ಕೆಟ್ಟುಗಳಲ್ಲಿ ಪೈಪೋಟಿ ಮಾಡುತ್ತಿರುವುವು. ಈ ಬಗೆಯ ಪೈಪೋಟಿಯ ವ್ಯಾಪಾರದಲ್ಲಿ ಸರ್ಕಾರದವರ ಸಹಾಯವಿಲ್ಲದೆ ನಮ್ಮ ರೈತರು ಗೆಲ್ಲಲಾರರು. ಪ್ರಪಂಚದ ಸಂದಿಗ್ಧ ಆರ್ಥಿಕವಾತಾವರಣವು ನಮ್ಮ ನಾಡಿನ ರೈತರ ಮೂಗನ್ನು ಬಲವಾಗಿ ಹಿಡಿದಿದೆ. ನಮ್ಮ ದೇಶದ ದಿನಸಿಗಳಿಗೆ ಗಿರಾಕಿಗಳು ಹೆಚ್ಚಾಗಿ ದೊರೆಯಬೇಕಾದರೆ, ನಮ್ಮ ಸರ್ಕಾರದವರು ನಮ್ಮ ಗಿರಾಕಿಗಳಾಗಬಹುದಾದ ರಾಷ್ಟ್ರಗಳೊಡನೆ ಬುದ್ಧಿವಂತಿಕೆಯಿಂದ ಒಪ್ಪಂದವನ್ನು ಮಾಡಿಕೊಳ್ಳಬೇಕು. ಅದಂತಿರಲಿ; ಇತರ ರಾಷ್ಟ್ರಗಳ ಜನರು ನಮ್ಮ ದಿನಸಿಗಳ ಯೋಗ್ಯತೆಯನ್ನು ಅರಿತರೆತಾನೆ, ಅವುಗಳನ್ನು ಅವರು ಬಯಸುವುದು. ಇದಕ್ಕಾಗಿಯೇ ಮುಂದುವರಿದಿರುವ ಜನಾಂಗಗಳೆಲ್ಲವೂ ತಮ್ಮ ವಾಣಿಜ್ಯ ಪ್ರತಿನಿಧಿಗಳನ್ನು ಎಲ್ಲ ದೇಶಗಳಿಗೂ ಕಳುಹಿಸುವುದು. ಈ ಸಂದರ್ಭದಲ್ಲಿ ಮುಖ್ಯವಾಗಿ ನಡೆಯಬೇಕಾದ ಕೆಲಸಗಳು ಯಾವುವೆಂದರೆ (i) ನಮ್ಮ ದೇಶದ ಪದಾರ್ಥಗಳಿಗೆ ಪರದೇಶದ ಮಾರ್ಕೆಟ್ಟುಗಳ ಗಮನವು ಬೀಳುವಂತೆ ಪ್ರಚಾರವಾಗಬೇಕು. (ii) ಪರದೇಶಗಳಿಗೆ ಕಳುಹಿಸುವ ಸಾಮಾನುಗಳು ಉತ್ತಮವಾದುವಾಗಿರಬೇಕು. ಕಡೆಗೆ ನಿರ್ಣೀತವಾದ (Standardised) ವರ್ಗದುವಾದರೂ ಆಗಿರಬೇಕು. ಪರದೇಶದ ವರ್ತಕರು ನಮ್ಮ ದೇಶದಿಂದ ಬರುವ ಸಾಮಾನುಗಳಲ್ಲಿ ಸಂಪೂರ್ಣ ನಂಬುಗೆಯನ್ನು ಹೊಂದುವಂತೆ ಮಾಡಬೇಕು. ಲಾಂಕಾಷೈರಿನ ಅರಳೆ ಗಿರಣಿಯವರು ನಮ್ಮ ದೇಶದ ಅರಳೆಯನ್ನು ವಿಶೇಷವಾಗಿ ಕೊಳ್ಳದಿರಲು, ನಮ್ಮ ದೇಶದಿಂದ ಕಳುಹಿಸಲ್ಪಡುವ ಅರಳೆಯಲ್ಲಿ ಕಸ ಕಡ್ಡಿಗಳು ಹೆಚ್ಚಾಗಿ ಬೆರೆಯುವುದೇ ಕಾರಣವೆಂದು ಹೇಳುತ್ತಾರೆ.

ಹೀಗೆ ಇತರ ರಾಷ್ಟ್ರಗಳಲ್ಲಿ ನಮ್ಮ ರೈತರ ದಿನಸಿಗಳಿಗೆ ಗಿರಾಕಿಗಳನ್ನು ಒದಗಿಸಿಕೊಡಬೇಕಾದುದು ಒಂದು ಮುಖ್ಯವಾದ ಕೆಲಸವಾಗಿದೆ.

ಇದಲ್ಲದೆ ಇತರ ರಾಷ್ಟ್ರಗಳಲ್ಲಿ ಯಾವ ಬಗೆಯ ಪದಾರ್ಥಗಳಿಗೆ ಗಿರಾಕಿಗಳು ದೊರೆಯಬಹುದೆಂಬುದನ್ನೂ, ಯಾವ ಪದಾರ್ಥಗಳಿಗೆ ಬೆಲೆಯು ವ್ಯತ್ಯಸ್ತ ವಾಗಬಹುದೆಂಬುದನ್ನೂ ನಮ್ಮ ರೈತರಿಗೆ ಪದೇಪದೇ ತಿಳಿಸುತ್ತಿರಬೇಕು. ಉದಾಹರಣೆ: ಉತ್ತಮವರ್ಗದ ಅರಳೆಯನ್ನು ಬೆಳೆದರೆ ಲಾಂಕಾಷೈರಿನಲ್ಲಿ ಒಳ್ಳೆಯ ಗಿರಾಕಿಗಳು ದೊರೆಯುವರೆಂಬ ಭರವಸೆಯು ನಮ್ಮ ರೈತರಿಗೆ ತಿಳಿದರೆ ಅವರು ಉತ್ತಮವರ್ಗದ ಅರಳೆಯನ್ನೇ ಬೆಳೆಯುವರು.

ಆರ್ಥಿಕಜೀವನದ ಅನೇಕ ಶಾಖೆಗಳಲ್ಲಿ ವ್ಯಕ್ತಿಗಳಿಗೆ ಸಂಪೂರ್ಣ ಸ್ವಾತಂತ್ರ್ಯವನ್ನು ಕೊಟ್ಟು ದೂರದಿಂದ ನೋಡುತ್ತಿದ್ದ ಜನಾಂಗಗಳ ಸರ್ಕಾರಗಳೂ ಕೂಡ ತಮ್ಮ ದೇಶದ ವ್ಯಾಪಾರದ ಬೆಳವಳಿಕೆಗಾಗಿ ತಮ್ಮ ತನುಮನಧನಗಳನ್ನೆಲ್ಲಾ ಅರ್ಪಿಸಿ ಬದ್ಧಕಂಕಣರಾಗಿ ಕೆಲಸಮಾಡುತ್ತಿದ್ದುದೂ, ಮಾಡುತ್ತಿರುವುದೂ ಪ್ರಪಂಚದ ಇತಿಹಾಸದ ಬೆಳವಳಿಕೆಯಲ್ಲಿ ಮುಖ್ಯಪ್ರಕರಣವಾಗಿರುವುದಷ್ಟೆ. ಈಗಿನಕಾಲದಲ್ಲಂತೂ ವ್ಯಕ್ತಿಸ್ವಾತಂತ್ರ್ಯವು ಸಂಪೂರ್ಣವಾಗಿ ನಾಶವಾಗಿದೆ. ಜನಾಂಗದ ಆರ್ಥಿಕಾಭ್ಯುದಯವೇ ಸರ್ಕಾರದವರ ಮೊದಲನೆಯ ಕರ್ತವ್ಯವಾಗಿದೆ. ವಾಣಿಜ್ಯದ ಒಪ್ಪಂದಗಳೂ ವಾಣಿಜ್ಯ ಸಚಿವರುಗಳೂ ಹೆಚ್ಚು ಹೆಚ್ಚು ಬಳಕೆಗೆ ಬರುತ್ತಿರುವುದು ಸಕಲರಿಗೂ ತಿಳಿದ ಅಂಶವೇ. ಯಾವ ಸರ್ಕಾರವು ಇತರ ಸರ್ಕಾರಗಳಿಂದ ತಮ್ಮದೇಶದ ವ್ಯಾಪಾರದ ಬೆಳವಣಿಗೆಗೆ ಹೆಚ್ಚುರಿಯಾಯತಿಯನ್ನು ಸಂಪಾದಿಸುತ್ತದೆಯೋ ಅದು ಅಷ್ಟು ದಕ್ಷತೆಯುಳ್ಳದೆನಿಸಿಕೊಳ್ಳುವುದು.

ಇತರ ರಾಷ್ಟ್ರಗಳಿಗಿಂತ ನಮ್ಮ ರಾಷ್ಟ್ರದಲ್ಲಿ ಆರ್ಥಿಕಜೀವನವು ಸರ್ಕಾರದವರ ಬೆಂಬಲವನ್ನು ನಿರೀಕ್ಷಿಸುತ್ತಿದೆ. ಅದರಲ್ಲಿಯೂ ವಿದ್ಯಾವಿಹೀನರಾದ ನಮ್ಮ ದೇಶದ ರೈತರೆಂಬ ಕೂಪಕೂರ್ಮಗಳು ಸರ್ಕಾರದವರ ಆಶ್ರಯವಿಲ್ಲದೆ ಒಂದು ನಿಮಿಷವಾದರೂ ಜೀವಿಸಲಾರರು. ವ್ಯಾಪಾರದ ವಿಷಯದಲ್ಲಿ ಸರ್ಕಾರದವರು ಎಷ್ಟುಮಟ್ಟಿಗೆ ರೈತರಿಗೆ ನೆರವಾಗಬಹು

ದೆಂಬುದನ್ನು ಲಿಂಲಿತ್ಗೊ ಕಮಿಷನ್ನಿನವರೂ, ಸೆಂಟ್ರಲ್ ಬ್ಯಾಂಕಿಂಗ್ ಸಮಿತಿಯವರೂ ವಿವರಿಸಿರುವರು. ಅವುಗಳಲ್ಲಿ ಕೆಲವನ್ನು ನಾವು ವಿಮರ್ಶಿಸಬಹುದು.

1. ಅಳತೆ, ತೂಕ—ಇವುಗಳನ್ನು ಕ್ರಮಪಡಿಸುವುದು: ನಮ್ಮ ನಾಡಿನ ಎಲ್ಲಾ ಪ್ರಾಂತಗಳಲ್ಲಿಯೂ ಇದಕ್ಕಾಗಿ ಕಾನೂನುಗಳು ಜಾರಿಯಲ್ಲಿವೆ. ಆದರೆ ನಾವು ಮೊದಲೇ ಕೊಟ್ಟಿರುವ ಲೆಕ್ಕಗಳಿಂದ ವಿದಿತವಾಗುವಂತೆ ಈ ಕಾನೂನುಗಳು ಸಾಕಾದಷ್ಟು ಪ್ರಯೋಜನಕಾರಿಗಳಾಗಿಲ್ಲ. ಆದುದರಿಂದ ದೊಡ್ಡ ಸಂತೆಗಳಲ್ಲಾದರೂ ಸರ್ಕಾರದವರು ವೇಬ್ರಿಡ್ಜ್ ಎಂಬ ತೂಕದ ಯಂತ್ರಗಳನ್ನು ರಚಿಸಬಹುದು. ಬಿರಾರಿನ ಅರಳೆ ವ್ಯಾಪಾರಕ್ಕಾಗಿ ರಚಿಸಿರುವ ವೆಬ್ರಿಡ್ಜ್‌ನಂತೆ ಇತರ ಸ್ಥಳಗಳಲ್ಲಿಯೂ ರಚಿಸುವುದು ಅವಶ್ಯಕ. ವರ್ತಕಮಂಡಳಿಗಳೊಡನೆ ಸಹಕರಿಸಿ ಇಡೀ ಭಾರತದೇಶದಲ್ಲಿ ಒಂದೇ ಶಿಸ್ತಿಗೆ ಒಳಪಟ್ಟ ಅಳತೆತೂಕಗಳನ್ನು ಕಾನೂನಿನ ಮೂಲಕ ಜಾರಿಗೆ ತರಬೇಕು.

2. ಮುಖ್ಯವಾದ ಸ್ಥಳಗಳಲ್ಲಿ ವರ್ತಕರೂ, ದಳ್ಳಾಳಿಗಳೂ, ರೈತರ ಪ್ರತಿನಿಧಿಗಳೂ, ಕೆಲವು ಖಾಸಗೀ ದೊಡ್ಡಮನುಷ್ಯರೂ ಸೇರಿರುವ ಮಾರ್ಕೆಟ್ ಪಂಚಾಯತಿಗಳನ್ನು ರಚಿಸಿ ಆಯಾ ಮಾರ್ಕೆಟ್ಟುಗಳ ಮೇಲ್ವಿಚಾರಣೆಯನ್ನು ಅಂತಹ ಸಮಿತಿಗಳಿಗೆ ಒಪ್ಪಿಸಬೇಕು. ದಳ್ಳಾಳಿಗಳ ಕಮಿಷನ್ ಮುಂತಾದ ಮಾಮೂಲುಗಳನ್ನು ಕ್ರಮಪಡಿಸಿ ವ್ಯಾಪಾರವು ನ್ಯಾಯವಾಗಿಯೂ, ಧರ್ಮವಾಗಿಯೂ ನಡೆಯುವಂತೆ ಕಾನೂನುಗಳನ್ನು ರಚಿಸಬೇಕು.

3. ಶುದ್ಧವಾದ ಸಾಮಾನುಗಳನ್ನು ಅವುಗಳ ಯೋಗ್ಯತೆಗೆ ತಕ್ಕ ಪಂಗಡಗಳಲ್ಲಿ ಮಾರಾಟವಾಗುವಂತೆ ಕಾನೂನುಗಳ ಮೂಲಕ ರೈತರನ್ನೂ, ಅದಕ್ಕಿಂತ ಮುಖ್ಯವಾಗಿ ವ್ಯಾಪಾರಿಗಳನ್ನೂ ಬಲಾತ್ಕರಿಸಬೇಕು. ಉದಾಹರಣೆ: ಅನೇಕ ವ್ಯಾಪಾರಿಗಳು ಉತ್ತಮವರ್ಗದ ಅರಳೆಯನ್ನೂ ದೂಳು

ಕಸಗಳೊಡನೆಯೇ ಬೆರಸಿ ಬೇಲುಗಳಾಗಿ ಕಟ್ಟಿ ಪರದೇಶಗಳಿಗೆ ಕಳುಹಿಸುವರು. ಹೀಗೆ ಮಾಡುವುದರಿಂದ ಪ್ರಪಂಚದ ಮಾರ್ಕೆಟ್ಟುಗಳಲ್ಲಿ ನಮ್ಮ ದೇಶದ ಅರಳೆಯಲ್ಲಿ ನಂಬುಗೆಯು ಕೆಡುವುದು; ಗಿರಾಕಿಗಳು ಕಡಮೆಯಾಗುವರು. ಇದರಿಂದಾಗುವ ನಷ್ಟವು ವರ್ತಕರಿಗಿಂತಲೂ ರೈತರಿಗೇ ಮಿಗಿಲು. ಆದುದರಿಂದ ಸರ್ಕಾರದವರು ಈ ವಿಷಯದಲ್ಲಿ ಪ್ರವೇಶಮಾಡುವುದು ಆವಶ್ಯಕ. ಉತ್ತಮವಾದ ಪದಾರ್ಥವನ್ನು ಬೆಳೆದರೆ ಇತರರು ಬೆಳೆಯುವ ಮಧ್ಯಮ ಮತ್ತು ಅಧಮ ಪದಾರ್ಥಗಳಿಗಿಂತ ಹೆಚ್ಚು ಬೆಲೆಯು ತಮಗೆ ದೊರೆಯುವುದೆಂಬ ನಂಬುಗೆಯು ರೈತರ ಮನಸ್ಸಿನಲ್ಲಿ ನಾಟಬೇಕು. ಪದಾರ್ಥಗಳನ್ನು ಚೀಲಗಳಲ್ಲಿಯಾಗಲೀ ಪೆಟ್ಟಿಗೆಗಳಲ್ಲಾಗಲೀ ಪ್ಯಾಕ್ ಮಾಡುವಾಗಲೂ ಒಂದು ವಿಧವಾದ ಶಿಸ್ತಿದ್ದರೆ ವ್ಯಾಪಾರವು ಸುಲಭ. ಮುಂದುವರಿದಿರುವ ರಾಷ್ಟ್ರಗಳಲ್ಲಿ ಟ್ರೇಡ್‌ಮಾರ್ಕುಗಳು ಹೆಚ್ಚು ಪ್ರಾಶಸ್ತ್ಯವನ್ನು ಹೊಂದಿವೆ. ಉದಾಹರಣೆ: ನಾವು ಜವಳಿ ಅಂಗಡಿಗೆ ಹೋಗಿ 1703 ನೆಯ ನಂಬರು ಮಲ್ಲನ್ನು ಕೊಂಡುಕೊಂಡರೆ ನಮಗೆ ಯಾವ ಬಗೆಯ ಬಟ್ಟೆಯು ದೊರೆಯುವುದೆಂಬುದರಲ್ಲಿ ಸಂದೇಹವಿಲ್ಲ. ಅದೇರೀತಿಯಲ್ಲಿ ಯಾವುದಾದರೂ ಒಂದು ಹೆಗ್ಗುರುತುಳ್ಳ ಚೀಲದ ದವಸವನ್ನು ಕೊಂಡರೆ ನಾವು ಸಂಶಯಪಡಬೇಕಾಗಿಲ್ಲವೆಂಬ ವಿಶ್ವಾಸವು ನಮ್ಮ ಗಿರಾಕಿಗಳ ಮನಸ್ಸಿನಲ್ಲಿ ಹುಟ್ಟಬೇಕು. ಇಂಗ್ಲೆಂಡ್, ಜರ್ಮನಿ, ಸಂಯುಕ್ತರಾಷ್ಟ್ರ ಮೊದಲಾದ ದೇಶಗಳಲ್ಲಿ ಸರ್ಕಾರದವರು ರೈತರು ಬೆಳೆದ ಪದಾರ್ಥಗಳ ಯೋಗ್ಯತೆ, ಬೆಲೆ, ಟ್ರೇಡ್‌ಮಾರ್ಕ್ ಮತ್ತು ಪ್ಯಾಕಿಂಗ್‌ಗಳಲ್ಲಿ ಒಂದು ಶಿಸ್ತಿರಬೇಕೆಂಬ ಭಾವನೆಯಿಂದ ಕಾನೂನುಗಳನ್ನು ಜಾರಿಯಲ್ಲಿಟ್ಟಿರುವರು.[14] ಇಂತಹ ಕಾನೂನುಗಳು ನಮ್ಮ ದೇಶದಲ್ಲಿಯೂ ಆವಶ್ಯಕ.

4. ಇತರ ರಾಷ್ಟ್ರಗಳಲ್ಲಿ ನಮ್ಮ ವ್ಯಾಪಾರವನ್ನು ಅಭಿವೃದ್ಧಿಪಡಿಸಲು ಸರ್ಕಾರದವರು ಬಹುಮಟ್ಟಿಗೆ ಸಹಾಯಮಾಡಬಹುದಷ್ಟೆ.

ಇದಕ್ಕಾಗಿಯೇ ಮೈಸೂರಿನ ಟ್ರೇಡ್ ಕಮಿಷನರ್ ಎಂಬ ಅಧಿಕಾರಿಯು ಲಂಡನ್ನಿನಲ್ಲಿರುವುದು. ಮೈಸೂರಿನ ಗಂಧದ ಎಣ್ಣೆ, ಕಾಫಿಬೀಜ, ಕೊಬ್ಬರಿ, ರೇಷ್ಮೆ— ಇವುಗಳ ವಿಷಯದಲ್ಲಿ ಹೆಚ್ಚು ಪ್ರಚಾರಮಾಡಿ ಗಿರಾಕಿಗಳನ್ನು ಒದಗಿಸುವುದು ಆ ಅಧಿಕಾರಿಯ ಮುಖ್ಯಕರ್ತವ್ಯ. ಇದಲ್ಲದೆ ನಮ್ಮ ದೇಶದ ಪದಾರ್ಥಗಳನ್ನು ಯಾವ ರೂಪದಲ್ಲಿ ಕಳುಹಿಸಿದರೆ, ಯಾವ ಕಾಲದಲ್ಲಿ ಕಳುಹಿಸಿದರೆ ನಮ್ಮ ಗಿರಾಕಿಗಳಿಗೆ ಅದರಲ್ಲಿ ಆಸಕ್ತಿ ಹೆಚ್ಚುವುದು ಎಂಬುದನ್ನು ನಮ್ಮ ರೈತರಿಗೆ ತಿಳಿಸುವುದೂ ಆತನ ಕರ್ತವ್ಯ.

5. ಮೊದಲೇ ತಿಳಿಯಿಸಿರುವಂತೆ ವ್ಯಾಪಾರಕ್ಕೆ ಅನುಕೂಲವಾಗುವಂತೆ ರಸ್ತೆಗಳನ್ನೂ, ರೈಲುಗಳನ್ನೂ ಅಭಿವೃದ್ಧಿಗೆ ತರುವುದೂ ಸರ್ಕಾರದವರ ಪಾಲಿಗೇ ಸೇರಿದುದು.

6. ಪರದೇಶದಿಂದ ನಮ್ಮ ದೇಶಕ್ಕೆ ಬಂದು ನಮ್ಮ ರೈತರೊಡನೆಯೇ ಪೈಪೋಟಿಮಾಡಬಹುದಾದ ಪದಾರ್ಥಗಳ ಮೇಲೆ ಹೆಚ್ಚು ಸುಂಕವನ್ನು ಹಾಕಿ ನಮ್ಮ ರೈತರಿಗೆ ರಕ್ಷಣೆಯನ್ನು ಕೊಡಬೇಕು. ಮತ್ತು ಇತರ ರಾಷ್ಟ್ರಗಳೊಡನೆ ವಾಣಿಜ್ಯದ ಒಪ್ಪಂದವನ್ನು ಮಾಡಿಕೊಂಡು ನಮ್ಮ ದೇಶದ ಪದಾರ್ಥಗಳಿಗೆ ರಿಯಾಯತಿಯನ್ನು ಸಂಪಾದಿಸಬೇಕು. ಸಯಾಂದೇಶದಿಂದ ಬರುವ ಅಕ್ಕಿಯಮೇಲೆ ಹೆಚ್ಚು ಸುಂಕವನ್ನು ಹಾಕಬೇಕೆಂಬುದಾಗಿ ಮದ್ರಾಸ್ ಪ್ರತಿನಿಧಿಗಳು ಸರ್ಕಾರದವರನ್ನು ಒತ್ತಾಯಪಡಿಸಿದುದು, ಇದಕ್ಕೆ ಒಂದು ನಿದರ್ಶನ. 1934 ನೆಯ ಇಸವಿಯಲ್ಲಿ ಇಂಡಿಯಾ ಸರ್ಕಾರದವರಿಗೂ ಜಪಾನ್ ಸರ್ಕಾರದವರಿಗೂ ಆಗಿದ್ದ ವಾಣಿಜ್ಯದ ಒಪ್ಪಂದವೂ, ಒಟ್ಟಾವಾ ಪಟ್ಟಣದಲ್ಲಿ ಬ್ರಿಟಿಷ್‌ಸರ್ಕಾರಕ್ಕೂ ಇಂಡಿಯಾ ಸರ್ಕಾರಕ್ಕೂ ಆಗಿದ್ದ ವಾಣಿಜ್ಯದ ಒಪ್ಪಂದವೂ ಕೂಡ ಇದಕ್ಕೆ ಇತರ ನಿದರ್ಶನಗಳಾಗಿವೆ.

ಅಗ್ರಿಕಲ್ಚರಲ್ ಕಮಿಷನ್ ಮತ್ತು ಬ್ಯಾಂಕಿಂಗ್ ಸಮಿತಿಯವರ ಸಲಹೆಯನ್ನು ಅಂಗೀಕರಿಸಿ ನಮ್ಮ ಕೇಂದ್ರಸರ್ಕಾರದವರು ರೈತರಿಗೆ

ವ್ಯಾಪಾರದಲ್ಲಿರುವ ತೊಂದರೆಗಳನ್ನೆಲ್ಲಾ ಪರಿಹರಿಸಲು ಸಂಪೂರ್ಣವಾಗಿ ಜವಾಬ್ದಾರಿಯನ್ನು ವಹಿಸಿಕೊಂಡಿರುವರು. 1919 ನೆಯ ಇಸವಿಯ ಸುಧಾರಣೆಯಾದಂದಿನಿಂದಲೂ ಈ ವಿಷಯವು ಪ್ರತಿಪ್ರಾಂತದಲ್ಲಿಯೂ ಪ್ರಜೆಗಳಿಂದ ಚುನಾಯಿತರಾದ ಮಂತ್ರಿಗಳ ಆಡಳಿತಕ್ಕೆ ಒಳಪಟ್ಟುದು. ಆದರೂ ಪ್ರಾಂತಸರ್ಕಾರಗಳು ದುಡ್ಡಿನ ಅಭಾವದಿಂದ ರೈತರಿಗೆ ಹೆಚ್ಚು ಸಹಾಯವನ್ನು ಮಾಡಲಾರವು. ಆದುದರಿಂದಲೇ ಕೇಂದ್ರಸರ್ಕಾರದ ಮೇಲೆಯೇ ಈ ಭಾರವು ಬೀಳುತ್ತಿದೆ. ಈಗಾಗಲೇ ಸೆಂಟ್ರಲ್ ಬ್ಯಾಂಕಿಂಗ್ ಸಮಿತಿಯ ಸಲಹೆಯ ಮೇರೆ ಲಿಂವಿಂಗ್ಸ್ಟ್ರ್ ಎಂಬ ವ್ಯಾಪಾರನಿಪುಣನನ್ನು ಈ ಕೆಲಸಕ್ಕಾಗಿ ನೇಮಕಮಾಡಿಕೊಂಡಿರುವರು. ಅಲ್ಲದೆ ಏಳು ಜನ ಸೀನಿಯರ್ ಮಾರ್ಕೆಟಿಂಗ್ ಆಫೀಸರುಗಳನ್ನೂ ಮತ್ತು ಅವರಿಗೆ ಸಹಾಯಕರನ್ನೂ ನಿಯಮಿಸಿರುವರು. ಇವರುಗಳ ಜೊತೆಗೆ ಪ್ರತಿಪ್ರಾಂತದಲ್ಲಿಯೂ ಅಲ್ಲಿಯಸನ್ನಿವೇಶಕ್ಕನುಗುಣವಾಗಿ ಮಾರ್ಕೆಟಿಂಗ್ ಆಫೀಸರುಗಳನ್ನು ನೇಮಕಮಾಡಿರುವರು. ಮೈಸೂರುದೇಶದಲ್ಲಿಯೂ ಮಾರ್ಕೆಟಿಂಗ್ ಆಫೀಸರುಗಳು ನೇಮಕವಾಗಿರುವರು.[15]

ಈ ಆಫೀಸರುಗಳ ಸಹಾಯದಿಂದ ನಮ್ಮ ರೈತರು ಬೆಳೆಯುವ ಮುಖ್ಯವಾದ ಪದಾರ್ಥಗಳಿಗೆ ವ್ಯಾಪಾರದಲ್ಲಿ ಒದಗಬಹುದಾದ ಎಲ್ಲ ಸಮಸ್ಯೆಗಳನ್ನೂ ಕೂಲಂಕಷವಾಗಿ ವಿಮರ್ಶಿಸಿ ತಕ್ಕ ಸಹಾಯವನ್ನು ಕೊಡಬೇಕೆಂಬುದು ಸರ್ಕಾರದವರ ಅಭಿಪ್ರಾಯ. ಮೊದಮೊದಲು ಅಕ್ಕಿ, ಗೋಧಿ, ಬಾರ್ಲಿ, ನೆಲಗಡಲೆ, ಅಗಸೆಯಬೀಜ, ಹಣ್ಣುಗಳು, ಹಾಲು, ಬೆಣ್ಣೆ, ಮೊಟ್ಟೆಗಳು, ಮಾಂಸ, ಚರ್ಮ, ಹೊಗೆಯಸೊಪ್ಪು ಇವುಗಳ ವ್ಯಾಪಾರಕ್ಕೆ ಸಂಬಂಧಿಸಿದ ವಿಷಯವನ್ನು ವಿಮರ್ಶಿಸುವರು. ಸರ್ಕಾರದವರ ಈ ಪ್ರಯತ್ನವು ಫಲಕಾರಿಯಾಗಲೆಂಬುದೇ ನಮ್ಮ ಆಶಯ.

ಸರ್ಕಾರದವರು ರೈತರಿಗೆ ಹೆಚ್ಚು ಸಹಾಯಮಾಡಿದರೆ ಅದರಿಂದ ಒಂದು ದೊಡ್ಡ ಅಪಕಾರವಾಗುವುದು ; ರೈತರಲ್ಲಿ, ಆತ್ಮಾವಲಂಬನೆಯನ್ನು

ಬಿಟ್ಟು ಯಾವಾಗಲೂ ಇತರರ ಸಹಾಯವನ್ನೇ ಅಪೇಕ್ಷಿಸುತ್ತ ಕುಳಿತು ಕೊಳ್ಳುವ ಅಭ್ಯಾಸವು ಹೆಚ್ಚುವುದು. ನಮ್ಮ ಗ್ರಾಮಜೀವನವ ತೊಡಕಿಗೆ ರೈತರ ಈ ಮಾನಸಿಕರೋಗವು ಬಹುಮಟ್ಟಿಗೆ ಕಾರಣವಾಗಿದೆ. ಆದುದ ರಿಂದ ಯಾವಾಗಲೂ ರೈತರು ಆತ್ಮಾವಲಂಬಿಗಳಾಗಲು ಅನುವಾಗಿರಬೇಕು. ಅವರು ಬೆಳೆದ ಪದಾರ್ಥವನ್ನು ಮಾರುವುದರಲ್ಲಿ ಇದು ಹೇಗೆ ಸಾಧ್ಯ ವೆಂಬುದನ್ನು ವಿಚಾರಿಸೋಣ.

ಬೊಂಬಾಯಿ ಪ್ರಾಂತದ ನಿವೃತ್ತ ವ್ಯವಸಾಯ ಶಾಖಾಧಿಕಾರಿಗ ಳಾದ ಡಾಕ್ಟರ್ ಹೆರಾಲ್ಡ್ ಮ್ಯಾನ್ ಎಂಬುವರು ಅಗ್ರಿಕಲ್ಚರಲ್ ಕಮಿಷನ್ನಿ ನವರ ಮುಂದೆ ಸಾಕ್ಷ್ಯ ಹೇಳುತ್ತಾ "Generally speaking as regards marketing, for the future, I pin my faith to the development of cooperative marketing." ಎಂಬುದಾಗಿ ಪರಸ್ಪರಸಹಾಯತತ್ತ್ವದ ಬಾವುಟವನ್ನು ಎತ್ತಿ ಹಿಡಿದಿರು ವರು.[16] ಅಗ್ರಿಕಲ್ಚರಲ್ ಕಮಿಷನ್ನಿನವರೂ ಅದೇ ಮತವನ್ನು ಅನು ಮೋದಿಸಿರುವರು. ಇತರ ದೇಶಗಳ ಅನುಭವವೂ ಕೂಡ ರೈತರ ವ್ಯಾಪಾ ರಕ್ಕೆ ಪರಸ್ಪರ ಸಹಾಯಕಸಂಘಗಳು ಬಹು ಸಹಕಾರಿಗಳೆಂಬುದನ್ನು ತೋರಿಸುವುದು.[17] ಜರ್ಮನಿ, ಇಟಲಿ, ಸ್ವಿಡ್ಸರ್ಲೆಂಡ್, ಐರ್ಲೆಂಡ್, ಡೆನ್ಮಾರ್ಕ್, ಜಪಾನ್ ಈ ದೇಶಗಳಲ್ಲಿ ವ್ಯಾಪಾರಸಂಘಗಳು ರೈತರಿಗೆ ಎಷ್ಟ ರಮಟ್ಟಿಗೆ ಸಹಾಯಮಾಡುತ್ತಿವೆ ಎಂಬುದನ್ನು ಬೇರೆ ಕಡೆಯಲ್ಲಿ ವಿಮರ್ಶಿಸಿ ರುವೆವು.[18]

ಇಂಡಿಯಾದಲ್ಲಿಯೂ ಇಂತಹ ಸಂಘಗಳು ಬೆಳೆಯುತ್ತಿವೆ. ಅವು ಗಳಲ್ಲಿ ಅತಿಮುಖ್ಯವಾದುವು ಬೊಂಬಾಯಿ ಆಧಿಪತ್ಯದಲ್ಲಿ ಹುಬ್ಬಳ್ಳಿ, ಗದಗ್, ಧಾರ್ವಾರಗಳಲ್ಲಿರುವ ಅರಳೆ ವ್ಯಾಪಾರ ಸಂಘಗಳು, ಪಂಜಾಬಿನ ಕಮಿಷನ್ ಷಾಪುಗಳು, ಸಂಯುಕ್ತಪ್ರಾಂತದ ತುಪ್ಪದ ಸಂಘಗಳು. ಇವುಗಳಲ್ಲಿ ಉದಾಹರಣೆಗಾಗಿ ಕೆಲವು ಸೊಸೈಟಿಗಳ ಕೆಲಸವನ್ನು ಸ್ವಲ್ಪಮಟ್ಟಿಗೆ ವಿಮರ್ಶಿಸೋಣ.

1934 ನೆಯ ಇಸವಿಯಲ್ಲಿ ಹುಬ್ಬಳ್ಳಿಯ ಸಂಘವು 7 ಲಕ್ಷ ರೂ. ಗಳ ವ್ಯಾಪಾರವನ್ನು ಮಾಡಿ 12258 ರೂ. ಗಳ ಕಮಿಶನ್ ಸಂಪಾದನೆಮಾಡಿತು. ಗದಗಿನ ಸೊಸೈಟಿಯು $8\frac{1}{2}$ ಲಕ್ಷ ರೂಪಾಯಿನ ಅರಳೆ ವ್ಯಾಪಾರಮಾಡಿತು. ಈ ಎರಡು ಸೊಸೈಟಿಗಳಲ್ಲಿಯೂ ಅತ್ಯುತ್ತಮವಾದ ಕೆಲಸಗಳು ನಡೆಯುತ್ತಿವೆ. ವ್ಯವಸಾಯದ ಇಲಾಖೆಯವರು ಈ ಸಂಘಗಳ ಮೂಲಕ ರೈತರಿಗೆ ಉತ್ತಮವಾದ ಅರಳೆಬೀಜವನ್ನು ಮಾರುತ್ತಾರೆ. 1934 ರಲ್ಲಿ ಸುಮಾರು 23 ಲಕ್ಷ ಪೌಂಡಿನಷ್ಟು ಉತ್ತಮಜಾತಿಯ ಅರಳೆಬೀಜವು ಈ ರೀತಿ ಹಂಚಲ್ಪಟ್ಟಿತು. ಇದಲ್ಲದೆ ಈ ಸಂಘಗಳು ಪ್ರೈಮರಿ ಸಂಘಗಳ ಮೂಲಕ ಮುಂಗಡವಾಗಿ ರೈತರಿಗೆ ವ್ಯವಸಾಯಕ್ಕೆ ಅನುಕೂಲವಾಗುವ ಹಾಗೆ 300 ರೂಪಾಯಿಗೆ ಮೀರದೆ ಸಾಲವನ್ನೂ ಕೊಟ್ಟವು. ಫಸಲು ರೇಖೆಯಾದ ಮೇಲೆ ರೈತರು ಅರಳೆಯನ್ನು ಹುಬ್ಬಳ್ಳಿಗೋ, ಗದಗಿಗೋ ಕೊಂಡು ಹೋಗುವರು. ಅವರು ತಂದ ಅರಳೆಯ ತೂಕ, ಯೋಗ್ಯತೆ ಇವುಗಳನ್ನು ತೋರಿಸುವ ಒಂದು ಚೀಟಿಯನ್ನು ರೈತರಿಗೆ ಕೊಡುವರು. ಆ ಚೀಟಿಯ ಆಧಾರದ ಮೇಲೆ ಶೇಕಡ 60 ರವರೆಗೆ ಅವರಿಗೆ ಅಡ್ವಾನ್ಸ್ ದೊರೆಯುವುದು. ಅನಂತರ 15 ದಿವಸಕ್ಕೊಂದು ಸಲ ಹರಾಜು ಆಗುವುದು. ಅವರ ಮಾಲಿಗೆ ಬಂದ ಬೆಲೆಯು ಅವರ ಲೆಕ್ಕಕ್ಕೆ ಜಮಾ ಆಗುವುದು. ದಳ್ಳಾಳಿ, ರುಸುಂ, ಬಡ್ಡಿ, ಬಾಡಿಗೆ—ಇವುಗಳೆಲ್ಲವನ್ನೂ ಕಳೆದು ಉಳಿದ ಹಣವನ್ನು ರೈತರಿಗೆ ಸಲ್ಲಿಸುವರು. ವರ್ಷಾಂತದಲ್ಲಿ ಲಾಭವಿನಿಯೋಗವೂ ಮತ್ತು ರಿಬೇಟೂ ರೈತರಿಗೇ ದೊರೆಯುವುದು.

ಮೈಸೂರು ದೇಶದಲ್ಲಿಯೂ ಇಂತಹ ಸಂಘವೊಂದಿದೆ. ಚಿತ್ರದುರ್ಗ ಡಿಸ್ಟ್ರಿಕ್ಟಿನ ಮರಡಿಹಳ್ಳಿ ಗ್ರಾಮದಲ್ಲಿ 60-70 ಜನ ಅರಳೆ ವ್ಯವಸಾಯಗಾರರು ಒಂದು ಸಂಘವನ್ನು ರಚಿಸಿಕೊಂಡಿರುವರು. ನಮ್ಮ ವ್ಯವಸಾಯದ ಇಲಾಖೆಯವರು ಈ ಸಂಘದ ಮೂಲಕ ಮೇಲ್ತರಹೆಯ ಅರಳೆಬೀಜವನ್ನು ಬಳಕೆಗೆ ತರುತ್ತಿದಾರೆ. ಇಂತಹ ಬೀಜವನ್ನು ಸಂಘದವರು

ರೈತರಿಗೆ ಮುಂಗಡವಾಗಿ ಹಂಚುವುದಲ್ಲದೆ, ಬೇಸಾಯದ ಖರ್ಚಿಗಾಗಿ ಸ್ವಲ್ಪ ಹಣವನ್ನೂ ಮುಂಗಡವಾಗಿ ಕೊಡುವರು. ಬೆಳೆದ ಹತ್ತಿಯನ್ನೆಲ್ಲ ಸೊಸೈಟಿಯವರೇ ವಹಿಸಿಕೊಂಡು ತಾವೇ ಬೀಜಗಳನ್ನು ಪ್ರತ್ಯೇಕಿಸಿ ಎಕ್ಕಿದ ಅರಳೆಯನ್ನು ಕೂಡಿಟ್ಟಿದ್ದು ಬೆಲೆ ಹೆಚ್ಚಿದ ಕಾಲದಲ್ಲಿ ಮಾರಿ ಖರ್ಚು ಕಳೆದು ತೇಲಿದ ಲಾಭವನ್ನು ಮೆಂಬರುಗಳೇ ಹಂಚಿಕೊಳ್ಳುವರು. ಇದರಿಂದ ಪ್ರತಿಯೊಬ್ಬ ರೈತನಿಗೂ ಹೆಚ್ಚು ಲಾಭವು ಬಂದಂತೆ ಕಂಡು ಬರುತ್ತದೆ. 1931-32 ರಲ್ಲಿ ಈ ಸಂಘದಲ್ಲಿ 60 ಜನ ಸದಸ್ಯರಿದ್ದರು. 9644 ಮಣ ಅರಳೆ ವ್ಯಾಪಾರವಾಯಿತು. ಇತರರ ಅರಳೆಗಿಂತ ಈ ಅರ ಳೆಗೆ ಮಣ ಒಂದಕ್ಕೆ 0-3-0 ಹೆಚ್ಚು ಬೆಲೆಯು ದೊರೆತಿದೆ. ಅಲ್ಲದೆ ದಳ್ಳಾಳಿ ಮೊದಲಾದವುಗಳಲ್ಲಿಯೂ ರಿಯಾಯತಿಯು ದೊರೆತಿದೆ.

ಮೇಲ್ಕಂಡ ಸಂಘಗಳ ವಿಮರ್ಶೆಯಿಂದ ತಿಳಿದು ಬರುವ ಅಂಶಗಳಾ ವುವೆಂದರೆ, (1) ರೈತರು ಬೆಳೆದ ಪದಾರ್ಥಗಳನ್ನು ಸ್ವಲ್ಪಸ್ವಲ್ಪವಾಗಿ ಮಾರುವುದಕ್ಕಿಂತ ಒಟ್ಟಿನಲ್ಲಿ ಮಾರುವುದು ಲಾಭಕರ. ಆದುದರಿಂದ ರೈತರು ಬೆಳೆದ ಪದಾರ್ಥಗಳನ್ನು ಒಟ್ಟುಗೂಡಿಸುವುದು ಪರಸ್ಪರ ಸಹಾಯಕ ಸಂಘಗಳ ಪ್ರಥಮಕರ್ತವ್ಯ. (2) ಸಂಘಗಳು ಮಾರುವ ಪದಾರ್ಥಗಳಿಗೆ ಒಳ್ಳೆಯ ಹೆಸರು ಬಂದಷ್ಟೂ ರೈತರಿಗೇ ಲಾಭ. ಇದಕ್ಕಾಗಿ ಕೂಡಿಸಿದ ಪದಾರ್ಥಗಳನ್ನು ವಿಂಗಡಿಸುವುದು ಮತ್ತು ರೈತರು ಉತ್ತಮವಾದ ಪದಾರ್ಥ ಗಳನ್ನೇ ಬೆಳೆಯುವಂತೆ ಉತ್ತೇಜನಕೊಡುವುದು ಎರಡನೆಯ ಕೆಲಸ. (3) ಬೇಸಾಯಕ್ಕೆ ಬೇಕಾಗುವ ಹಣವನ್ನು ಒದಗಿಸಿಕೊಟ್ಟು ವರ್ತಕರ ಬಲೆ ಯಿಂದ ರೈತರನ್ನು ಬಿಡಿಸುವುದು ಮತ್ತೊಂದು ಕೆಲಸ. (4) ರೈತರು ಬೆಳೆದ ಪದಾರ್ಥಗಳನ್ನು ಯಾವಾಗ ತಂದರೂ ತೆಗೆದುಕೊಂಡು ಅವರಿಗೆ ಸದಾ ಗಿರಾಕಿಗಳು ದೊರೆಯುವರೆಂಬ ಭರವಸೆಯನ್ನುಂಟುಮಾಡುವುದು ಬೇರೊಂದು ಕೆಲಸ.[19]

ಇಂತಹ ಸಂಘಗಳು ಅತ್ಯಾವಶ್ಯಕಗಳೆಂಬುದು ನಿಜ. ಆದರೆ ಬರಿಯ ಕಡಕೊಡುವ ಸಂಘಗಳಿಗಿಂತಲೂ ಇಂತಹ ಸಂಘಗಳನ್ನು ಸ್ಥಾಪಿ

ಸುವುದು ಕಷ್ಟ. ಎಲ್ಲ ಪದಾರ್ಥಗಳ ಮಾರಾಟಕ್ಕೂ ಈ ಸಂಘಗಳು ಅನುಕೂಲವಾಗಿಲ್ಲ. ತರಕಾರಿ, ಹಣ್ಣುಹಂಪಲು ಮೊದಲಾದ ಬೇಗ ಕೆಡುವ ಪದಾರ್ಥಗಳಿಂದ ಸಂಘಗಳಿಗೆ ಬಹಳ ಕಷ್ಟನಷ್ಟಗಳುಂಟು. ಆದುದರಿಂದ ಸಂಘವನ್ನು ಸ್ಥಾಪಿಸುವ ಮೊದಲು ಅದು ಯಾವ ಪದಾರ್ಥವನ್ನು ಮಾರಬೇಕೆಂಬುದನ್ನು ತೀರ್ಮಾನಿಸಬೇಕು. ಮೈಸೂರು ದೇಶದಲ್ಲಿ ಅಡಕೆ, ಅರಳೆ, ಕಾಫಿ, ರೇಷ್ಮೆ, ಯಾಲಕ್ಕಿ ಮೊದಲಾದ ಹೆಚ್ಚು ಬೆಲೆಯುಳ್ಳ ಪದಾರ್ಥಗಳಿಗಾಗಿ ಸಂಘವನ್ನು ಸ್ಥಾಪಿಸಬಹುದು.

ಎರಡನೆಯ ಕಷ್ಟವು ಕೊಂಡ ಪದಾರ್ಥಗಳನ್ನು ಶೇಖರಿಸಿಡಲು ಸ್ಥಳವಸತಿಯನ್ನು ಕಲ್ಪಿಸಿಕೊಳ್ಳುವುದರಲ್ಲಿದೆ. ಪದಾರ್ಥಗಳು ಕೆಡದಂತೆಯೂ ಕಳ್ಳಕಾಕರಿಗೆ ಸಿಕ್ಕದಂತೆಯೂ ನೋಡಿಕೊಳ್ಳುವುದು ಬಹಳ ಕಷ್ಟ. ಇವಕ್ಕೆ ಹೆಚ್ಚು ಬಂಡವಾಳವೂ ಬೇಕು. ಸಧ್ಯದಲ್ಲಿ ಮರಡಿಹಳ್ಳಿ ಸೊಸೈಟಿಯವರು ಪ್ರತ್ಯೇಕ ಉಗ್ರಾಣವನ್ನು ಸಿದ್ಧಪಡಿಸಿಲ್ಲ. ಮೆಂಬರುಗಳಿಂದ ಕೊಂಡ ಅರಳೆಯನ್ನು ಅವರವರ ಮನೆಯಲ್ಲಿಯೇ ಇಟ್ಟಿರುತ್ತಾರೆ. ಇದೇ ಪದ್ಧತಿಯನ್ನು ಇತರ ಕಡೆಗಳಲ್ಲಿಯೂ ಅನುಸರಿಸುವುದು ಸಾಧ್ಯವೇ ಎಂಬುದನ್ನು ಪರಿಶೀಲಿಸಬೇಕು.

ಮೂರನೆಯ ಕಷ್ಟವು ಬಂಡವಾಳಕ್ಕೆ ಸಂಬಂಧಪಟ್ಟುದು; ಬೇಸಾಯಗಾರರು ಬಡವರು; ಬೇಸಾಯಮಾಡುವಾಗ ಅವರಿಗೆ ಸಹಾಯಬೇಕು; ಬೇಸಾಯ ಮುಗಿದಮೇಲೆ ಅವರು ಬೆಳೆದ ಪದಾರ್ಥಗಳನ್ನು ಮಾರುವವರೆಗೆ ಆ ಪದಾರ್ಥಗಳ ಆಧಾರದ ಮೇಲೆ ಸಹಾಯ ದೊರೆಯಬೇಕು. ಹೀಗೆ ಅವರಿಗೆ ಮುಂಗಡವಾಗಿ ಸಹಾಯಮಾಡಲು ಬಂಡವಾಳವಿರಬೇಕಾಯಿತು. ಇದು ಒದಗುವುದು ಹೇಗೆ? ಮೈಸೂರು ದೇಶದಲ್ಲಿ ಅಪೆಕ್ಸ್ ಬ್ಯಾಂಕ್ ಎಂಬ ಕೇಂದ್ರಸಹಕಾರ ಸಂಘದವರು ಇತರ ಪರಸ್ಪರ ಸಹಾಯಕ ಸಂಘಗಳಿಗೆ ಸಹಾಯಮಾಡುತ್ತಾರಷ್ಟೆ. ಮರಡಿಹಳ್ಳಿ ಸೊಸೈಟಿಯವರೂ ಅಪೆಕ್ಸ್‌ಬ್ಯಾಂಕಿನಿಂದ ಮುಂಗಡವಾಗಿ ಹಣವನ್ನು ಪಡೆದುಕೊಂಡು

ಮೆಂಬರುಗಳಿಗೆ ಮುಂಗಡವಾಗಿ ಕೊಡುತ್ತಾರೆ. ಈ ಪದ್ಧತಿಯು ಅನುಕರಣೀಯವಾದುದು.

ಇಂತಹ ಸಂಘಗಳು ಚಿಲ್ಲರೆ ವ್ಯಾಪಾರದಲ್ಲಿ ಕೈಹಾಕಬೇಕೆ? ಅಥವಾ ಒಟ್ಟು ವ್ಯಾಪಾರದಲ್ಲಿಯೇ? ಪಾಶ್ಚಾತ್ಯದೇಶಗಳಲ್ಲಿ ಎಲ್ಲೆಲ್ಲಿ ಇಂತಹ ಸಂಘಗಳು ಚಿಲ್ಲರೆ ವ್ಯಾಪಾರವನ್ನು ಪ್ರಾರಂಭಿಸಿದುವೋ ಅಲ್ಲೆಲ್ಲ ಸಂಘಗಳು ನಾಶವಾಗಿವೆ. ತಮ್ಮ ಅಧಿಕಾರವಾಣಿಯಲ್ಲಿ ಹೆನ್ರಿವುಲ್ಫ್ ಎಂಬುವರು "ಇಂತಹ ಸಂಘಗಳು ಒಟ್ಟು ವ್ಯಾಪಾರಮಾಡಬೇಕೇ ವಿನಾ ಡಿಪೋಗಳನ್ನು ಸ್ಥಾಪಿಸಿ ಚಿಲ್ಲರೆ ವ್ಯಾಪಾರ ಮಾಡಬಾರದು; ಚಿಲ್ಲರೆ ವ್ಯಾಪಾರಿಯೇ ಇಂತಹ ಸಂಘಗಳ ಗಿರಾಕಿಯಾಗಿರಬೇಕು,"[20] ಎಂದು ಬರೆಯುವರು.

ಒಟ್ಟಿನಲ್ಲಿ ವ್ಯಾಪಾರಗಾರರೂ, ಬ್ಯಾಂಕರುಗಳೂ, ರೈಲು ಮೋಟಾರು ಮೊದಲಾದ ವಾಹನಗಳನ್ನು ಇಟ್ಟುಕೊಂಡಿರುವವರೂ ಬಲಿಷ್ಠರಾಗಿದಾರೆ; ಸಂಘಗಳನ್ನು ಸ್ಥಾಪಿಸಿಕೊಂಡಿದಾರೆ. ರೈತರೂ ಸಂಘಗಳನ್ನು ಸ್ಥಾಪಿಸಿಕೊಳ್ಳದಿದ್ದರೆ ಅವರು ಪಡುವ ಕಷ್ಟವೆಲ್ಲವೂ ನೀರಿನಲ್ಲಿ ಹೋಮ ಮಾಡಿದಂತೆಯೇ ಸರಿ



# ೮. ವ್ಯವಹಾರಸೌಕರ್ಯ



ರಸ್ತೆಗಳು, ರೈಲುಗಳು, ಮೋಟಾರ್‌ಕಾರ್ ಮುಂತಾದ ವಾಹನಗಳು ಜನರ ಆರ್ಥಿಕಜೀವನದಲ್ಲಿ ಹೆಚ್ಚು ಪರಿಣಾಮವನ್ನುಂಟುಮಾಡಿವೆ ಎಂಬಂಶವನ್ನು ಈಗಾಗಲೇ ಸ್ವಲ್ಪಮಟ್ಟಿಗೆ ವಿಮರ್ಶಿಸಿರುವೆವು. ಹಳ್ಳಿಯ ಜನಜೀವನದಲ್ಲಿ ಒಳ್ಳೆಯ ರಸ್ತೆಗಳು ಹೆಚ್ಚು ಬದಲಾವಣೆಯನ್ನು ತರಬಲ್ಲುವು. ಬೆಳೆದ ಪದಾರ್ಥಗಳನ್ನು ಸುಲಭವಾಗಿಯೂ ಜಾಗ್ರತೆಯಾ

ಗಿಯೂ ಸಂತೆಗಳಿಗೆ ಸಾಗಿಸಿಕೊಂಡು ಹೋಗುವುದಕ್ಕೆ ರೈತರಿಗೆ ತಕ್ಕ ಸಾಧನಗಳಿರಬೇಕು. ಅಂತಹ ಸಾಧನಗಳು ಕಡಮೆಯಾದಂತೆಲ್ಲ ವ್ಯಾಪಾರ ದಲ್ಲಾಗುವ ಹೆಚ್ಚು ವೆಚ್ಚವೂ, ಶ್ರಮವೂ ರೈತರಮೇಲೆಯೇ ಬೀಳುವುವು. ಹಾಗೆಯೇ ಸ್ಥಳದಿಂದ ಸ್ಥಳಕ್ಕೆ ಹೋಗಿಬರುವುದು ಅಥವಾ ಸ್ಥಳದಿಂದ ಸ್ಥಳವೊಡನೆ ವ್ಯವಹಾರ ನಡೆಯಿಸುವುದು ಸುಲಭವಾದಂತೆಲ್ಲ ಪದಾರ್ಥಗಳ ಬೆಲೆಯಲ್ಲಿ ಹೆಚ್ಚು ಏರುಪೇರು ಇರುವುದಿಲ್ಲ. ಅಂತಹ ವ್ಯತಾಸವಿದ್ದರೆ, ಅದರಿಂದ ಬರುವ ಲಾಭವು ರೈತರಿಗೇ ಸೇರುವುದು. ಆದುದರಿಂದಲೇ ಪ್ರಯಾಣಸೌಕರ್ಯವೇ ವ್ಯಾಪಾರಸೌಕರ್ಯದ ತಳಹದಿ ಎಂಬುದಾಗಿ ನಾವು ಹಿಂದೆ ಹೇಳಿದುದು.[1]

ಪಾಶ್ಚಾತ್ಯದೇಶಗಳಲ್ಲಿ ಪ್ರಯಾಣಸೌಕರ್ಯವು ಹೆಚ್ಚುವುದಕ್ಕೂ ಆರ್ಥಿಕಜೀವನದಲ್ಲಿ ಮಹತ್ತಾದ ಬೆಳವಳಿಕೆಯು ಸಾಧ್ಯವಾಗುವುದಕ್ಕೂ ಎಷ್ಟು ಸಂಬಂಧವಿದೆಯೆಂಬುದನ್ನು ಒಬ್ಬ ಅರ್ಥಶಾಸ್ತ್ರಜ್ಞನು ಚೆನ್ನಾಗಿ ವಿಮರ್ಶಿಸಿರುವನು. ಇಂಗ್ಲೆಂಡಿನಲ್ಲಿ ಆರ್ಥಿಕಕ್ರಾಂತಿಯು ಮೊದಲಾದೊಡ ನೆಯೇ ಅಲ್ಲಿಯ ರಸ್ತೆಗಳೂ, ರೈಲುಗಳೂ, ಕಾಲುವೆಗಳೂ ಉತ್ತಮವಾ ದುವು. ಇತರ ಪಾಶ್ಚಾತ್ಯದೇಶಗಳಲ್ಲಿಯೂ ಇದೇ ರೀತಿಯಲ್ಲಿ ಆರ್ಥಿಕ ಬೆಳವಳಿಕೆಯೂ, ವ್ಯವಹಾರಸೌಕರ್ಯಗಳ ಅಭಿವೃದ್ಧಿಯೂ ಜೊತೆಯಲ್ಲಿಯೇ ಮುಂದುಮುಂದಕ್ಕೆ ಸಾಗಿದುವು. ನಮ್ಮ ದೇಶವು ಇನ್ನೂ ಹಿಂದುಳಿದಿರುವು ದಕ್ಕೆ ಒಂದು ಪ್ರಬಲವಾದ ಕಾರಣವು ನಮ್ಮ ವ್ಯವಹಾರಮಾರ್ಗದಲ್ಲಿರುವ ಕುಂದುಕೊರತೆಯೇ.[2]

ವ್ಯವಹಾರಸೌಕರ್ಯದ ಉಪಯೋಗವು ಕೇವಲ ಆರ್ಥಿಕ ಮಾತ್ರ ವಲ್ಲ. ನಮ್ಮ ಜನಜೀವನದ ಎಲ್ಲಾ ಶಾಖೆಗಳಲ್ಲಿಯೂ ಅದು ಪ್ರವಹಿಸು ವುದು. ನಮ್ಮ ಹಳ್ಳಿಯ ರೈತರಿಗೆ ಇತರರ ಸಂಪರ್ಕವು ಬೆಳೆಯುತ್ತ ಬಂದಂತೆಲ್ಲ ಅವರ ಮನೋದೃಷ್ಟಿಯೇ ಬದಲಾಗುವುದರಲ್ಲಿ ಸಂದೇಹವಿಲ್ಲ. ಆರ್ಥಿಕದಾರಿದ್ರ್ಯವು ನಮ್ಮ ರೈತರನ್ನು ತುಳಿಯುತ್ತಿರುವುದು ನಿಜ. ಆದರೆ

ಅದಕ್ಕಿಂತಲೂ ಪ್ರಬಲವಾದ ಜಾಡ್ಯವು ಅವರ ಸಂಕುಚಿತದೃಷ್ಟಿ. ತಮ್ಮ ಸುತ್ತಮುತ್ತ ದಿನದಿನವೂ ಆಗುತ್ತಿರುವ ಬದಲಾವಣೆಗಳನ್ನು ಅವರು ಅರಿಯರು. ಸಾವಿರಾರು ವರ್ಷಗಳ ಸಂಪ್ರದಾಯವನ್ನೇ ಅನುಸರಿಸಬೇಕೆಂಬ ಬುದ್ಧಿಯು ಅವರಲ್ಲಿ ಪ್ರಬಲವಾಗಿರುವುದು. ನೂರಾರು ವರ್ಷಗಳಿಂದಲೂ ಬಡತನ, ಅಜ್ಞಾನ, ಅನಾರೋಗ್ಯ ಮುಂತಾದ ಮಹಾಜಾಡ್ಯಗಳ ಬಲೆಯಲ್ಲಿ ಸಿಲುಕಿ ಹಿಂದುಮುಂದುಕಾಣದೆ, ಯಾವ ವಿಧವಾದ ಉತ್ಸಾಹವೂ ಇಲ್ಲದೆ, ಸಾಯುವ ಮುದುಕರಂತಿರುವ ನಮ್ಮ ಸಮಾಜದಲ್ಲಿ ಹೊಸ ಹುರುಪುಂಟಾಗಬೇಕಾದರೆ ನಮ್ಮ ಹಳ್ಳಿಗಳಿಗೂ, ನಮ್ಮ ಪಟ್ಟಣಗಳಿಗೂ, ಇತರ ಪ್ರಾಂತಗಳಿಗೂ, ಹೊರಪ್ರಪಂಚಕ್ಕೂ ಪರಸ್ಪರ ವ್ಯವಹಾರಸೌಕರ್ಯವು ಬೆಳೆಯಬೇಕು; ರೈತರ ಮನಸ್ಸಿನಲ್ಲಿ ಹೊಸಹುಮ್ಮಸು ಹುಟ್ಟಬೇಕು. ಅಂದು ರೈತರ ಸಂಕುಚಿತಭಾವನೆಯು ತೊಲಗುವುದು; ಜಾತಿವೈಷಮ್ಯವೂ ಮರೆಯಾಗುವುದು. ನಾವೂ ಚೆನ್ನಾಗಿ ಬಾಳಬೇಕೆಂಬ ಆಸೆಯು ಹುಟ್ಟಿದದಿನವೇ ನಮ್ಮ ದೇಶವು ಉದ್ಧಾರವಾಗುವುದರಲ್ಲಿ ಸಂದೇಹವಿಲ್ಲ. ಆದುದರಿಂದ ನಮ್ಮ ದೇಶದಲ್ಲಿ ಇರುವ ವ್ಯವಹಾರಸೌಕರ್ಯವನ್ನು ಉತ್ತಮಪಡಿಸಬೇಕಾದುದು ಆವಶ್ಯಕ.

ಈ ಉಭಯ ದೃಷ್ಟಿಯಿಂದ–ರೈತರ ಆರ್ಥಿಕಜೀವನದ ಮೇಲಿರುವ ಪರಿಣಾಮ ಮತ್ತು ರೈತರ ಮನೋವೈಶಾಲ್ಯದ ಮೇಲಿರುವ ಪರಿಣಾಮ—ನಮ್ಮ ದೇಶದಲ್ಲಿರುವ ವ್ಯವಹಾರ ಸೌಕರ್ಯವನ್ನು ಪರೀಕ್ಷಿಸಿದರೆ ಇತರ ದೇಶಗಳಿಗಿಂತ ನಾವು ಎಷ್ಟು ಹಿಂದುಳಿದಿರುವೆವೆಂಬುದು ವಿದಿತವಾಗುವುದು. ಪ್ರಾಯಃ ನಮ್ಮ ಹಳ್ಳಿಗಳಲ್ಲಿ ಬಹುಮಂದಿ ಸುತ್ತಮುತ್ತ ಇರುವ ಒಂದೆರಡು ಹಳ್ಳಿಗಳಿಗೆ ವಿನಾ ಮತ್ತಾವ ಸ್ಥಳಗಳಿಗೂ ಸಂಚಾರ ಹೋಗಿರಲಾರರು. ಜಾತ್ರೆಗಳು, ದನಗಳ ಪ್ರದರ್ಶನಗಳು, ಸಂತೆಗಳು ಮೈಸೂರು ಪಟ್ಟಣದಲ್ಲಾಗುವ ದಸರಾ ಮತ್ತು ವರ್ಧಂತಿಯ ಉತ್ಸವಗಳು ಮುಂತಾದುವಕ್ಕೆ ಯಾರಾದರೂ ಒಬ್ಬಿಬ್ಬರು ರೈತರು ಒಂದು ಹಳ್ಳಿ

ಯಿಂದ ಹೊರಡಬೇಕಾದರೆ ಅದೇನು ಸಡಗರ, ಅದೆಷ್ಟು ಸಿದ್ಧತೆಗಳು, ಅದೆಷ್ಟು ಯೋಚನೆ! ಪಾಶ್ಚಾತ್ಯದೇಶಗಳಲ್ಲಿ ಬಹುಮಂದಿ ಆಸ್ಟ್ರೇಲಿಯಾ ಮೊದಲಾದ ದೂರದೇಶಗಳಿಗೆ ಹೋಗಬೇಕಾದರೂ ಅಷ್ಟು ಸಿದ್ಧತೆಗಳನ್ನು ಮಾಡಲಾರರು ; ಅಲ್ಲಿಯ ಜನರಿಗೆ ಸಂಚಾರವೆಂಬುದು ದಿನಚರಿಯ ಆಟ ಪಾಟದ ಒಂದು ಭಾಗವಾಗಿರುವುದು. ನಮ್ಮ ಹಳ್ಳಿಗಳಲ್ಲಿ ಎಷ್ಟು ಮಂದಿ ಹೊರಗೆ ಸಂಚಾರಮಾಡಿರುವರು ಎಂಬ ಲೆಕ್ಕವನ್ನು ತಯಾರಿಸಿ ಇತರ ಜನರು ಮಾಡುತ್ತಿರುವ ಸಂಚಾರದೊಡನೆ ಹೋಲಿಸಿದ್ದರೆ ಬಹಳ ಪ್ರಯೋಜನಕಾರಿಯಾಗುತ್ತಿದ್ದಿತು. ಅಂತಹ ಲೆಕ್ಕಗಳನ್ನು ಯಾರೂ ತಯಾರಿಸಿಲ್ಲವಾದುದರಿಂದ ಬೇರೆ ವಿಧದಲ್ಲಿ ಇಂತಹ ಹೋಲಿಕೆಯನ್ನು ಮಾಡಬೇಕಾಗಿರುವುದು. ಪಾಶ್ಚಾತ್ಯದೇಶಗಳಲ್ಲಾಗಲೀ, ನಮ್ಮ ದೇಶ ದಲ್ಲಿಯೇ ಆಗಲಿ, ದೂರ ಸಂಚಾರವೆಂದರೆ ಸಾಮಾನ್ಯವಾಗಿ ರೈಲುಗಳ ಮೂಲಕವೇ. ಪ್ರತಿ ದೇಶದಲ್ಲಿಯೂ ರೈಲುಗಳ ಮೂಲಕ ಸಂಚಾರ ಮಾಡುವವರ ಸಂಖ್ಯೆಯು ನಮಗೆ ಸಿಕ್ಕುವುದು. ಆಯಾ ದೇಶಗಳ ಜನಸಂಖ್ಯೆ, ವಿಸ್ತಾರ ಮೊದಲಾದುವುಗಳನ್ನು ನಾವು ಮನದಲ್ಲಿಟ್ಟುಕೊಂಡು ರೈಲಿನ ಮೂಲಕ ಸಂಚಾರಮಾಡಿದವರ ಸಂಖ್ಯೆಯನ್ನು ಹೋಲಿಸಿನೋಡಿ ದರೆ, ಯಾವ ದೇಶದ ಜನಗಳು ಸಂಚಾರದಲ್ಲಿ ಹೆಚ್ಚು ಆಸಕ್ತರಾಗಿರುವ ರೆಂಬುದು ಮನದಟ್ಟುವುದು. ಈ ಹೋಲಿಕೆಯನ್ನು ತೋರಿಸುವ ಕೆಲವು ಅಂಕಿಗಳನ್ನು ಕೆಳಗೆ ಕೊಡಲಾಗಿದೆ.[3]

| ದೇಶ | | ವರ್ಷ | ರೈಲು ಪ್ರಯಾಣಿಕರ ಸಂಖ್ಯೆ |
|---|---|---|---|
| ಅಮೆರಿಕದ ಸಂಯುಕ್ತರಾಷ್ಟ್ರ | | 1932 | 79,84,76,000 |
| ಗ್ರೇಟ್‌ಬ್ರಿಟನ್ ಮತ್ತು ಉತ್ತರ ಐರ್ಲೆಂಡ್ | | ,, | 121,70,00,000 |
| ಜರ್ಮನಿ | .... | ,, | 130,50,00,000 |
| ಜಪಾನ್ | .... | ,, | 120,81,31,292 |
| ಇಂಡಿಯಾ | .... | 1929 30 | 63,40,00,000 |
| ಮೈಸೂರು | .... | 1933-34 | 51,44,000 |

ಮೇಲೆ ಕೊಟ್ಟಿರುವ ರಾಷ್ಟ್ರಗಳಲ್ಲಿ ರೈಲಿನ ಮೇಲೆ ಸಂಚಾರಮಾಡಿರುವವರು ನಮ್ಮ ದೇಶದಲ್ಲಿಯೇ ಬಹುಕಡಿಮೆಯೆಂಬುದು ಅಂಕಿಗಳಿಂದ ವ್ಯಕ್ತವಾಗುವುದಷ್ಟೆ; ಸಂಚಾರಮಾಡಿರುವವರೂ ಕೂಡ ಬಹುದೂರ ಸಂಚಾರಮಾಡಿರುವವರಲ್ಲ. ನಮ್ಮ ದೇಶದಲ್ಲಿ ರೈಲಿನ ಮೇಲೆ ಸಂಚಾರ ಮಾಡಿರುವವರು ಸರಾಸರಿ ಎಷ್ಟು ಮೈಲಿಗಳ ದೂರ ಸಂಚಾರಮಾಡಿರುವ ರೆಂಬುದು ಕೆಳಗಿನ ಅಂಕಿಗಳಿಂದ ತಿಳಿಯುವುದು.[4]

| ತರಗತಿ | ಸರಾಸರಿ ಮೈಲಿಗಳು (1933-34) |
|---|---|
| I | 192.0 |
| II | 61.7 |
| Inter | 48.1 |
| III | 34.3 |
| ಒಟ್ಟು ಸರಾಸರಿ | 35.0 |

ರೈಲಿನಲ್ಲಿ ಸಂಚಾರಮಾಡುವ ಹಳ್ಳಿಯವರೆಲ್ಲರೂ 3 ನೇ ತರಗತಿಯ ಪ್ರಯಾಣಿಕರೇ ಎಂದು ದೃಢವಾಗಿ ಹೇಳಬಹುದು; ಆದರೆ 3 ನೇ ತರಗತಿಯವರೆಲ್ಲರೂ ಹಳ್ಳಿಯವರೇ ಎಂದು ಹೇಳಲಾಗುವುದಿಲ್ಲ. ಬರಿಯ ಹಳ್ಳಿಯ ಪ್ರಯಾಣಿಕರ ಸಂಖ್ಯೆಯೇ ಪ್ರತ್ಯೇಕವಾಗಿ ದೊರಕಿದ್ದರೆ ಮೇಲಿನ ಸರಾಸರಿ 34.3 ಕ್ಕೆ ಬದಲಾಗಿ ಅದು ಇನ್ನೂ ಕಡಿಮೆಯಾಗುತ್ತಿದ್ದಿತೆಂಬುದಕ್ಕೆ ಸಂದೇಹವೇ ಇಲ್ಲ. ಅಂದರೆ ರೈಲಿನಲ್ಲಿ ಸಂಚಾರಮಾಡಿರುವ ನಮ್ಮ ಹಳ್ಳಿಯವರು ಬಹು ಕೊಂಚ ಮಂದಿಯೆಂದೂ ಅವರೂ ಸಹ ಹೆಚ್ಚು ದೂರ ಸಂಚಾರಮಾಡಿಲ್ಲವೆಂದೂ ತೀರ್ಮಾನವಾಗುವುದು.

ಪ್ರಾಚೀನಕಾಲದಿಂದಲೂ ನಮ್ಮ ಹಳ್ಳಿಯವರಿಗೆ ಇತರರ ಸಂಪರ್ಕವು ವಿಶೇಷವಾಗಿ ಲಭಿಸುತ್ತಿರಲಿಲ್ಲ. ತತ್ಫಲವಾಗಿಯೇ ಪ್ರತಿಹಳ್ಳಿಯೂ ತನಗೆ ಬೇಕಾದ ಎಲ್ಲಾ ಪದಾರ್ಥಗಳನ್ನೂ ತಾನೇ ಬೆಳೆದುಕೊಂಡು ಇತರ ಜನಸಮುದಾಯದ ಹವ್ಯಾಸವೇ ಇಲ್ಲದಂತೆ ಸ್ವತಂತ್ರವಾಗಿ ಜೀವನ ಮಾಡುತ್ತಿದ್ದುದು. ಆದರೆ ಆರ್ಥಿಕಜೀವನದ ಬೆಳವಣಿಗೆಗೆ ಸ್ವಾತಂತ್ರ್ಯ

ಕ್ಕಿಂತಲೂ ಸಹಕಾರವೇ ಅತ್ಯಾವಶ್ಯಕ. ಜನಸಮುದಾಯಗಳು ಪರಸ್ಪರ ಸಹಾಯಕರಾಗಿ, ಯಾರುಯಾರು ಯಾವಯಾವ ಕೆಲಸವನ್ನು ಅತ್ಯುತ್ತಮವಾಗಿ ಮಾಡಬಲ್ಲರೋ ಅವರವರು ಆಯಾ ಕೆಲಸಗಳನ್ನು ಮಾಡಬೇಕಾದುದು ಧರ್ಮ ಮತ್ತು ಇಡೀ ಜನಾಂಗಗಳಿಗೇ ಲಾಭಕರ. ಇಂತಹ ಕಾರ್ಯವಿಭಜನೆಯು (Division of labour) ಹೆಚ್ಚಬೇಕಾದರೆ ಪ್ರಯಾಣಸೌಕರ್ಯಗಳು ಬೆಳೆಯಲೇ ಬೇಕೆಂಬುದನ್ನು ವಾದಿಸಬೇಕಾಗಿಲ್ಲ. ಇದಲ್ಲದೆ ಜನಾಂಗಗಳು ಪರಸ್ಪರ ಮಿಳಿತರಾಗದಿದ್ದರೆ ಪ್ರತಿಯೊಂದು ಜನಾಂಗವೂ ತಾನುಮಾಡಿದುದೇ ಸರಿಯೆಂಬ ಭಾವನೆಯನ್ನು ಹೊಂದುವುದು; ಇದರಿಂದ ವಿಶ್ವಸೌಹಾರ್ದವು ಅಸಾಧ್ಯವಾಗುವುದು ; ಸಂಕುಚಿತಭಾವನೆಯೇ ಆಧಿಪತ್ಯವನ್ನು ವಹಿಸುವುದು. ಇತರರ ಅನುಭವದ ಫಲವನ್ನು ಎಲ್ಲರೂ ಸ್ವೀಕರಿಸುವುದಿಲ್ಲ. ಇತರರು ಉತ್ತಮವಾಗಿ ಬದುಕುತ್ತಿದ್ದರೆ ನಾವೂ ಅವರಂತೆಯೇ ನಮ್ಮ ಜೀವನದ ಅಂತಸ್ತನ್ನು ಮೇಲ್ಪಡಿಸಬೇಕೆಂಬ ಆಸೆಯು ನಮ್ಮ ಮನಸ್ಸಿನಲ್ಲಿ ಹುಟ್ಟುವುದಿಲ್ಲ. ನಮ್ಮ ಹಳ್ಳಿಗಳು ಉದ್ಧಾರವಾಗಬೇಕಾದರೆ ಇಂತಹ ಆಸೆಯು ನಿದ್ರೆಮಾಡುತ್ತಿರುವ ರೈತರನ್ನು ಎಚ್ಚರಗೊಳಿಸಬೇಕು.

ಬ್ರಿಟಿಷರ ಆಳ್ವಿಕೆಯಿಂದ ನಮಗೆ ಬೇರೆ ವಿಧವಾಗಿ ಪ್ರಯೋಜನವಿರಲಿ; ಇಲ್ಲದಿರಲಿ; ವ್ಯವಹಾರಸೌಕರ್ಯದಲ್ಲಿ ಮಾತ್ರ ಎಷ್ಟೋ ಅನುಕೂಲಗಳು ಆಗುತ್ತಿವೆ. ಬಹು ಪುರಾತನಕಾಲದಿಂದಲೂ ನಮ್ಮ ರಾಜರು ರಸ್ತೆಗಳನ್ನು ಮಾಡಿಸುವುದು, ಸಾಲುಮರಗಳನ್ನು ನೆಡಿಸುವುದು, ಛತ್ರಗಳನ್ನು ಕಟ್ಟಿಸುವುದು ಮೊದಲಾದ ಸೌಕರ್ಯಗಳನ್ನು ಕಲ್ಪಿಸುತ್ತಿದ್ದರು. ಆದರೂ ರಸ್ತೆಯನ್ನು ಮಾಡುವವಿಧಾನವು ಈಗಿನಷ್ಟು ಬೆಳೆಯದಿದ್ದುದರಿಂದಲೂ ಮತ್ತು ಸರ್ಕಾರದ ಬಿಗಿಯು ವಿಶಾಲಭಾರತದ ಎಲ್ಲಾ ಭಾಗಗಳಲ್ಲಿಯೂ ಒಂದೇ ಸಮನಾಗಿಲ್ಲದಿದ್ದುದರಿಂದಲೂ ಪ್ರಯಾಣಿಕರಿಗೆ ಬಹಳ ತೊಂದರೆಯಾಗುತ್ತಿದ್ದಿತು. ಇದೂ ಅಲ್ಲದೆ ದೇಶಕ್ಕೆಲ್ಲ ಸಾಮಾನ್ಯವಾದ ಒಂದು

ರಾಷ್ಟ್ರಭಾಷೆಯು ಪ್ರಚಾರದಲ್ಲಿಲ್ಲದೆ ಇದ್ದುದರಿಂದಲೂ ಜನಗಳು ಒಂದು ಪ್ರಾಂತದಿಂದ ಇನ್ನೊಂದು ಪ್ರಾಂತಕ್ಕೆ ಸಂಚಾರಮಾಡುವುದು ಕಷ್ಟವಾಗುತ್ತಿತ್ತು ; ಅನಿರ್ವಾಹಪಕ್ಷದಲ್ಲಿ ಮಾತ್ರ ಅಂತಹ ಪ್ರಯಾಣಕಾರ್ಯವನ್ನು ಕೈಗೊಳ್ಳುತ್ತಿದ್ದರು.

ಕಳೆದ ಒಂದು ಶತಮಾನದಿಂದೀಚೆಗೆ ನಮ್ಮ ವ್ಯವಹಾರಮಾರ್ಗದಲ್ಲಿ ಒಂದು ಅದ್ಭುತ ಕ್ರಾಂತಿಯೇ ಆಗಿದೆಯೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ರಸ್ತೆಗಳೊಂದುಕಡೆ, ರೈಲುಗಳೊಂದುಕಡೆ, ಮೋಟಾರುಗಳೊಂದುಕಡೆ, ವಿಮಾನಗಳೊಂದುಕಡೆ ; ಇವುಗಳ ಸಹಾಯದಿಂದ ಸಾವಿರಾರು ಮೈಲಿಗಳನ್ನೂ ನಿರಾಯಾಸವಾಗಿ ಪ್ರಯಾಣಮಾಡಬಹುದು. ಪೋಸ್ಟು, ಟೆಲಿಗ್ರಾಫ್, ರೇಡಿಯೋ ಮತ್ತು ವೃತ್ತಪತ್ರಿಕೆಗಳ ಮೂಲಕ ನಮ್ಮ ದೇಶವೊಂದಲ್ಲದೆ ಇಡೀ ಪ್ರಪಂಚದಲ್ಲಿ ನಡೆಯುತ್ತಿರುವ ಎಲ್ಲ ವಿಷಯಗಳನ್ನೂ ನಾವು ಬೇಗ ತಿಳಿಯಬಹುದು. ಇಂಗ್ಲಿಷ್ ಅಥವಾ ಹಿಂದಿಯು ರಾಷ್ಟ್ರಭಾಷೆಯಾಗುತ್ತಿರುವುದರಿಂದಲೂ, ಪರಸ್ಪರ ವ್ಯವಹಾರವು ಹೆಚ್ಚುತ್ತಿದೆ. ಆದರೂ ಇತರ ದೇಶಗಳಿಗಿಂತ ನಾವು ಬಹು ಹಿಂದೆ ಬಿದ್ದಿರುವೆವು.

ಇಂಗ್ಲೆಂಡಿನಲ್ಲಿ ಆರ್ಥಿಕಕ್ರಾಂತಿಯು ಪ್ರಾರಂಭವಾದೊಡನೆಯೇ ಅಲ್ಲಿಯ ನದಿಗಳನ್ನೂ ಕಾಲುವೆಗಳನ್ನೂ ಆಳಮಾಡಿ ಯಾನಕ್ಕೆ ಯೋಗ್ಯವಾಗುವಂತೆ ಮಾಡಿದರು. ಜರ್ಮನಿ, ಫ್ರಾನ್ಸ್ ಮೊದಲಾದ ದೇಶಗಳಲ್ಲಿಯೂ ಸಂಚಾರಾರ್ಹವಾದ ಕಾಲುವೆಗಳು ಹೇರಳವಾಗಿವೆ. ಇಂದು ಇಂತಹ ಕಾಲುವೆಗಳು ಇಂಗ್ಲೆಂಡಿನಲ್ಲಿ 4673 ಮೈಲಿಗಳೂ, ಜರ್ಮನಿಯಲ್ಲಿ 4665 ಮೈಲಿಗಳೂ, ಫ್ರಾನ್ಸಿನಲ್ಲಿ 6088 ಮೈಲಿಗಳೂ ಉದ್ದವಾಗಿವೆ. ನಮ್ಮ ದೇಶದ ನದಿಗಳು ಸ್ವಾಭಾವಿಕವಾಗಿ ಯಾನಕ್ಕೆ ಅರ್ಹವಾದುವಲ್ಲ. ಪ್ರಾಯಃ ಉತ್ತರ ಇಂಡಿಯದ ಕೆಲವು ಭಾಗಗಳಲ್ಲಿ ಮಾತ್ರ ನದಿಗಳು ಈ ಬಗೆಯಲ್ಲಿ ಉಪಯೋಗಕ್ಕೆ ಬರುವುವು. ದಕ್ಷಿಣ ಇಂಡಿಯದಲ್ಲಿ ಇಂತಹ

ನದಿಗಳಿಲ್ಲ. ಪೂರ್ವಕಾಲದಲ್ಲಿ ಗಂಗಾನದಿಯಲ್ಲಿ ದೋಣಿಗಳ ಸಂಚಾರವು ಬಲವಾಗಿದ್ದಿತು. ಆದರೆ ಅಲ್ಲಿಯೂ ಕೂಡ ರೈಲುಗಳ ಮತ್ತು ಮೋಟಾರುಗಳ ಪೈಪೋಟಿಯಿಂದ ದೋಣಿಗಳು ಮೂಲೆಯು ಪಾಲಾಗುತ್ತಿವೆ. ಒಟ್ಟಿನಲ್ಲಿ ನಮ್ಮ ದೇಶದಲ್ಲಿ ನೀರಿನ ಮಾರ್ಗಗಳು ಇಲ್ಲವೇ ಇಲ್ಲವೆನ್ನಬಹುದು. ನಾವು ಹಿಂದುಳಿದಿರುವುದಕ್ಕೆ ಇದೊಂದು ಪ್ರಬಲವಾದಕಾರಣ.[5]

ಈ ಮೊದಲೇ ಹೇಳಿರುವಂತೆ ಬ್ರಿಟಿಷರ ಆಳ್ವಿಕೆಯಲ್ಲಿ ರೈಲು ಮಾರ್ಗಗಳು ಬೆಳೆಯುತ್ತಿವೆ. ಸಾಮಾನ್ಯವಾಗಿ ನಮ್ಮ ದೇಶದ ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ ಸಾವಿರಾರು ಮೈಲಿಗಳ ದೂರ ರೈಲಿನಲ್ಲಿ ಪ್ರಯಾಣಬೆಳೆಯಿಸಬಹುದು; ಸಾಮಾನುಗಳನ್ನು ಸಾಗಿಸಬಹುದು. ರೈಲು ಮಾರ್ಗಗಳೇ ನಮ್ಮ ದೇಶದ ಕ್ಷಾಮನಿವಾರಣೆಗೆ ಮುಖ್ಯಸಾಧನಗಳಾಗಿವೆ. ಆದರೆ ಈ ವಿಷಯದಲ್ಲಿಯೂ ಕೂಡ ನಾವು ಎಷ್ಟು ಹಿಂದುಳಿದಿರುವೆವೆಂಬುದನ್ನು ನೋಡಿರಿ. ಕೆಲವು ದೇಶಗಳ ಜನಸಂಖ್ಯೆಯನ್ನೂ ರೈಲುದಾರಿಯನ್ನೂ ತೋರಿಸುವ ಪಟ್ಟಿ[6] —

| ದೇಶ | ಜನಸಂಖ್ಯೆ | ರೈಲುದಾರಿ | |
|---|---|---|---|
| ಇಂಡಿಯ | 353,000,000 (1931) | 42953·34 | ಮೈಲಿಗಳು |
| ಅಮೆರಿಕದ ಸಂಯುಕ್ತರಾಷ್ಟ್ರ | 12,27,75,046 (1930) | 42953·34 (1932) | ,, |
| ಯುನೈಟೆಡ್ ಕಿಂಗ್‌ಡಮ್ | 4,49,37,444 (1931) | 20383 (1932) | ,, |
| ಜರ್ಮನಿ | 6,59,13,082 (1933) | 36281 (1932) | ,, |
| ಜಪಾನ್ | 6,44,50,005 ('930) | 13725 | ,, |
| ಫ್ರಾನ್ಸ್ | 4,18,34,922 (1931) | 26113 (1932) | ,, |
| ಕನಡ | 1,03,786 (1931) | 57061 (1932) | ,, |

ಅಮೆರಿಕದ ಸಂಯುಕ್ತರಾಷ್ಟ್ರದಲ್ಲಿ 12 ಕೋಟಿ ಜನಗಳಿಗೆ 260438 ಮೈಲಿಯ ರೈಲುಮಾರ್ಗಗಳಿವೆ. ನಮ್ಮ ದೇಶದಲ್ಲಿ 35 ಕೋಟಿ ಜನಗಳಿಗೆ 42953·34 ಮೈಲಿಗಳಷ್ಟು ಮಾತ್ರ ರೈಲುದಾರಿಯಿದೆ. ಕನಡ ದೇಶದಲ್ಲಿ ಇರುವ 1 ಕೋಟಿ ಜನಗಳಿಗೆ 57061 ಮೈಲಿಗಳಷ್ಟು ರೈಲುದಾರಿಯಿದೆ. ಅಂದರೆ ಪಾಶ್ಚಾತ್ಯ ದೇಶಗಳಷ್ಟೇ ರೈಲುಮಾರ್ಗಗಳ ಬೆಳವಣಿಗೆಯು ನಮ್ಮಲ್ಲಿ ಬರಬೇಕಾದರೆ ಇನ್ನೂ ಎಷ್ಟು ಸಾವಿರ ಮೈಲಿಗಳಷ್ಟು ರೈಲುಗಳಾಗಬೇಕೆಂಬುದನ್ನು ನೋಡಿರಿ.

ಇದಲ್ಲದೆ ನಮ್ಮ ರೈಲುಗಳಿಂದ ನಗರಗಳಿಗೆ ಹೆಚ್ಚು ಸೌಕರ್ಯವೇ ವಿನಾ ಹಳ್ಳಿಗಳಿಗಲ್ಲ. ಏಕೆಂದರೆ ನಮ್ಮ ರೈಲುಗಳೆಲ್ಲವೂ ದೊಡ್ಡ ದೊಡ್ಡ ನಗರಗಳನ್ನು ಹಾದುಹೋಗುವುವೇ ವಿನಾ ಹಳ್ಳಿಗಳ ಕಡೆಗೆ ಹೋಗುವುದಿಲ್ಲ. ಅಲ್ಲದೆ ಇರುವ ರೈಲುಗಳೂ ಕೂಡ ಒಂದೊಂದು ಸ್ಥಳದಲ್ಲಿ ಒಂದೊಂದು ಅಳತೆಯುವಾಗಿರುವುವು. ಆದುದರಿಂದ ಅನೇಕ ಸ್ಥಳಗಳಲ್ಲಿ ರೈಲುಗಳನ್ನು ಬದಲಾಯಿಸಬೇಕಾಗುವುದು.[7]

ಪಾಶ್ಚಾತ್ಯ ದೇಶಗಳಲ್ಲಿ ಈಚೆಗೆ ರೈಲುಗಳಿಗಿಂತಲೂ ಮೋಟಾರು ಮುಂತಾದ ವಾಹನಗಳು ಹೆಚ್ಚು ಬಳಕೆಗೆ ಬರುತ್ತಿವೆ. ಅಲ್ಲಿಯ ಹಳ್ಳಿಗಳಿಗೂ ನಗರಗಳಿಗೂ ಸಂಬಂಧವನ್ನು ಕಲ್ಪಿಸಿ ಹಳ್ಳಿಗಳ ನಾಗರಿಕತೆಯನ್ನು ಉತ್ತಮಗೊಳಿಸುವ ಮುಖ್ಯಸಾಧನವು ಈ ಮೋಟಾರು ವಾಹನಗಳು. ಇವುಗಳು ಪ್ರಚಾರಕ್ಕೆ ಬಂದಮೇಲೆ ನಾಗರೀಕರು ಕೂಡ ಹಳ್ಳಿಗಳಲ್ಲಿ ವಾಸಮಾಡಲು ಹಿಂದೆಗೆಯುತ್ತಾ ಇಲ್ಲ. ನಮ್ಮ ದೇಶದಲ್ಲಿ ಮೋಟಾರು ಬಸ್ಸುಗಳು ಬಂದು ಮಹಾಕ್ರಾಂತಿಯನ್ನು ತರುತ್ತಿವೆ. ಈಗಾಗಲೇ ರಸ್ತೆಗಳಿರುವೆಡೆಯಲ್ಲೆಲ್ಲ ಎತ್ತಿನ ಬಂಡಿಗಳು ಮಾಯವಾಗಿ ಮೋಟಾರು ಸಂಚಾರವೇ ಪ್ರಬಲವಾಗುತ್ತಿದೆ. ಆದರೆ ಇದರಲ್ಲಿಯೂ ನಾವು ಎಷ್ಟು ಹಿಂದು ಬಿದ್ದಿರುವೆವೆಂಬುದು ಕೆಳಗಿನ ಅಂಕಿಗಳಿಂದ ಸ್ಪಷ್ಟವಾಗುವುದು.[8]

| | | |
|---|---|---|
| ಪ್ರಪಂಚದಲ್ಲಿರುವ ಒಟ್ಟು ಮೋಟಾರುಗಳು | | 390 ಲಕ್ಷ (1930) |
| ಸಂಯುಕ್ತರಾಷ್ಟ್ರ | .... | 268 ,, |
| ಇಂಗ್ಲೆಂಡ್ | .... | 23 ,, |
| ಇಂಡಿಯ | .... | 2 ,, |

ಅಮೆರಿಕ ದೇಶದಲ್ಲಿ 5 ಜನಗಳಿಗೆ ಒಂದರಂತೆ ಮೋಟಾರುಕಾರುಗಳನ್ನು ಇಟ್ಟಿರುವರು. ಆದರೂ ಅಲ್ಲಿಯ ಹಳ್ಳಿಗಳಲ್ಲಿ ಇಂತಹ ವಾಹನಗಳು ಬಹಳ ಕಡಿಮೆಯೆಂದು ಹೇಳುತ್ತಾ ನ್ಯಾಷನಲ್ ಛೈಲ್ಡ್ ಲೇಬರ್ ಕಮಿಟಿ ಎಂಬ ಸಮಿತಿಯು ಈ ಕೆಳಗಿನ ಅಂಕಿಗಳನ್ನು ಕೊಡುವುದು. ಆ ಸಮಿತಿಯು ವಿಮರ್ಶಿಸಿದ ಹಳ್ಳಿಗಳಲ್ಲಿ ಸ್ವಂತ ಹಿಡುವಳಿದಾರರಲ್ಲಿ ಶೇಕಡ 23 ಮಂದಿಯೂ, ಹಿಡುವಳಿದಾರರಲ್ಲದ ರೈತರಲ್ಲಿ ಶೇಕಡ 16 ಮಂದಿಯೂ, ಬರಿಯ ಕೂಲಿಗಾರರಲ್ಲಿ ಶೇಕಡ 23 ಮಂದಿಯೂ ಮೋಟಾರುಕಾರುಗಳನ್ನು ಪಡೆದಿರುವರಂತೆ.[9] ಇದು ಅಮೆರಿಕದ ಹಿಂದುಳಿದಿರುವ ರೈತರ ಸ್ಥಿತಿ! ಈ ಚಿತ್ರವನ್ನು ನಮ್ಮ ಹಳ್ಳಿಗಳೊಡನೆ, ಏಕೆ, ನಮ್ಮ ನಗರಗಳೊಡನೆ ಹೋಲಿಸಿನೋಡಿದರೆ, ನಮ್ಮ ಸ್ಥಿತಿಯು ವಿದಿತವಾಗುವುದಲ್ಲವೆ!

ವಿಮಾನಗಳ ಲೆಕ್ಕವೂ ಇದೇ ಬಗೆಯಲ್ಲಿರುವುದು. ಈ ವಿಮಾನಗಳು ಹೆಚ್ಚಾಗಿ ಬಳಕೆಗೆ ಬಂದುದು ಕಳೆದ ಯುದ್ಧವಾದಂದಿನಿಂದೀಚೆಗೆ. ಪಾಶ್ಚಾತ್ಯದೇಶಗಳು ವಿಮಾನಗಳ ಪೈಪೋಟಿಯಲ್ಲಿ ಬಹಳ ಆತುರದಿಂದ ಮುಂದೆ ನುಗ್ಗುತ್ತಿವೆ. ನಮ್ಮ ದೇಶದಲ್ಲಿಯೂ ಕೆಲವು ದೊಡ್ಡ ದೊಡ್ಡ ನಗರಗಳನ್ನು ವಿಮಾನಗಳು ಸಂಬಂಧಿಸುತ್ತಿರುವುವು. ಆದರೆ ಇನ್ನೂ ಅವುಗಳ ಬೆಳವಣಿಗೆ ಸಾಲದು.

ರೈಲುಗಳೂ, ಮೋಟಾರುಗಳೂ, ವಿಮಾನಗಳೂ ಹೆಚ್ಚುಹೆಚ್ಚಾಗಿ ಬಳಕೆಗೆ ಬರುವುದು ಅಗತ್ಯ. ಆದರೆ ಇನ್ನೂ ಅನೇಕ ವರ್ಷಗಳವರೆಗೆ ನಮ್ಮ ರೈತರ ಮುಖ್ಯವಾಹನವು ಎತ್ತಿನ ಬಂಡಿಯೇ ಎಂಬುದನ್ನು ನಾವು ಮರೆಯಲಾಗದು. ಆದುದರಿಂದ ನಮ್ಮ ಪ್ರಯಾಣಸೌಕರ್ಯದಲ್ಲಿ ರಸ್ತೆಗಳಿ

ಗಿರುವ ಪ್ರಾಶಸ್ತ್ಯವು ಇನ್ನಾವುದಕ್ಕೂ ಬಾರದು. ರಸ್ತೆಗಳು ಬೆಳೆದು ಉತ್ತಮವಾದಷ್ಟೂ ನಮ್ಮ ದೇಶಕ್ಕೆ ಮೇಲ್ಮೆಯುಂಟು. ಹೀಗೆ ರಸ್ತೆಗಳು ಬೆಳೆಯುವುದಕ್ಕೆ ಎಷ್ಟೋ ಅವಕಾಶವಿದೆಯೆಂಬುದನ್ನು ಕೆಳಗಿನ ಅಂಕಿಗಳಿಂದ ನಾವು ನೋಡಬಹುದು.

**ಕೆಲವು ದೇಶಗಳಲ್ಲಿರುವ ರಸ್ತೆಗಳ ಉದ್ದವನ್ನು ತೋರಿಸುವ ಪಟ್ಟಿ**[10]

| ದೇಶ | ರಸ್ತೆ (ಮೈಲಿಗಳು.) |
|---|---|
| ಸಂಯುಕ್ತರಾಷ್ಟ್ರ | 30,0,9066 |
| ಇಂಗ್ಲೆಂಡ್ ಮತ್ತು ವೇಲ್ಸ್ | 1,76,791 |
| ಜರ್ಮಾ | 5,91,228 |
| ಫ್ರಾನ್ಸ್ | 3,91,491 |
| ಇಂಡಿಯಾ | 2,53,125 |

ನಮ್ಮ ದೇಶದ ಜನಸಂಖ್ಯೆ, ವಿಸ್ತಾರ, ಇವುಗಳಿಗನುಗುಣವಾಗಿ ಇಂಗ್ಲೆಂಡಿನೊಡನೆ ಸರಿದೂಗುವಷ್ಟು ರಸ್ತೆಗಳಿರಬೇಕಾದರೆ ಒಟ್ಟು 30 ಲಕ್ಷ ಮೈಲಿಗಳಷ್ಟು ರಸ್ತೆಗಳಾಗಬೇಕು. ಈಗಿರುವುದು ಅದರಲ್ಲಿ ಶೇಕಡ ಎರಡರಷ್ಟು ಮಾತ್ರ.[11]

ಮೈಸೂರು ದೇಶದ ರಸ್ತೆಗಳನ್ನು ಮೂರು ಪಂಗಡಗಳಾಗಿ ವಿಂಗಡಿಸಿರುವರು—(1) ಸ್ಟೇಟ್‌ಫಂಡುರಸ್ತೆಗಳು. (2) ಡಿಸ್ಟ್ರಿಕ್ಟ್‌ಬೋರ್ಡು ರಸ್ತೆಗಳು. (3) ಹಳ್ಳಿಯ ರಸ್ತೆಗಳು. ಇವುಗಳಲ್ಲಿ 2061 ಮೈಲಿಗಳ ಮೊದಲನೆಯ ತರಗತಿಯ ರಸ್ತೆಗಳೂ, 3567 ಮೈಲಿಗಳ ಎರಡನೆಯ ತರಗತಿಯ ರಸ್ತೆಗಳೂ ಸೇರಿವೆ. ಮೊದಲನೆಯ ತರಗತಿಯ ರಸ್ತೆಗಳೂ ಮತ್ತು ಎರಡನೆಯ ತರಗತಿಯ ರಸ್ತೆಗಳಲ್ಲಿ 1754 ಮೈಲಿಗಳೂ ಪಕ್ಕಾರಸ್ತೆಗಳು; ಉಳಿದುವು ಕಚ್ಚಾರಸ್ತೆಗಳು.[12] ಮೂರನೆಯ ತರಗತಿಯ ರಸ್ತೆಗಳ ಅಂಕಿಗಳು ದೊರೆತಿಲ್ಲ. ಏಕೆಂದರೆ ಅಂತಹ ರಸ್ತೆಗಳು ಇಲ್ಲವೇ ಇಲ್ಲವೆನ್ನಬಹುದು. ಸಾಮಾನ್ಯವಾಗಿ ಬಂಡಿಗಳು ತಿರುಗಾಡಿರುವ ಜಾಡುಗಳನ್ನೇ

ರಸ್ತೆಗಳೆಂದು ಕರೆಯಬೇಕಾಗಿವೆ. ನಮ್ಮ ರೈತರಿಗೆ ಇಂತಹ ರಸ್ತೆಗಳಿಂದ ಎಷ್ಟು ತೊಂದರೆಯಾಗುತ್ತಿದೆಯೆಂಬುದನ್ನು ವರ್ಣಿಸಲಾಗುವುದಿಲ್ಲ. ಎತ್ತಿನ ಬಂಡಿಗಳಲ್ಲಿ ಹಳ್ಳಿಯಿಂದ ಹಳ್ಳಿಗೆ ತಿರುಗಿದರೇ ಇದು ನಮಗೆ ವಿದಿತವಾಗುವುದು. ಈ ರಸ್ತೆಗಳ ಮೇಲ್ವಿಚಾರಣೆಯು ಗ್ರಾಮಪಂಚಾಯಿತಿಗೆ ಸೇರಿದುದು. ಉತ್ಸಾಹಶಾಲಿಯೂ, ನಿಸ್ಪೃಹನೂ ಆದ ನಾಯಕನೊಬ್ಬನು ಸಿಕ್ಕಿದರೆ ಪಂಚಾಯಿತಿಗಳು ರಸ್ತೆಗಳನ್ನು ಹಾಕಿಸಿಯಾವು. ಪ್ರತಿ ಹಳ್ಳಿಯಲ್ಲಿಯೂ ಅಂತಹ ನಾಯಕರು ಎಂದಿಗೆ ದೊರಕುವರೋ ದೇವರೇ ಬಲ್ಲ! ನಮ್ಮ ರೈತರಿಗೆ ವ್ಯಾಪಾರಮಾರ್ಗದಲ್ಲಿರುವ ಅಡಚಣೆಗಳನ್ನು ಪರಿಹರಿಸಬೇಕಾದರೆ ಮತ್ತು ಇತರರ ಸಂಪರ್ಕವನ್ನು ಹೆಚ್ಚುಮಾಡಬೇಕಾದರೆ ಸಮಾಜನೇತೃಗಳ ಕಣ್ಣುಗಳು ಈ ಹಳ್ಳಿಯ ರಸ್ತೆಗಳ ಕಡೆಗೆ ಬೀಳಬೇಕು. ಮೈಸೂರಿನ ಹಳ್ಳಿಗಳಲ್ಲಿಯೇ ಎರಡು ಮೂರು ಲಕ್ಷ ಎತ್ತಿನ ಬಂಡಿಗಳಿವೆ. ರೈತರಿಗೆ ಈ ಬಂಡಿಗಳು ಎಷ್ಟು ಆವಶ್ಯಕವೆಂಬುದನ್ನು ಮರೆಯಬಾರದು. ಈ ಬಂಡಿಗಳನ್ನು ಉತ್ತಮಪಡಿಸಲು ಕೆಲವು ಪ್ರಯತ್ನಗಳು ನಡೆಯುತ್ತಿವೆ. ರಬ್ಬರ್ ಟೈರುಗಳ ಚಕ್ರವನ್ನು ಹಾಕಬೇಕೆಂಬ ಸಲಹೆಯು ಇವುಗಳಲ್ಲೊಂದು. ಹೇಗಾದರೂ ಇರಲಿ. ಈ ರಸ್ತೆಗಳ ಉದ್ಧಾರವೇ ರೈತರ ಉದ್ಧಾರವೆಂಬುದನ್ನು ನೆನಪಿನಲ್ಲಿಡೋಣ.

ಪರಸ್ಪರ ಸಂಪರ್ಕವು ಬೆಳೆಯಬೇಕಾದರೆ ನಮ್ಮ ಹಳ್ಳಿಗಳಲ್ಲಿ ಪೋಸ್ಟು ಮತ್ತು ಟೆಲಿಗ್ರಾಫ್ ಸೌಕರ್ಯಗಳು ಹೆಚ್ಚಬೇಕು. ಈಗ ಅನೇಕ ಹಳ್ಳಿಗಳಿಗೆ ವಾರಕ್ಕೊಂದಾವೃತ್ತಿ ಅಂಚೆಯವನ ದರ್ಶನವಾಗುವುದೂ ವಿರಳ. ನಗರಗಳಲ್ಲಿಯೇ ಟೆಲಿಫೋನುಗಳ ಪ್ರಚಾರವಿಲ್ಲ; ಇನ್ನು ಹಳ್ಳಿಯಲ್ಲಿ ಕೇಳಬೇಕೆ? ಹಿಂದೆ ಹೇಳಿದ ನ್ಯಾಷನಲ್ ಛೈಲ್ಡ್ ಲೇಬರ್ ಸಮಿತಿಯವರು ಅಮೆರಿಕದ ಹಳ್ಳಿಗಳಲ್ಲಿ ಸಂಚರಿಸಿ ಅಲ್ಲಿಯ ಹಿಡುವಳಿದಾರರಲ್ಲಿ ಶೇಕಡ 55 ಮಂದಿಯೂ, ಹಿಡುವಳಿದಾರರಲ್ಲದ ರೈತರಲ್ಲಿ ಶೇಕಡ 42 ಮಂದಿಯೂ, ಕೂಲಿಯವರಲ್ಲಿ ಶೇಕಡ 25 ಮಂದಿಯೂ ಟೆಲಿಫೋನು

ಗಳನ್ನು ಹೊಂದಿರುವರೆಂದೂ ಇದು ಸಾಲದೆಂದೂ ಬರೆಯುವರು.[19] ನಮ್ಮ ನಗರವಾಸಿಗಳಲ್ಲಿಯೇ ಶೇಕಡ 99 ಮಂದಿ ಟೆಲಿಫೋನ್ ಅಂದರೆ ಏನೆಂಬುದನ್ನೂ ಅರಿಯರು. ವೃತ್ತಪತ್ರಿಕೆಗಳ ವಿಷಯವೂ ಹೀಗೆಯೇ. ವಿಶಾಲಪ್ರಪಂಚದ ವರ್ತಮಾನಗಳನ್ನು ತಿಳಿಯಬೇಕೆಂಬ ಆಸೆಯು ನಮ್ಮ ಹಳ್ಳಿಗಳಲ್ಲಿ ಹುಟ್ಟುತ್ತಿದೆ. ಆದರೆ ರೈತರು ಅಕ್ಷರಜ್ಞರಲ್ಲ; ವೃತ್ತಪತ್ರಿಕೆ ಗಳನ್ನು ತರಿಸಲಾರರು. ಗ್ರಾಮಪಂಚಾಯಿತಿಗಳು ಈ ಕಷ್ಟವನ್ನು ಸ್ವಲ್ಪಮಟ್ಟಿಗೆ ನಿವಾರಣೆಮಾಡಬಹುದು.

ಹೊರಗಿನ ಸನ್ನಿವೇಶಗಳ ಸಂಪರ್ಕಕ್ಕೆ ಇನ್ನೊಂದು ಹೊಸಸಾಧನವು ದೊರೆತಿದೆ; ಅದೇ ಬ್ರಾಡ್‌ಕ್ಯಾಸ್ಟಿಂಗ್ ಎಂಬುದು. ಪ್ರಾಯಃ ನಮ್ಮ ಹಳ್ಳಿಗಳ ಪುನರುದ್ಧಾರ ಕಾರ್ಯದಲ್ಲಿ ಈ ಹೊಸ ಉಪಕರಣವು ಬಹು ಫಲಕಾರಿಯಾಗಬಹುದು.



# ೯. ರೈತರ ಸಾಲ



ನಮ್ಮ ರೈತರ ಬಡತನದ ಬಾಳಿನಲ್ಲಿ ಎದ್ದು ಕಾಣುವ ಭಾಗವು ಅವರ ತಲೆಯ ಮೇಲಿರುವ ಸಾಲದ ಹೊರೆ. ರೈತರ ಸಾಲವು ಒಂದೆಡೆ ಅವರ ಬಡತನದ ಫಲ; ಇನ್ನೊಂದೆಡೆ ಅವರ ಬಡತನದ ಕಾರಣ. ನೂರಾರು ವರ್ಷಗಳಿಂದಲೂ ನಮ್ಮ ನಾಡಿನ ರೈತರು "ಋಣದಲ್ಲಿ ಹುಟ್ಟಿ, ಋಣದಲ್ಲಿ ಬೆಳೆದು ಋಣದಲ್ಲಿಯೇ ಮಡಿಯುತ್ತಿದ್ದಾರೆ." ನೇಣುಹಾಕಿಕೊಂಡಿರುವ ಮನುಷ್ಯನನ್ನು ಆತನ ಕತ್ತಿಗೆ ಕಟ್ಟಿರುವ ಹಗ್ಗವು ಎತ್ತಿ ಪ್ರದರ್ಶಿಸುವಂತೆ ರೈತನ ಬಾಳಿನ ಸುತ್ತಲೂ ಬೇರುಗುಣಿಕೆಯಂತಿರುವ ಸಾಲವು ಅವನನ್ನು ನಮ್ಮ ಕಣ್ಣೆದುರಿಗೆ ಎತ್ತಿನಿಲ್ಲಿಸುತ್ತಿದೆ. ಮನುಸುಬೇದಾರರು ಬ್ಯಾಂಕಿಂಗ್ ಸಮಿತಿಯ ಮೈನಾರಿಟಿ ವರದಿಯಲ್ಲಿ "ನಮ್ಮ

ಗ್ರಾಮಗಳಲ್ಲಿ ನಮಗೆ ತಿಳಿಯದಂತೆಯೇ ಮಹಾಕ್ರಾಂತಿಯೊಂದು ಜರುಗುತ್ತಿದೆ. ರೈತರಿಗಿದ್ದ ಸ್ವಾತಂತ್ರ್ಯವು ತೊಲಗುತ್ತಿವೆ. ಹಣಕಾಸಿನ ಹಂಗು ರೈತರನ್ನು ಸಾಹುಕಾರರ ಗುಲಾಮರನ್ನಾಗಿ ಮಾಡುತ್ತಿದೆ. ಬಾಳಿನ ಅಂತಸ್ತು ಇಳಿಯುತ್ತಿದೆ. ಆದುದರಿಂದ ಶ್ರಮಪಟ್ಟು ಕೆಲಸಮಾಡುವ ಉತ್ಸಾಹವೂ ಅಳಿಯುತ್ತಿದೆ[1] ” ಎಂದು ಹೇಳಿರುವರು.

ಬೇಸಾಯದ ಬುಡಕ್ಕೆ ಕೊಡಲಿಯಂತಿರುವ ಈ ಸಾಲದ ಮಹತ್ವವು ಸಮಾಜಸುಧಾರಕರ ಮತ್ತು ಸರ್ಕಾರದವರ ಗಮನಕ್ಕೆ ಬಹುವರ್ಷದಿಂದಲೂ ಬಂದಿದ್ದಿತು. 1875 ರಲ್ಲಿ ಡಕ್ಕನ್ ದಂಗೆಯ ವಿಚಾರಣಾ ಸಮಿತಿಯವರು ಅಹಮ್ಮದ್‌ನಗರದ ಜಿಲ್ಲೆಯಲ್ಲಿ ನಡೆದ ದಂಗೆಗೆ ರೈತರಿಗೂ ಸಾಹುಕಾರರಿಗೂ ಇದ್ದ ವೈಮನಸ್ಯವೇ ಕಾರಣವೆಂದು ಸಾರಿದರು.[2] 1880 ಮತ್ತು 1901 ರಲ್ಲಿ ಕ್ಷಾಮನಿವಾರಣಾಸಮಿತಿಯವರು ರೈತರ ಕ್ಷಾಮಕ್ಕೆ ಸಾಲವೇ ಮುಖ್ಯಕಾರಣವೆಂದು ಅರಿಕೆಮಾಡಿದ್ದರು.[3] 1913 ರಲ್ಲಿ ಬರೋಡಾ ಸರಕಾರದವರು ರೈತರ ಸಾಲದ ವಿಚಾರವನ್ನು ಕೂಲಂಕಷವಾಗಿ ವಿಮರ್ಶೆಮಾಡಿಸಿದ್ದರು. ಇತರ ಪ್ರಾಂತಗಳಲ್ಲಿಯೂ ಅಲ್ಲಿ ಇಲ್ಲಿ ಗ್ರಾಮಗಳ ಆರ್ಥಿಕ ಸ್ಥಿತಿಯನ್ನು ಪರೀಕ್ಷೆಮಾಡಿದ ಕೆಲವು ಅರ್ಥಶಾಸ್ತ್ರನಿಪುಣರು ಸಮಾಜದ ದೃಷ್ಟಿಯನ್ನು ಈ ವಿಷಯದ ಕಡೆಗೆ ಎಳೆದಿದ್ದರು. ಆದರೆ ಈ ಸಮಸ್ಯೆಯನ್ನು ಆಮೂಲಾಗ್ರವಾಗಿ ಪರಾಮರ್ಶಿಸಿದ ಮಹನೀಯರೆಂದರೆ ಡಾರ್ಲಿಂಗ್ ಎಂಬುವರು. (ಪಂಜಾಬಿನ ಸುಯೋಗದಿಂದಲೋ ಏನೋ ಗ್ರಾಮಪುನರುಜ್ಜೀವನಕಾರ್ಯವು ಅಲ್ಲಿ ನಡೆದಿರುವಷ್ಟು ಇನ್ನಾವ ಪ್ರಾಂತದಲ್ಲಿಯೂ ನಡೆದಿಲ್ಲವೆನ್ನಬಹುದು.) 1925 ರಲ್ಲಿ ತಮ್ಮ Punjab Peasant in Prosperity and Debt ಎಂಬ ಗ್ರಂಥದಲ್ಲಿ ಅವರು ಪಂಜಾಬಿನ ರೈತರ ಸಾಲದ ಚಿತ್ರವನ್ನು ಬಯಲಿಗೆಳೆದರು. ಈಚಿಗೆ Royal Commission on Indian Agriculture ಎಂಬ ಸಮಿತಿಯವರೂ, ‘Royal Commission on Indian Labour’

ಎಂಬ ಸಮಿತಿಯವರೂ ಈ ಸಾಂಕ್ರಾಮಿಕ ರೋಗಕ್ಕೆ ತಕ್ಕ ಪ್ರಾಯಶ್ಚಿತ್ತ ವನ್ನು ಮಾಡದಿದ್ದರೆ ಭಾರತೀಯರ ಉದ್ಧಾರವಾಗಲಾರದೆಂದು ಎಚ್ಚರಿಸಿದರು.

ಇಷ್ಟಾದರೂ ರೈತರ ಸಾಲದ ವಿಷಯವು ಹಿಂದೆ ನಮಗೆ ವಿಶದವಾಗಿ ತಿಳಿದಿರಲೇ ಇಲ್ಲವೆನ್ನಬಹುದು. ಕೆಲವು ಹಳ್ಳಿಗಳ, ಕೆಲವು ತಾಲ್ಲೂಕುಗಳ ಅಥವಾ ಕೆಲವು ಜಿಲ್ಲೆಗಳ ವಿಷಯವು ಗೊತ್ತಿದ್ದರೂ ಇರಬಹುದು. ಆದರೆ ಈ ಸಮಸ್ಯೆಯ ಸ್ವರೂಪವು ವಿಶಾಲ ಭಾರತದ ಒಂದು ಭಾಗದಲ್ಲಿರುವಂತೆಯೇ ಇನ್ನೊಂದು ಭಾಗದಲ್ಲಿಯೂ ಇರುವುದೆಂದು ಹೇಳುವುದು ದಿಟ್ಟತನದ ಮಾತಾಗುತ್ತಿದ್ದಿತು. 1930 ರಲ್ಲಿ ಈ ಕಷ್ಟವು ಪರಿಹಾರವಾಯಿತು. ಕೇಂದ್ರ ಮತ್ತು ಪ್ರಾಂತದ ಬ್ಯಾಂಕಿಂಗ್ ಸಮಿತಿಗಳ ವರದಿಗಳು ಬಯಲಿಗೆ ಬಂದುವು. ರೈತರ ಸಾಲದ ಗೋಳನ್ನು ಸ್ಫುಟಾಕ್ಷರದಲ್ಲಿ ಬರೆದುದಾಯಿತು. ಈ ರೋಗವು ಆಸೇತುಹಿಮಾಚಲವೂ ವ್ಯಾಪಿಸಿದೆಯೆಂಬುದು ನಿರ್ಧರವಾಯಿತು. ನಮ್ಮ ನಾಡಿನ ರೈತರೆಲ್ಲರೂ ಈ ಮಹಾಸಾಗರದಲ್ಲಿ ಮುಳುಗುತ್ತಿದ್ದಾರೆಂಬುದು ವ್ಯಕ್ತವಾಯಿತು. ಕೇಂದ್ರ ಬ್ಯಾಂಕಿಂಗ್ ಸಮಿತಿಯವರು ರೈತರ ಆರ್ತನಾದವನ್ನು ಪಡಿನುಡಿದರು. "ಇಗೋ ನಾವು ಮುಳುಗುತ್ತಿದ್ದೇವೆ; ದಡಕ್ಕೆ ಎಳೆಯಿರಿ; ನಮ್ಮನ್ನು ಬದುಕಿಸಿ; ಇಲ್ಲವಾದರೆ ನಮ್ಮೊಡನೆಯೇ ಭಾರತ ಸಂಸ್ಕೃತಿಯೂ ಮುಳುಗುವುದು." ಇದೇ ರೈತರ ಇಂದಿನ ಕೂಗು. ಯಾಚಕರ ಕೂಗಲ್ಲ; ಸೋದರರ ಎಚ್ಚರಿಕೆ.

ಈ ಆರ್ತನಾದದ ನಿಜಸ್ವರೂಪವೇನು? ರೈತರ ತಲೆಯ ಮೇಲಿರುವ ಸಾಲದ ಹೊರೆಯೆಷ್ಟು? ಬ್ಯಾಂಕಿಂಗ್ ಸಮಿತಿಯವರು ಬ್ರಿಟಿಷ್ ಇಂಡಿಯದ ಎಲ್ಲಾ ಪ್ರಾಂತಗಳಲ್ಲಿಯೂ ಈ ಸಾಲದ ಹೊರೆ ಎಷ್ಟಿರಬಹುದೆಂದು ಸ್ವಲ್ಪಮಟ್ಟಿಗೆ ಅಂದಾಜು ಮಾಡಿದ್ದಾರೆ. ಪ್ರತಿಯೊಬ್ಬ ರೈತನಿಂದಲೂ ನೇರವಾಗಿ ಲೆಕ್ಕ ತರಿಸುವವರೆಗೂ ಇಷ್ಟೇ ಸಾಲವೆಂದು ನಿರ್ಧರವಾಗಿ ಹೇಳಲಾಗುವುದಿಲ್ಲ. ಆದರೆ ಬ್ಯಾಂಕಿಂಗ್ ಸಮಿತಿಯವರು ತಮ್ಮ

ಅಂದಾಜನ್ನು ಕೆಲವು ಆಧಾರಗಳ ಮೇಲೆ ನಿರ್ಣಯಿಸಿರುವುದರಿಂದ ಈ ಸಮಸ್ಯೆಯ ಸ್ವರೂಪವನ್ನು ಅರಿಯಲು ಅದು ತೃಪ್ತಿಕರವಾದ ಆಧಾರವೆಂದು ಹೇಳಬಹುದು. ಸಾಲದ ಹೊರೆಯನ್ನು ಕೆಳಗಿನ ಪಟ್ಟಿಯು ತೋರಿಸುವುದು.[4]

| ಪ್ರಾಂತ | ಸಾಲ |
|---|---|
| ಅಸ್ಸಾಂ | 22 ಕೋಟಿ ರೂಪಾಯಿಗಳು |
| ಬಂಗಾಳ | 100 ,, |
| ಬಿಹಾರ ಮತ್ತು ಒರಿಸ್ಸ | 155 ,, |
| ಬೊಂಬಾಯಿ | 81 ,, |
| ಮದ್ರಾಸು | 150 ,, |
| ಪಂಜಾಬು | 135 ,, |
| ಸಂಯುಕ್ತಪ್ರಾಂತ | 48½ ,, |

(ಪಂಜಾಬಿನ ವಿಷಯದಲ್ಲಿ ಡಾರ್ಲಿಂಗರ ಅಂದಾಜು 140 ಕೋಟಿ ರೂಪಾಯಿಗಳು.[5])

| | |
|---|---|
| ಬರ್ಮಾ .... | 55 ಕೋಟಿ ರೂಪಾಯಿಗಳು |
| ಮಧ್ಯಪ್ರಾಂತ ಮತ್ತು ಬಿಹಾರ್ | 36½ ,, |
| ವಾಯುವ್ಯಸೀಮಾಪ್ರಾಂತ | 11 ,, |
| ಡೆಲ್ಲಿ, ಅಜ್ಮೀರ, ಮಿಾವಾರ್ | 4½ ,, |
| ಒಟ್ಟು .... | 798¾ ,, |

ಆಶ್ರಿತಸಂಸ್ಥಾನಗಳನ್ನೂ ಸೇರಿಸಿಕೊಂಡರೆ ಈ ಸಾಲವು 1000 ಕೋಟಿ ರೂಪಾಯಿಗಳಿಗಿಂತಲೂ ಕಡಿಮೆಯಾಗಿರಲಾರದೆಂದು ಡಾರ್ಲಿಂಗ್ ಅವರು ಅಭಿಪ್ರಾಯಪಡುತ್ತಾರೆ.[6] ಮೈಸೂರಿನ ರೈತರ ಸಾಲವು 30 ಕೋಟಿ ರೂಪಾಯಿಗಳಿಗಿಂತ ಕಡಿಮೆಯಾಗಿಲ್ಲವೆಂದು ನಮ್ಮ ಜಮೀನು ಅಡಮಾನದ ಬ್ಯಾಂಕಿನ ಅಧ್ಯಕ್ಷರಾದ ಶ್ರೀಮಾನ್ ಶ್ರೀನಿವಾಸಯ್ಯಂಗಾರ್ಯರೂ 35 ಕೋಟಿ ರೂಪಾಯಿಗಳಿಗೆ ಕಡಿಮೆಯಿಲ್ಲವೆಂದು ರೈತರ ಕಷ್ಟ ನಿವಾರಣಾಸಮಿತಿಯವರೂ ಅಂದಾಜುಮಾಡಿರುತ್ತಾರೆ.

ಈ ಹೊರೆಯಂತಿರಲಿ. ನಮ್ಮ ರೈತರಲ್ಲಿ ಈ ಸಾಂಕ್ರಾಮಿಕರೋಗಕ್ಕೆ ತುತ್ತಾಗದಿರುವವರು ಎಷ್ಟು ಕಡಿಮೆ ಸಂಖ್ಯೆಯವರು ಎಂಬುದನ್ನು ನೋಡಿರಿ. ಪಂಜಾಬು ಶೇಕಡ 13, ಸಂಯುಕ್ತಪ್ರಾಂತ ಶೇಕಡ 46, ಬಿಹಾರ್ ಮತ್ತು ಒರಿಸ್ಸ ಶೇಕಡ 35-50 ಮಧ್ಯಪ್ರಾಂತ ಶೇಕಡ 46, ಬರ್ಮ ಶೇಕಡ 14, ಅಸ್ಸಾಂ ಶೇಕಡ 15, ಗುಜರಾತ್ ಶೇಕಡ 22, ಸಿಂಧ್ ಶೇಕಡ 13.

ಕೆಲವು ಪ್ರಾಂತಗಳಲ್ಲಿ ರೈತರು ಬರಿಯ ಸಾಗುವಳಿದಾರರೇ ವಿನಾ, ಜಮೀನಿನ ಒಡೆಯರಲ್ಲ. ಜಮೀನನ್ನು ಆಧಾರಮಾಡುವ ಹಕ್ಕಿಲ್ಲವಾದುದರಿಂದ ಅವರಿಗೆ ಸಾಲ ದೊರೆಯದೆ ಇವೆ.[7] ರೈತರಿಗೆ ಜಮೀನನ್ನು ಈಡು ಮಾಡುವ ಹಕ್ಕಿರುವೆಡೆಯಲ್ಲೆಲ್ಲ ನೂರರಲ್ಲಿ 75 ಕ್ಕಿಂತ ಮಿಗಿಲಾಗಿ ಸಾಹುಕಾರರ ಬಲೆಯಲ್ಲಿ ಸಿಕ್ಕಿ ನರಳುತ್ತಿದ್ದಾರೆ.

ಇಷ್ಟೇ ಅಲ್ಲದೆ ಸಾಲಗಾರನಾಗಿರುವ ಪ್ರತಿಯೊಬ್ಬ ರೈತನ ತಲೆಯ ಮೇಲೂ ಅಪಾರವಾದ ಹೊರೆಯಿವೆ. ಪಂಜಾಬಿನಲ್ಲಿ ಸಾಲಮಾಡಿರುವ ಪ್ರತಿಯೊಬ್ಬ ರೈತನಿಗೂ 600 ರೂಪಾಯಿಗಳ ಸಾಲವಿವೆಯೆಂದು ಡಾರ್ಲಿಂಗ್ ಅವರು ಅಂದಾಜುಮಾಡುತ್ತಾರೆ. ಸಿಂಧೂದೇಶದಲ್ಲಿ ಪ್ರತಿಯೊಬ್ಬ ರೈತನ ಕುಟುಂಬದ ಮೇಲೂ 570 ರೂಪಾಯಿಗಳ ಸಾಲವಂತೆ. ಬೊಂಬಾಯಿಪ್ರಾಂತದಲ್ಲಿ ಜಮೀನಿರುವ ಮತ್ತು ಇಲ್ಲದಿರುವ ರೈತರಲ್ಲಿ ಸರಾಸರಿ ಕುಟುಂಬವೊಂದಕ್ಕೆ 324 ರೂಪಾಯಿಗಳ ಸಾಲವಂತೆ.[8] ಪ್ರೊಫೆಸರ್ ಥಾಮಸ್ ಅವರು ತಿನ್ನವೆಲ್ಲಿಯಲ್ಲಿ ನಡೆಯಿಸಿದ ಆರ್ಥಿಕಗಣನೆಯ ಪ್ರಕಾರ ಸಾಲಗಾರನಾಗಿರುವ ಪ್ರತಿಯೊಬ್ಬ ರೈತನ ಕುಟುಂಬಕ್ಕೂ 432 ರೂ. ಗಳ ಸಾಲವಿದೆಯೆಂದು ಹೇಳುತ್ತಾರೆ.

ರೈತರ ವರ್ಷದ ಆದಾಯವನ್ನು ರೈತರ ಸಾಲದ ಹೊರೆಯೊಡನೆ ಹೋಲಿಸಿನೋಡಿದರೆ ಸಾಲದ ಭಾರವು ಎಷ್ಟೆಂಬುದು ವ್ಯಕ್ತವಾಗುವುದು. 1930 ರಲ್ಲಿ ನಮ್ಮ ರೈತರ ವರ್ಷದ ಸರಾಸರಿ ಆದಾಯವು ತಲೆಯೊಂದಕ್ಕೆ

42 ರೂಪಾಯಿಗಳೆಂದು ಬ್ಯಾಂಕಿಂಗ್ ಸಮಿತಿಯವರು ಅಂದಾಜುಮಾಡಿರುತ್ತಾರೆ.[9] ಡಾರ್ಲಿಂಗ್ ಅವರು ಇದು 80 ರೂಪಾಯಿಗೆ ಕಡಿಮೆಯಿಲ್ಲವೆಂದು ಹೇಳುವರು; ಪ್ರೊ. ಥಾಮಸ್ ಇವರು 35 ರೂಪಾಯಿಗಳೆನ್ನುವರು; ವಿಶ್ವೇಶ್ವರಯ್ಯನವರ ಅಂದಾಜು 60 ರೂಪಾಯಿಗಳು. ನಮ್ಮ ಸ್ವಂತ ಅನುಭವವೂ ಕೂಡ ಬ್ಯಾಂಕಿಂಗ್ ಸಮಿತಿಯವರ ಅಭಿಪ್ರಾಯವನ್ನೇ ಅನುಸರಿಸಿರುವುದು. ಆದುದರಿಂದ ರೈತರ ಸಂಪಾದನೆಗೂ ರೈತರ ಸಾಲಕ್ಕೂ ಬಹು ಅಂತರವಿದೆಯೆಂದು ನಿರ್ಧರವಾಗಿ ಹೇಳಬಹುದು.

ಸಾಲದ ಭಾರವನ್ನು ಅಳೆಯಲು ಡಾರ್ಲಿಂಗ್ ಅವರು ಇನ್ನೊಂದು ಉಪಕರಣವನ್ನು ಉಪಯೋಗಿಸುವರು. ಜಮೀನಿನ ಕಂದಾಯಕ್ಕೂ ರೈತರ ಸಾಲಕ್ಕೂ ಇರುವ ಪರಿಮಾಣವು ಸಾಲದಿಂದ ರೈತರಿಗಾಗುತ್ತಿರುವ ತೊಂದರೆಯನ್ನು ಸ್ಪಷ್ಟಪಡಿಸುವುದು. ಸಾಮಾನ್ಯವಾಗಿ ಕಂದಾಯವು ರೈತರ ನಿವ್ವಳ ಆದಾಯದ $\frac{1}{4}$ ಭಾಗವೆಂದು ಹೇಳಬಹುದು. ರೈತರು ಕಂದಾಯವನ್ನೇ ಕೊಡಲಾರದೆ, ಎಷ್ಟುಮಟ್ಟಿಗೆ ನರಳುತ್ತಿದ್ದಾರೆಂಬುದು ಕೈಯೊಳಗಿನ ಹುಣ್ಣಾಗಿದೆ. ಇನ್ನು ರೈತರ ಸಾಲವು ಕಂದಾಯಕ್ಕಿಂತ ಎಷ್ಟು ಹೆಚ್ಚೆಂಬುದನ್ನು ನೋಡಿರಿ. ಕೆಳಗಿನ ಅಂಕಿಗಳನ್ನು ಆಯಾ ಪ್ರಾಂತದ ಬ್ಯಾಂಕಿಂಗ್ ಸಮಿತಿಯವರ ವರದಿಯಿಂದ ಆರಿಸಲಾಗಿದೆ.

| ಪ್ರಾಂತ | | ಸಾಲದಹೊರೆ |
|---|---|---|
| ಪಂಜಾಬು | ... | ವರ್ಷದ ಕಂದಾಯ $\times 25\frac{1}{2}$ |
| ಮದ್ರಾಸು | .... | ,, $\times 19$ |
| ಸಂಯುಕ್ತಪ್ರಾಂತ | .... | ,, $\times 17$ |
| ಬಂಗಾಳ | .... | ,, $\times 18$ |
| ಆಸ್ಸಾಂ | .... | ,, $\times 21$ |
| ತಿನ್ನವೆಲ್ಲಿ (ಥಾಮಸ್) | .... | ,, $\times 23$ |

ಸಾಲವು ಹೊರೆಯಾಗುವುದಕ್ಕೆ ಒಂದು ಮುಖ್ಯಕಾರಣ, ಸಾಲದ ಹಣಕ್ಕೆ ತೆರಬೇಕಾದ ಬಡ್ಡಿ. ಬಡ್ಡಿಯ ದರವು ಹೆಚ್ಚಿದಷ್ಟೂ ಸಾಲವು

ಭಾರ; ಬಡ್ಡಿಯ ದರವು ಕಡಿಮೆಯಾದಷ್ಟೂ ಸಾಲವು ಹಗುರ. ಈ ಕಾಲದಲ್ಲಿ ದೊಡ್ಡ ಕಾರ್ಖಾನೆಗಳೂ, ಸರ್ಕಾರಗಳೂ ಮುನಿಸಿಪಾಲಿಟಿಯೇ ಮೊದಲಾದ ಸಂಸ್ಥೆಗಳೂ ಬಹು ಸುಲಭವಾದ ದರದ ಬಡ್ಡಿಗೆ ಸಾಲವನ್ನು ತೆಗೆದಿವೆ; ತೆಗೆಯುತ್ತಿವೆ. ನಮ್ಮ ರೈತರು ತೆರುತ್ತಿರುವ ಬಡ್ಡಿಯ ದರವು ಮಾತ್ರ ನೂರಕ್ಕೆ 12 ರಿಂದ 200 ರ ವರಿಗೆ ವ್ಯಾಪಿಸಿರುವುದಾಗಿ ಬ್ಯಾಂಕಿಂಗ್ ಸಮಿತಿಯವರು ತಿಳಿಸುತ್ತಾರೆ. ನಮ್ಮ ಅನುಭವದಲ್ಲಿಯೂ ಕೂಡ ರೈತರು ಕೊಡುತ್ತಿರುವ ಬಡ್ಡಿಯು ತೀರ ಹೆಚ್ಚೆಂಬುದು ತಿಳಿದೇ ಇದೆ. ಬಿಹಾರ್ ಬ್ಯಾಂಕಿಂಗ್ ಸಮಿತಿಯವರು ತಮ್ಮ ವರದಿಯಲ್ಲಿ "ರೈತರು ಪದೇ ಪದೇ ಸಾಲಮಾಡುತ್ತಿರುವುದಕ್ಕೆ ಮುಖ್ಯವಾದ ಕಾರಣವು ಅವರು ತೆರಬೇಕಾಗಿರುವ ಹೆಚ್ಚಾದ ಬಡ್ಡಿಯೇ. ಈ ಬಡ್ಡಿಯ ದರವನ್ನು ಸರ್ವ ಪ್ರಯತ್ನದಿಂದಲೂ ತಗ್ಗಿಸುವುದೇ ನಮ್ಮ ಮುಖ್ಯ ಕರ್ತವ್ಯವಾಗಿರಬೇಕು." ಎಂದು ಹೇಳುವರು.[10]

ನಮ್ಮ ದೇಶದಂತೆಯೇ ಇತರ ದೇಶಗಳಲ್ಲಿಯೂ ರೈತರು ಸಾಲ ಮಾಡಿರುತ್ತಾರೆ. 35 ಕೋಟಿ ಪ್ರಜೆಗಳಿರುವ ಭಾರತಭೂಮಿಗೆ ಒಂದು ಸಾವಿರಕೋಟಿ ರೂಪಾಯಿಗಳ ಸಾಲವು ದೊಡ್ಡದಲ್ಲವೆಂದು ಕೆಲವರು ಹೇಳುವರು. ಇತರ ದೇಶಗಳ ರೈತರಂತೆ ನಮ್ಮವರೂ ಈ ಹಣವನ್ನೆಲ್ಲ ಲಾಭದಾಯಕವಾಗುವ ಬಗೆಯಲ್ಲಿ ಉಪಯೋಗಿಸಿದ್ದರೆ ಹೀಗೆ ಹೇಳುವುದು ಸೂಕ್ತವಾಗುತ್ತಿದ್ದಿತು. ಆದರೆ ನಮ್ಮ ರೈತರ ಸಾಲವಲ್ಲಿ ಬಹುಭಾಗವು ನಿಷ್ಫಲವಾದ ಕೆಲಸಗಳಿಗೆ ವಿನಿಯೋಗವಾಗಿರುವುದು. ಸಂಯುಕ್ತ ಪ್ರಾಂತದ ಬ್ಯಾಂಕಿಂಗ್ ಸಮಿತಿಯವರು ಅಲ್ಲಿಯ ಸಾಲದಲ್ಲಿ ನೂರಕ್ಕೆ 30 ಬೇಸಾಯಕ್ಕಾಗಿಯೂ, 34 ತುತ್ತಿನ ಚೀಲಕ್ಕಾಗಿಯೂ 36 ಹಬ್ಬ ಹರಿದಿನಗಳೇ ಮೊದಲಾದ ಸಂಪ್ರದಾಯದ ಖರ್ಚಿಗಾಗಿಯೂ ಆದುದೆಂದು ತಮ್ಮ ವರದಿಯಲ್ಲಿ ಹೇಳಿರುತ್ತಾರೆ.[11] ಪಂಜಾಬಿನ ವಿಷಯದಲ್ಲಿ ಡಾರ್ಲಿಂಗ್ ಅವರು ಇದೇ ಅಭಿಪ್ರಾಯವನ್ನು ಅನುಮೋದಿಸುತ್ತಾರೆ. "ಅವರ ಸಾಲದ

ಹೆಚ್ಚುಭಾಗವು ದುರ್ಭಿಕ್ಷಕಾಲದಲ್ಲಿ ಸಂಸಾರ ನಡೆಯಿಸುವುದಕ್ಕೂ, ಮದುವೆಗಾಗಿಯೂ, ಹೆಣಗಳ ಸಂಸ್ಕಾರಕ್ಕೂ—ಎಂದರೆ ಯಾವವಿಧವಾದ ಖರ್ಚನ್ನು ತಮ್ಮ ದಿನಚರಿಯ ಆದಾಯದಿಂದ ಮಾಡಬೇಕಾಗಿತ್ತೋ ಅಂತಹ ಖರ್ಚಿಗಾಗಿ ಬೆಳೆದುದು—" ಎಂದು ತಮ್ಮ ಪುಸ್ತಕದಲ್ಲಿ ಹೇಳುತ್ತಾರೆ.[12]

ದುರ್ಭಿಕ್ಷದಲ್ಲಿ ಅಧಿಕಮಾಸಬೇರೆ. ನಾಲ್ಕಾರು ವರ್ಷಗಳಿಂದ ಪ್ರಪಂಚವನ್ನೆಲ್ಲ ಉಲ್ಲೋಕಲ್ಲೋಲ ಮಾಡುತ್ತಿರುವ ಆರ್ಥಿಕ ಆಂದೋಲನವು ಮೊದಲೇ ಕಷ್ಟಪಡುತ್ತಿದ್ದ ರೈತರನ್ನು ಮತ್ತಷ್ಟು ಕಷ್ಟದಲ್ಲಿ ಮುಳುಗಿಸುತ್ತಿದೆ. ರೈತರು ಯಾವ ಪದಾರ್ಥಗಳನ್ನು ಮಾರಿ ಋಣಮುಕ್ತರಾಗುತ್ತೇವೆಂಬ ಧೈರ್ಯದಿಂದ ಸಾಲಮಾಡುವರೋ ಆ ಪದಾರ್ಥಗಳ ಬೆಲೆಯು ಬಹುವಾಗಿ ಇಳಿಯುತ್ತಿದೆ. ರೈತರು ಬೆಳೆದ ಪದಾರ್ಥಗಳಿಗೆ ಗಿರಾಕಿಗಳಿಲ್ಲ. ಗಿರಾಕಿಗಳು ದೊರೆತರೂ ಅವರು ಕೊಡುವ ಬೆಲೆಯು ಪದಾರ್ಥಗಳ ಬೆಳವಣಿಗೆಗೆ ತಗಲುವ ಖರ್ಚನ್ನು ಕೂಡ ಕೊಡುವುದಿಲ್ಲ.

ಬೆಲೆಯ ಇಳಿತವು ರೈತರ ಕಷ್ಟವನ್ನು ಇನ್ನೊಂದು ವಿಧದಲ್ಲಿಯೂ ಹೆಚ್ಚಿಸಿವೆ. ಇದು ಹೇಗೆಂದರೆ: ಒಬ್ಬ ರೈತನು ಹತ್ತು ವರ್ಷಗಳ ಹಿಂದೆ 100 ರೂಪಾಯಿಗಳ ಸಾಲ ಮಾಡಿದನೆಂದು ಭಾವಿಸೋಣ. ಆ ರೂಪಾಯಿಗಳಿಂದ ಅವನಿಗೆ ನೇರವಾದ ಯಾವಪ್ರಯೋಜನವೂ ಇಲ್ಲ. ಅವನಿಗೆ ಬೇಕಾದುದು ಮಾರ್ಕೆಟ್ಟಿನಲ್ಲಿ ಅಷ್ಟು ರೂಪಾಯಿಗಳ ಬೆಲೆಬಾಳುವ ಪದಾರ್ಥಗಳನ್ನಾಗಲೀ, ಸೇವೆಯನ್ನಾಗಲೀ ಕೊಳ್ಳಲು ಅಧಿಕಾರ; ಎಂದರೆ ಅವನು ಸಾಲಮಾಡಿದುದು ಆ ಅಧಿಕಾರ. ಇಂದು ಅದೇ ರೂಪಾಯಿಗಳನ್ನು ವಾಪಸುಮಾಡುವುದೆಂದರೆ ಮಾರ್ಕೆಟ್ಟಿನಲ್ಲಿ ಹಿಂದೆ ಎಷ್ಟು ಪದಾರ್ಥಗಳನ್ನು ಕೊಳ್ಳಬಹುದಾಗಿದ್ದಿತೋ ಅದಕ್ಕೆ ದ್ವಿಗುಣವಾದ ಪದಾರ್ಥಗಳನ್ನು ಕೊಳ್ಳುವ ಅಧಿಕಾರವನ್ನು ಕೊಟ್ಟಂತಾಗುವುದು. ಇದೇ ವಿಷಯವನ್ನು, ಹಿಂದೆ 100 ರೂಪಾಯಿಯ ಬೆಲೆಯು X ಇದ್ದರೆ ಇಂದು 2 X ಆಗಿದೆ ಎಂದು ಹೇಳಬಹುದು. ಆದುದರಿಂದ ಹತ್ತು ವರ್ಷಗಳ ಹಿಂದೆ

X ನ್ನು ಸಾಲವಾಗಿ ಪಡೆದುಕೊಂಡ ರೈತನು ಹತ್ತು ವರ್ಷಗಳೂ ಬಡ್ಡಿಯನ್ನು ತೆರುವುದಲ್ಲದೆ ಇಂದು 2 X ನ್ನು ಕೊಟ್ಟರೆ ಮಾತ್ರ ಋಣವಿಮುಕ್ತನಾಗುವನು. ಯಾವ ಬೆಲೆಯ ಏರಿಳಿತಕ್ಕೆ ನಮ್ಮ ರೈತರು ಜವಾಬ್ದಾರರಲ್ಲವೋ, ಯಾವ ಆರ್ಥಿಕ ಆಂದೋಲನವು ಇತರ ನಾಡಿನಲ್ಲಿರುವ ಸರಳ ಹೃದಯರನ್ನೂ ತೊಂದರೆಪಡಿಸುತ್ತಿದೆಯೋ, ಅದೇ ಆಂದೋಲನವು ನಮ್ಮ ರೈತರ ಬೆನ್ನುಮೂಳೆಯನ್ನೇ ಮುರಿದುಹಾಕಿದೆಯೆಂದು ಹೇಳ ಬಹುದು.

ಈ ವಿಷಮಸ್ಥಿತಿಯಲ್ಲಿರುವ ನಮ್ಮ ರೈತರ ಕಷ್ಟನಿವಾರಣೆಗಾಗಿ ಸಮಾಜವು ಕೈಗೊಳ್ಳುವ ಎಲ್ಲಾ ಕೆಲಸಗಳ ಧ್ಯೇಯವೂ ರೈತರ ಸಂಪಾದನೆಯನ್ನು ಹೆಚ್ಚಿಸುವುದಾಗಿರಬೇಕು. ಪ್ಯಾರೆಟೊ ಎಂಬ ಅರ್ಥಶಾಸ್ತ್ರಜ್ಞನು "ಅವರ ಸಂಪಾದನೆಯನ್ನು ಎಲ್ಲ ವಿಧದಲ್ಲಿಯೂ ಹೆಚ್ಚಿಸುವುದೇ ಬಡವರನ್ನು ಉದ್ಧಾರಮಾಡುವ ಅತಿಮುಖ್ಯವಾದ ಉಪಾಯ." ಎನ್ನುವನು. ಕಳೆದ ಬಹುವರ್ಷಗಳಿಂದಲೂ ಸರ್ಕಾರಗಳೂ, ಖಾಸಗೀ ಸಂಸ್ಥೆಗಳೂ ಈ ವಿಷಯದಲ್ಲಿ ಎಷ್ಟೋ ಉತ್ಸಾಹವನ್ನು ಪ್ರದರ್ಶಿಸಿರುವುವು. ಆದರೆ ರೈತರ ಸಾಲದ ಹೊರೆಯು ಅವರನ್ನು ಇನ್ನೂ ಆಳವಾದ ತಾಯ್ಮಳಲಿಗೆ ಸೆಳೆಯುತ್ತಿದೆ. ಸಂಪಾದನೆಯನ್ನು ಹೆಚ್ಚಿಸಲು ಎಷ್ಟೆಷ್ಟು ಪ್ರಯತ್ನಪಟ್ಟರೂ ಸಾರ್ಥಕವಿಲ್ಲವಾಗಿದೆ. ಪ್ರತಿಯೊಂದು ಪ್ರಯತ್ನದ ಸಾಫಲ್ಯಕ್ಕೂ ಸಾಲವೆಂಬ ಕಲ್ಲುಬಂಡೆಯು ಅಡ್ಡಿಯಾಗಿ ನಿಂತಿದೆ. ಸಾಲದ ಹೊರೆಯನ್ನು ಇಳಿಸಿದ ಹೊರತು ಸಂಪಾದನೆಯು ಹೆಚ್ಚುವುದಿಲ್ಲ; ಸಂಪಾದನೆಯು ಹೆಚ್ಚಿದ ಹೊರತು ಸಾಲದ ಹೊರೆಯು ಇಳಿವುದಿಲ್ಲ. ಆದುದರಿಂದಲೇ ಸಂಪಾದನೆಯನ್ನು ಹೆಚ್ಚಿಸುವ ಪ್ರಯತ್ನವೂ, ಸಾಲವನ್ನು ಇಳಿಸುವ ಪ್ರಯತ್ನವೂ ಏಕಕಾಲದಲ್ಲಿಯೇ ನಡೆಯಬೇಕಾಗಿದೆ. ಒಂದು ಇನ್ನೊಂದರ ಫಲಕ್ಕಾಗಿ ಕಾದಿರಲಾಗದು. ಈ ದ್ವಿಮುಖ ಕರ್ತವ್ಯದಲ್ಲಿ ಒಂದಾದ ಋಣನಿವಾರಣೋಪಾಯಗಳನ್ನು ಸ್ವಲ್ಪಮಟ್ಟಿಗೆ ಚರ್ಚಿಸೋಣ.

ಋಣನಿವಾರಣೋಪಾಯಗಳಲ್ಲಿ ಎರಡು ಧ್ಯೇಯಗಳಿರಬೇಕು. ಮೊದಲು ರೈತರಿಗೆ ಪ್ರತಿವರ್ಷವೂ ತಾತ್ಕಾಲಿಕವಾಗಿ ಬೇಕಾಗುವ ಅಲ್ಪಾವಧಿಯ ಬಂಡವಾಳವನ್ನು ಸುಲಭವಾಗಿ ದೊರಕಿಸುವುದು. ಇದು ಕೊಂಚವಲ್ಲ. ಕೇಂದ್ರಬ್ಯಾಂಕಿಂಗ್ ಸಮಿತಿಯವರು ಇಡೀ ಭಾರತದೇಶದ ರೈತರಿಗೆಲ್ಲಾ ಪ್ರತಿವರ್ಷವೂ 400 ಕೋಟಿ ರೂಪಾಯಿಗಳ ತಾತ್ಕಾಲಿಕ ಸಾಲವು ಆವಶ್ಯಕವೆಂದು ಹೇಳಿದ್ದಾರೆ. ಎರಡನೆಯದಾಗಿ ರೈತರ ತಲೆಯ ಮೇಲೆ ಆರ್ಷೇಯವಾಗಿ ಬೆಳೆದುಬಂದಿರುವ 1000-1200 ಕೋಟಿ ರೂಪಾಯಿಗಳ ಸಾಲದ ಭಾರವನ್ನು ಇಳಿಸುವುದು.

ಇದಕ್ಕಾಗಿ ಸರಕಾರದವರು ಆಗಿಂದಾಗ್ಗೆ ಕೆಲವು ಶಾಸನಗಳನ್ನು ಆಚರಣೆಗೆ ತಂದಿರುವರು. ಅಂತಹ ಶಾಸನಗಳ ಮುಖ್ಯಾಂಶಗಳನ್ನು ಈ ರೀತಿಯಾಗಿ ಶೇಖರಿಸಬಹುದು. (1) ಬಡ್ಡಿಯ ದರವನ್ನು ನಿರ್ಣಯಮಾಡುವುದು. (Usurions Loans Act) ಎಂಬ ನಿಬಂಧನೆಗನುಸಾರವಾಗಿ ಬಡ್ಡಿಯ ದರದ ವಿಷಯದಲ್ಲಿ ಕೆಲವು ಏರ್ಪಾಡುಗಳನ್ನು ಮಾಡಿದ್ದಾರೆ. (2) ಆಧಾರಮಾಡಲ್ಪಟ್ಟ ಜಮೀನು ಬೇಸಾಯಗಾರರಲ್ಲದವರ ವಶಕ್ಕೆ ಹೋಗದಂತೆ ತಡೆಯುವುದು. (The Panjab Land Alienation Act) (3) ರೈತರ ಜೀವನಕ್ಕೆ ಅಗತ್ಯವಾದ ಅವರ ದನಕರುಗಳು ಬೇಸಾಯದ ಮುಟ್ಟುಗಳು ಮೊದಲಾದುವನ್ನು ಸಾಹುಕಾರರು ಜಪ್ತಿಮಾಡಲಾಗದಂತೆ ಏರ್ಪಾಡುಮಾಡುವುದು. (4) ಸಾಹುಕಾರರು ಲೆಕ್ಕದಲ್ಲಿಮೋಸಮಾಡದಂತೆ ನಿಯಮಗಳನ್ನು ಕಲ್ಪಿಸುವುದು(5)ಸಾಲತೀರಿಸಲಾರದ ರೈತರಿಗೆ ಜೈಲಿನವಾಸವನ್ನು ತಪ್ಪಿಸುವುದು (Mysore Agri. Relief Act Sec. 13) (6) ಆಧಾರವಾದ ಸ್ಥಿರಸ್ವತ್ತುಗಳನ್ನು ಹರಾಜುಮಾಡಿಸದಂತೆ ಏರ್ಪಾಡು ಮಾಡುವುದು (7) ಸಾಲವನ್ನು ಸುಲಭವಾದ ಕಂತುಗಳಲ್ಲಿ ತೀರಿಸಲು ಅನುಕೂಲಪಡಿಸುವುದು—ಮುಂತಾದುವು. ನಮ್ಮ ದೇಶದ ಅನೇಕ ಪ್ರಾಂತಗಳಲ್ಲಿ ಶಾಸನಗಳ ಮೂಲಕ ರೈತರನ್ನು ಸಾಹುಕಾರರ ಬಲೆಯಿಂದ ಬಿಡಿಸಲು

ಸರ್ಕಾರದವರು ಪ್ರಯತ್ನಪಟ್ಟಿದ್ದಾರೆ. ಆದರೆ ಈ ಶಾಸನಗಳು ಸಾಹು ಕಾರರ ಮೋಸವನ್ನಾಗಲೀ ರೈತರ ದುಂದನ್ನಾಗಲೀ ಕೊನೆಗಾಣಿಸಿಲ್ಲ.

ಮೇಲ್ಕಂಡ ಶಾಸನಗಳಲ್ಲದೆ ರೈತರ ತಾತ್ಕಾಲಿಕ ಬಂಡವಾಳಕ್ಕಾಗಿ ಹಣವನ್ನು ಒದಗಿಸಲು ಇನ್ನು ಕೆಲವು ಏರ್ಪಾಡುಗಳಾಗಿವೆ. ಬೇಸಾಯದ ಅಭಿವೃದ್ಧಿಗಾಗಿಯೂ ದನಕರುಗಳನ್ನು ಸಾಕುವುದಕ್ಕಾಗಿಯೂ ಹೊಸ ಫಲಗಳನ್ನು ಬೆಳೆಯುವುದಕ್ಕಾಗಿಯೂ ಆಗಾಗ್ಗೆ ರೈತರಿಗೆ ಸಾಲಕೊಡುವು ದುಂಟು. ಆದರೆ ಸರ್ಕಾರದವರು ಇದಕ್ಕಾಗಿ ತೆಗೆದಿಡುವ ಬಂಡವಾಳವು ಕಡಿಮೆಯಾಗಿರುವುದರಿಂದಲೂ, ಕಚೇರಿಗಳಿಂದ ಸಾಲಪಡೆಯುವುದು ಬಹು ತೊಡಕಾದುದರಿಂದಲೂ ಇದರಿಂದ ಹೆಚ್ಚು ಉಪಕಾರವಾಗುತ್ತಾ ಇಲ್ಲ.

"ಪರಸ್ಪರ ಸಹಾಯಕ ಸಂಘಗಳು ರೈತರ ಕಷ್ಟಕ್ಕೆ ರಾಮಬಾಣ" ಎಂಬ ನಾಣ್ಣುಡಿಯಿದೆ. ಲಿನ್‌ಲಿತ್ಗೊ ಕಮಿಷನ್ನಿನವರು ತಮ್ಮ ವರದಿಯ 12 ನೆಯ ಅಧ್ಯಾಯದಲ್ಲಿ "ರೈತರನ್ನು ಸಾಲದ ಶೃಂಖಲೆಯಿಂದ ತಪ್ಪಿಸುವ ಕೆಲಸವು ಪರಸ್ಪರ ಸಹಾಯಕಸಂಘಗಳಿಂದಲೇ ಆಗಬೇಕೆಂಬುದರಲ್ಲಿ ನಮಗೆ ಸ್ವಲ್ಪವೂ ಅನುಮಾನವಿಲ್ಲ." ಎಂದು ಬರೆಯುತ್ತಾರೆ. ನಮ್ಮ ಪರಸ್ಪರ ಸಹಾಯಕ ಸಂಘಗಳ ಕಾನೂನಿನಲ್ಲಿಯೂ ರೈತರ ಸಾಲವನ್ನು ಅಳಿಸುವುವೇ ಸಂಘಗಳ ಮುಖ್ಯೋದ್ದೇಶವೆಂದಿದೆ. ಕಳೆದ 30 ವರ್ಷ ಗಳಿಂದ ಸಂಘಗಳೂ ಬೆಳೆಯುತ್ತಿವೆ; ಬಂಡವಾಳವೂ ಹೆಚ್ಚುತ್ತಿದೆ. ಆದರೆ ರೈತರ ಸಾಲವು ಮಾತ್ರ ಇಳಿದಿಲ್ಲ. ಅಲ್ಲದೆ ಸಂಘಗಳ ಕೆಲಸವನ್ನು ಪರೀ ಕ್ಷಿಸಿದರೆ ಅವು ರೈತರ ಸಾಲವನ್ನು ಇಳಿಸಿಯಾವೆ ಎಂಬ ಸಂಶಯವೂ ಬರುತ್ತಿದೆ. ಕೆಲವು ಅಂಕಿಗಳನ್ನು ನೋಡಿ.

1928-29 ರಲ್ಲಿ ರೈತರಿಗೇ ಅನ್ವಯವಾಗುವ ಸಂಘಗಳು 83189 ಇದ್ದವು. ಅವುಗಳಲ್ಲಿ 81009 ಮಾತ್ರ ಸಾಲಕೊಡುವ ಸಂಘಗಳು. ಇವು ಗಳ ಬಂಡವಾಳವು 323748713 ರೂಪಾಯಿಗಳು ಮಾತ್ರ. ಸದಸ್ಯರು 3004026.[13] ಲಿನ್‌ಲಿತ್ಗೊ ಕಮಿಷನ್ನಿನವರೂ ಕೂಡ ನಮ್ಮ ಹಳ್ಳಿ

ಗಳಲ್ಲಿ ಅಲ್ಪಮಂದಿ ಮಾತ್ರ ಪರಸ್ಪರ ಸಹಾಯಕ ಸಂಘಗಳಿಂದ ಉಪಯೋಗವನ್ನು ಪಡೆಯುತ್ತಿದ್ದಾರೆಂದು ಬರೆಯುತ್ತಾರೆ.[14] ಕೇಂದ್ರ ಬ್ಯಾಂಕಿಂಗ್ ಸಮಿತಿಯವರ ವರದಿಯ 9 ನೆಯ ಅಧ್ಯಾಯದಿಂದ ಆರಿಸಿರುವ ಕೆಳಗಿನ ಅಂಕಿಗಳು ಪರಸ್ಪರ ಸಹಾಯಕ ಸಂಘಗಳ ಅಶಕ್ತಿಯನ್ನು ಇನ್ನೂ ಸ್ಪಷ್ಟಪಡಿಸುವುವು.

| ಪ್ರಾಂತ | | ಬೇಸಾಯಗಾರರಿಗೆ ಬೇಕಾಗುವ ತಾತ್ಕಾಲಿಕಸಾಲ | | ಪ. ಸ. ಸಂಘಗಳು ಒದಗಿಸಿದುದು |
|---|---|---|---|---|
| ಬೊಂಬಾಯಿ | .... | 3250 ಲಕ್ಷ | .... | 220 ಲಕ್ಷ |
| ಪಂಜಾಬು | .... | 52 ಅಥವಾ 65 ಕೋಟಿ | | ಅತ್ಯಲ್ಪ ಪ್ರಮಾಣ |
| ತಂಜಾವೂರುಜಿಲ್ಲೆ | | $3\frac{1}{2}$ ಕೋಟಿ | .... | $17\frac{1}{2}$ ಲಕ್ಷ |

ಸಾಮಾನ್ಯಪರಸ್ಪರ ಸಹಾಯಕ ಸಂಘಗಳು ರೈತರ ಸಾಲದ ಹೊರೆಯನ್ನು ಇಳಿಸಲಾರವು ಎಂಬುದಕ್ಕೆ ಹೆಚ್ಚುಪ್ರಮಾಣವು ಅನಾವಶ್ಯಕ. ದೀರ್ಘಾವಧಿಯ ಸಾಲವನ್ನು ಕೊಡುವುದಕ್ಕೆ ಅಂತಹ ಸಂಘಗಳಿಂದ ಸಾಧ್ಯವಾಗದು. ಇದಕ್ಕಾಗಿಯೇ ಜಮೀನು ಅಡಮಾನದ ಬ್ಯಾಂಕುಗಳೆಂಬ (Land Mortgage Banks) ಹೊಸಸಂಸ್ಥೆಗಳನ್ನು ಸ್ಥಾಪಿಸುತ್ತಿದ್ದಾರೆ. ಬ್ಯಾಂಕಿಂಗ್ ವರದಿಯ ಸಲಹೆಯನ್ನನುಸರಿಸಿ ಈ ಹೊಸ ಸಂಸ್ಥೆಗಳೂ ಪರಸ್ಪರ ಸಹಾಯಕ ಸಂಘಗಳ ತತ್ವವನ್ನೇ ಅವಲಂಬಿಸಿವೆ. ರೈತರಿಗೆ ಸಾಲವನ್ನು ತೀರಿಸಲು ಸಹಾಯಮಾಡುವುದೇ ಇವುಗಳ ಮುಖ್ಯೋದ್ದೇಶ. 1931 ನೆಯ ಇಸವಿಯ ಅಂತ್ಯದವರೆಗೆ ಎಲ್ಲ ಅಡಮಾನದ ಬ್ಯಾಂಕುಗಳ ಬಂಡವಾಳವನ್ನೂ ಸೇರಿಸಿದರೆ 32 ಲಕ್ಷ ರೂಪಾಯಿಗಳಾಗುತ್ತಿತ್ತು. ಕಳೆದ 5 ವರ್ಷಗಳಿಂದಲೂ ಈ ಸಂಸ್ಥೆಗಳು ಬೆಳೆಯುತ್ತಿವೆ. ಆದರೂ ಸಾವಿರಕೋಟಿಯ ಸಾಲವೆಲ್ಲಿ? ಈ ಅಡಮಾನದ ಬ್ಯಾಂಕುಗಳ ಅಲ್ಪ ಬಂಡವಾಳವೆಲ್ಲಿ? ಹೊಳೆಯಲ್ಲಿ ಹುಣಿಸೇಹಣ್ಣು ಕಿವಿಚಿದಹಾಗೆ.

ಸಾಮಾನ್ಯಪರಸ್ಪರ ಸಹಾಯಕ ಸಂಘಗಳಾಗಲಿ, ಅಡಮಾನದ ಬ್ಯಾಂಕುಗಳಾಗಲಿ ರೈತರ ಹೊರೆಯನ್ನು ಇಳಿಸಬೇಕೆಂದರೆ ಪ್ರಳಯಕಾಲದ ವರೆಗೂ ಕಾಯಬೇಕಾಗುವುದು. (ಪರಸ್ಪರ ಸಹಾಯಕ ಸಂಘಗಳಿಂದ ರೈತನಿಗೆ ಹೆಚ್ಚಾದ ಪ್ರಯೋಜನವುಂಟು. ಅದನ್ನು ಪ್ರತ್ಯೇಕವಾಗಿ ವಿಮರ್ಶಿಸಿರುವೆವು). ಈಗಿರುವ ಸ್ಥಿತಿಯಲ್ಲಿ ನಮ್ಮ ರೈತರು ತಮ್ಮ ತಲೆಯ ಮೇಲಿರುವ ಸಾಲದ ಹೊರೆಯನ್ನು ಎಂದೆಂದಿಗೂ ಇಳಿಸಲಾರರೆಂಬುದು ಸ್ಪಷ್ಟವಾಗುತ್ತಿದೆ. ಪ್ರತಿಯೊಬ್ಬ ಸಾಲಗಾರನ ಹೊಟ್ಟೆಬಟ್ಟೆಗೂ ಆಗಿ ಏನಾದರೂ ಹಣ ಮಿಕ್ಕರೆತಾನೆ ಸಾಲ ತೀರಿಸುವುದು ? ನಮ್ಮ ರೈತರ ಸಂಪಾದನೆಯು ಅವರ ಹೊಟ್ಟೆ ಬಟ್ಟೆಗಳಿಗೇ ಸಾಲದೆಂಬುದು ಸರ್ವವಿದಿತವಾಗಿದೆ. ಸರ್ಕಾರದವರೂ ಪರಸ್ಪರ ಸಹಾಯಕ ಸಂಘಗಳೂ ಅಡಮಾನದ ಬ್ಯಾಂಕುಗಳೂ ಇನ್ನೂ ಉತ್ಸಾಹದಿಂದ ಕೆಲಸಮಾಡಿದರೆ ರೈತರಿಗೆ ತಾತ್ಕಾಲಿಕವಾಗಿ ಬೇಕಾಗುವ ಸಾಲದ ಬಹು ಭಾಗವನ್ನು ಮಾತ್ರ ಒದಗಿಸಬಲ್ಲುವು; ಅಂದರೆ ಈಗಿರುವ ಆರ್ಜೀಯವಾದ ಸಾಲದ ಹೊರೆಯನ್ನು ಎಂದಿಗೂ ಇಳಿಸಲಾರವೆಂದು ಸಿದ್ಧವಾಯಿತು. ಅಳಿಸದಿದ್ದರೆ ರೈತರು ಉಳಿಯಲಾರರು. ಈ ತೊಡಕಿಗೆ ಪರಿಹಾರವೇನು ?

ಈ ತೊಡಕನ್ನು ಬಿಡಿಸಲು ಪ್ರಯತ್ನಪಡುತ್ತಿರುವ ಬಹುಮಂದಿ ಮಹನೀಯರು ಕಗ್ಗತ್ತಲೆಯ ಕೋಣೆಯಲ್ಲಿ ಸಿಕ್ಕಿ ನಿರಾಶೆಯಿಂದಿರುವರು ; ಆ ನಿರಾಶೆಯಲ್ಲಿ ಹಿಂದುಮುಂದು ತಿಳಿಯದೆ, ಅತಿ ಭೀಷಣವಾದ ಒಂದು ಸಲಹೆಯನ್ನು ಸಮಾಜದ ಮುಂದಿಟ್ಟಿರುವರು. “ರೈತರು ಸಾಲವನ್ನು ಎಂದೆಂದಿಗೂ ತೀರಿಸಲಾರರು. ಔಷಧಿಯಿಂದ ವಾಸಿಯಾಗದ ಹುಣ್ಣುಗಳಿಗೆ ಶಸ್ತ್ರಪ್ರಯೋಗಮಾಡುವಂತೆ, ಈ ಸಾಲದ ಲೆಕ್ಕವನ್ನು ಸಾಹುಕಾರರ ಕಡತಗಳಿಂದ ಅಳಿಸಿಹಾಕುವುದೊಂದೇ ಉಪಾಯ. ಸರ್ಕಾರದವರು ಶಾಸನಗಳ ಮೂಲಕ ಈ ಕೆಲಸವನ್ನು ಮಾಡಬೇಕು. ಈಗ ದಾರಿತಪ್ಪಿ ಕೊರಕಲಿನಲ್ಲಿ ಬಿದ್ದು ನರಳುತ್ತಿರುವ ರೈತರನ್ನು ಜೀವನದ

ರಾಜಮಾರ್ಗಕ್ಕೆ ಕರೆತಂದು, ಸಂಕೋಲೆಗಳನ್ನು ಕತ್ತರಿಸಿ ಮುಂದಡಿ ಯಿಡುವಂತೆ ಮಾಡಿದರೆ, ಮುಂದಾದರೂ ಅವರು ಬದುಕಬಹುದು. ಸಾಹುಕಾರರಿಗೂ ಹೆಚ್ಚು ನಷ್ಟವಿಲ್ಲ. ಏಕೆಂದರೆ ದಿವಾಳಿಯಾದ ಸಾಲಗಾರನು ಲೆಕ್ಕದ ಪುಸ್ತಕವಲ್ಲಿದ್ದರೂ ಒಂದೇ ಇಲ್ಲದಿದ್ದರೂ ಒಂದೇ."—ಎಂಬುದೇ ಅವರ ಸಲಹೆ.

ಈ ಸಲಹೆಯು ಕೆಲವರ ಮನಸ್ಸಿಗೆ ಒಪ್ಪಬಹುದು. ಆದರೆ ಇದರಿಂದ 2-3 ವಿಧವಾದ ಕಷ್ಟಗಳು ಉದ್ಭವಿಸದೆ ಇರವು. (1) ಬಹು ಕಾಲದಿಂದ ಮಿತವ್ಯಯವನ್ನು ಅಭ್ಯಾಸಮಾಡಿ ಹಣವನ್ನು ಶೇಖರಿಸಿ, ರೈತರಿಗೆ ಕಷ್ಟಕಾಲದಲ್ಲಿ ಸಾಲವನ್ನು ಕೊಟ್ಟು ಅವರನ್ನು ಕಾಪಾಡುತ್ತ ಬಂದಿರುವ ಸಾಹುಕಾರರಿಗೆ ಬಹು ಅನ್ಯಾಯವನ್ನು ಮಾಡಿದಂತಾಗುವುದು. ಸಮಾಜದಲ್ಲಿ ಮಿತವ್ಯಯಿಗೆ ಶಿಕ್ಷೆಯೂ, ದುಂದುಗಾರನಿಗೆ ರಕ್ಷೆಯೂ ದೊರೆತಂತಾಗುವುದು. (2) ರೈತರಿಗೆ ಸಾಲಕೊಟ್ಟಿರುವವರಲ್ಲಿ ಬಹುಮಂದಿ ತಾವೂ ಸಣ್ಣ ಸಣ್ಣ ರೈತರಾಗಿಯೇ ಇರುವರು. ಆದುದರಿಂದ ರೈತರಿಗೆ ಉಪಕಾರ ಮಾಡಲು ಹೋಗಿ ಅವರಲ್ಲಿಯೇ ಅನೇಕರಿಗೆ ಅಪಕಾರಮಾಡಿದಂತಾಗುವುದು. (3) ಮುಂದೆಯೂ ತಾವು ಮಾಡಬಹುದಾದ ಸಾಲವನ್ನು ತೀರಿಸದಿರುವುದೇ ಉತ್ತಮವೆಂದು ರೈತರಿಗೆ ತಿಳಿದು ಅವರಲ್ಲಿ ದುಂದುಗಾರಿಕೆಯು ಇನ್ನೂ ಬೆಳೆಯಬಹುದು. ಸಾಲದ ಶೃಂಖಲೆಯಿಂದ ಬಿಡಿಸಲ್ಪಟ್ಟ ರೈತರು ಪುನಃ ಸಾಲಮಾಡುವುದಿಲ್ಲವೆಂದಾಗಲೀ, ಸಾಲಮಾಡಿದರೆ ಸದ್ವಿನಿಯೋಗಕ್ಕಾಗಿ ಸಾಲಮಾಡುವರೆಂದಾಗಲೀ ಯಾರುತಾನೆ ಧೈರ್ಯವಾಗಿ ಹೇಳಬಲ್ಲರು?

ಅಂತರರಾಷ್ಟ್ರೀಯ ವ್ಯವಹಾರದಲ್ಲಿ ಸಾಲಗಾರರು ತಮ್ಮ ಸಾಲವನ್ನು ತೀರಿಸಲಾರೆವೆಂದು ಹೇಳಿ ಲೆಕ್ಕವನ್ನು ಅಳಿಸುವ ಸಂಪ್ರದಾಯವು ಪ್ರಬಲವಾಗುತ್ತಿದೆ. ಜರ್ಮನಿಯ ಮೇಲೆ ಮಿತ್ರಮಂಡಲಿಯವರು ಹೊರಿಸಿದ್ದ ಅಗಾಧವಾದ ಸಾಲವನ್ನು ಜರ್ಮನಿಯು ಕೊಡಲಾರೆನೆಂದಿತು.

ಇತರ ರಾಷ್ಟ್ರಗಳು ಅಮೆರಿಕದ ಸಂಯುಕ್ತ ಸಂಸ್ಥಾನಕ್ಕೆ ಕೊಡಬೇಕಾದ ಹಣವನ್ನು ಕೊಡುವುದಿಲ್ಲವೆಂದುವು. ಹೀಗಿರುವಲ್ಲಿ ನಮ್ಮ ರೈತರು ಮಾತ್ರ ಹೊರಲಾರದ ಸಾಲವನ್ನು ಏಕೆ ಹೊರಬೇಕು ಎಂದು ವಾದಿಸಬಹುದು. ಆದರೆ ಬಲಾತ್ಕಾರವಾಗಿ ಒಮ್ಮೆಯೇ ರೈತರ ಸಾಲವನ್ನು ಅಳಿಸಿಹಾಕುವು ದರಿಂದ ಹೆಚ್ಚು ಪ್ರಯೋಜನವಿಲ್ಲವೆಂಬುದು ನಮಗೆ ಗೋಚರವಾಗದಿರದು.

"ಸಾಲವನ್ನು ಸಂಪೂರ್ಣವಾಗಿ ಅಳಿಸುವುದು ಬೇಡ. ಸಾಹುಕಾ ರನು ರೈತನಿಗೆ ರಿಯಾಯಿತಿಯನ್ನು ತೋರಿಸಲಿ. ಇದಕ್ಕಾಗಿ ಸರ್ಕಾರದ ವರು ಕೆಲವು ನಿಬಂಧನೆಗಳನ್ನು ಮಾಡಲಿ. ಪ್ರತಿ ಪ್ರಾಂತವಲ್ಲಿಯೂ ಪಂಚಾಯಿತರನ್ನು ನೇಮಿಸಲಿ. ಆ ಪಂಚಾಯಿತರು (Conciliation Boards) ರೈತರನ್ನೂ ಸಾಹುಕಾರರನ್ನೂ ನೇರಿಸಿ ಲೆಕ್ಕಪತ್ರಗಳನ್ನೆಲ್ಲ ಕೂಲಂಕಷವಾಗಿ ವಿಮರ್ಶಿಸಿ ಸಾಹುಕಾರರು ಹೆಚ್ಚು ರಿಯಾಯಿತಿಯನ್ನು ತೋರಿಸುವಂತೆ ಪ್ರೇರೇಪಿಸಲಿ" ಎಂಬ ಸಲಹೆಯೊಂದಿದೆ. ಒಂದಲ್ಲ ಒಂದು ರೂಪದಲ್ಲಿ ಅನೇಕ ಪ್ರಾಂತಗಳ ಸರ್ಕಾರದವರು ಈ ಬಗೆಯ ಶಾಸನಗಳನ್ನು ಜಾರಿಗೆ ತರುತ್ತಿದ್ದಾರೆ. ಮೈಸೂರಿನಲ್ಲಿಯೂ ಇಂತಹ ಪಂಚಾಯತಿಗಳನ್ನು ನಿರ್ಮಿಸಬೇಕೆಂಬ ಪ್ರಯತ್ನವು ನಡೆಯುತ್ತಿದೆ.

ಈ ಪದ್ಧತಿಯು ಹೆಚ್ಚಾಗಿ ಆಚರಣೆಗೆ ಬಂದಿರುವುದು ಮಧ್ಯಪ್ರಾಂ ತದಲ್ಲಿ. ಕಳೆದ ಎರಡು ಮೂರು ವರ್ಷಗಳಿಂದಲೂ ಇಂತಹ ಪಂಚಾಯ ತಿಗಳು ಕೆಲಸಮಾಡುತ್ತಿವೆ. 1934 ನೆಯ ಆಗಸ್ಟ್ ಕೊನೆಯ ವೇಳೆಗೆ 12833000 ರೂಪಾಯಿಗಳ ಸಾಲವನ್ನು 7065000 ರೂಪಾಯಿಗಳಿಗೆ ಇಳಿಸಿದ್ದರು. ಎಂದರೆ ಸಾಹುಕಾರರು ರೈತರಿಗೆ ನೂರರಲ್ಲಿ 44 ರಷ್ಟು ರಿಯಾಯಿತಿಯನ್ನು ತೋರಿಸಿದಂತಾಯಿತು. ಇದಲ್ಲದೆ ಸುಮಾರು 2108 ಜನ ಸಾಹುಕಾರರು ಈ ವಿಧವಾದ ರಾಜಿಗೆ ಒಪ್ಪಲಿಲ್ಲವೆಂದು ಸರ್ಟಿಫಿಕೈ ಮಾಡಿರುವರು. ಹೀಗೆ ರಾಜಿಗೆ ಒಪ್ಪದಿರುವ ಸಾಹುಕಾರರು ದಾವಾ ಮಾಡಿದಲ್ಲಿ ಕೋರ್ಟು ಖರ್ಚು ಅವರ ಮೇಲೆಯೇ ಬೀಳುವುದು. ಮತ್ತು

ಸರ್ಟಿಫೈ ಆದ ದಿವಸದಿಂದ ಶೇಕಡ 6 ಕ್ಕೆ ಮಿಗಿಲಾಗಿ ಬಡ್ಡಿಯು ಸಿಕ್ಕು ವುದಿಲ್ಲ.

ಇಂತಹ ಸಮಿತಿಗಳಿಂದ ಉಪಯೋಗವುಂಟೆಂಬುದರಲ್ಲಿ ಭಿನ್ನಾಭಿ ಪ್ರಾಯವಿಲ್ಲ. ಆದರೂ ಒಂದೆರಡು ವಿಷಯಗಳನ್ನು ಮರೆಯಲಾಗದು. (1) ಸಾಹುಕಾರರು ಸ್ವಲ್ಪ ರಿಯಾಯಿತಿಯನ್ನು ತೋರಿಸಿದರೂ ಉಳಿಕೆ ಯಾದ ಹಣವನ್ನು ರೈತರು ಕೊಡುವುದೆಂತು ? ಭವನಗರದಲ್ಲಿ ಪ್ರಭಾ ಶಂಕರಪಟ್ಟಣಿಯವರು ಅಲ್ಲಿಯ ರೈತರ ಸಾಲವನ್ನು 85 ಲಕ್ಷ ರೂಪಾಯಿ ಗಳಿಂದ 21 ಲಕ್ಷಕ್ಕೆ ಇಳಿಸಿ, ಸಂಸ್ಥಾನದ ಬೊಕ್ಕಸದಿಂದ ಆ ಸಾಲವನ್ನು ತೀರಿಸಿ, ರೈತರಿಂದ ಕಂದಾಯದ ರೀತಿಯಲ್ಲಿ ಸಾಲದ ಹಣವನ್ನು ವಸೂಲು ಮಾಡುವ ಯೋಚನೆಯನ್ನು ಜಾರಿಗೆ ತಂದರು. ಉಳಿದ ಸಂಸ್ಥಾನಗ ಳಲ್ಲೂ ಈ ಮಾರ್ಗವನ್ನು ಅನುಸರಿಸಲಾಗುವುದೇ ? ಅಥವಾ ಜಮೀನು ಅಡಮಾನದ ಬ್ಯಾಂಕುಗಳು ಈ ಹೊರೆಯನ್ನು ಹೊರಬಲ್ಲವೊ ? ಅಂತೂ ರೈತರಿಗೆ ಅತಿಸುಲಭವಾದ ಕಂತುಗಳಲ್ಲಿ ಸಾಲತೀರಿಸಲು ಅನುಕೂಲಪಡಿಸಿ ಕೊಡಬೇಕು. (2) ಮಧ್ಯಪ್ರಾಂತದ ಶಾಸನದ ಪ್ರಕಾರ ಸಾಹುಕಾರರು ಇಷ್ಟಪಡದಿದ್ದರೆ ಈ ಪಂಚಾಯತಿಗಳು ಯಾವ ಕೆಲಸವನ್ನೂ ಮಾಡ ಲಾರವು. ಆದುದರಿಂದ ಸಾಹುಕಾರರನ್ನು ಬಲಾತ್ಕರಿಸಲು ಶಾಸನದಲ್ಲಿ ಅವಕಾಶವಿರಬೇಕು. ಹೀಗೆ ಮಾಡಿದಲ್ಲಿ ರೈತರಿಗೆ ಬಹುಮಟ್ಟಿಗೆ ಸಹಾಯ ವಾಗುವುದು. "ರೈತರಿಗೆ ಸುಲಭವಾದ, ದಯೆಯುಳ್ಳ, ಪ್ರಾಮಾಣಿಕ ವಾದ ಒಂದು ನ್ಯಾಯಸ್ಥಾನವು ದೊರೆತಂತಾಗುವುದು." ಆದರೆ ಈ ಮಾರ್ಗದಿಂದಲೇ ರೈತರ ಸಾಲದ ಸಮಸ್ಯೆಯು ಸಂಪೂರ್ಣವಾಗಿ ಬಗೆ ಹರಿಯುವುದೆಂದು ಎಣಿಸುವುದು ಮೂಢತನ.

ಒಟ್ಟಿನಲ್ಲಿ ರೈತರ ಕಷ್ಟವು ನಿವಾರಣೆಯಾಗಲು (1) ಅವರ ಸಂಪಾ ದನೆಯನ್ನು ಹೆಚ್ಚಿಸುವ ಸರ್ವಪ್ರಯತ್ನವನ್ನೂ ನಡೆಯಿಸುವುದು. (2) ಅವರ ಖರ್ಚು ಮಿತವಾಗುವಂತೆ ಅವರಿಗೆ ತಿಳುವಳಿಕೆಯನ್ನು ಕೊಡುವುದು.

(3) ಅವರ ಸಾಲದ ಹೊರೆಯನ್ನು ಇಳಿಸಲು ಎಲ್ಲಾ ಮಾರ್ಗಗಳನ್ನೂ ಅನುಸರಿಸುವುದು—ಎಂಬ ಕೆಲಸಗಳೆಲ್ಲವೂ ಏಕಕಾಲದಲ್ಲಿಯೇ ನಡೆಯ ಬೇಕು. ಇಲ್ಲವಾದರೆ ನಮ್ಮ ಜನಜೀವನದಲ್ಲಿ ಮಹಾಕ್ರಾಂತಿಯಾಗು ವುದು ಎಂಬುದರಲ್ಲಿ ಸಂಶಯವಿಲ್ಲ.



# ೧೦. ಪರಸ್ಪರ ಸಹಾಯಕಸಂಘಗಳು



ಗ್ರಾಮಾಭ್ಯುದಯ ಕಾರ್ಯದಲ್ಲಿ ನಿರತರಾಗಿರುವ ಅನೇಕ ಮಹ ನೀಯರು ಗ್ರಾಮದ ಸಕಲವಿಧವಾದ ಕೊರತೆಗಳಿಗೂ ಪರಸ್ಪರ ಸಹಾಯಕ ಸಂಘಗಳೇ ರಾಮಬಾಣವೆಂದು ಒತ್ತಿ ಒತ್ತಿ ಹೇಳುತ್ತಿದಾರೆ.[1] ರೈತರ ಸಾಲವನ್ನು ತೀರಿಸುವುದಕ್ಕಾಗಲೀ, ಚದರಿಹೋಗಿರುವ ಜಮೀನಿನ ತಾಕು ಗಳನ್ನು ಒಟ್ಟುಗೂಡಿಸುವುದಕ್ಕಾಗಲೀ, ಹೊಸ ಕೃಷಿಯ ಮಾರ್ಗಗಳನ್ನು ಬಳಕೆಗೆ ತರುವುದಕ್ಕಾಗಲೀ, ಬೆಳೆದ ದವಸಗಳನ್ನು ಮಾರುವುದಕ್ಕಾಗಲಿ, ಅನಾವಶ್ಯಕವಾದ ದುಂದುಗಾರಿಕೆಯನ್ನು ತಪ್ಪಿಸುವುದಕ್ಕಾಗಲೀ, ರೈತರ ವಿರಾಮಕಾಲವನ್ನು ಸದುಪಯೋಗಪಡಿಸುವುವಕ್ಕಾಗಲೀ ಒಟ್ಟಿನಲ್ಲಿ ರೈತರ ಜೀವನವನ್ನು ಉತ್ತಮವಾದ ಅಂತಸ್ತಿಗೆ ಎಳೆಯೊಯ್ಯುವುದಕ್ಕೆ ಪರಸ್ಪರ ಸಹಾಯಕಸಂಘಗಳೇ ರಾಜಮಾರ್ಗವೆಂದು ಸರ್ವರೂ ಸಮ್ಮತಿಸಿರು ವರು.[2] ನಮ್ಮ ರೈತರ ಕಷ್ಟನಿಷ್ಠುರಗಳನ್ನು ಚೆನ್ನಾಗಿ ಅರಿತವರಾದ ಮ॥ ರಾ॥ ಡಾರ್ಲಿಂಗ್‌ರವರು ಪಂಜಾಬಿನ ವಿಷಯವಾಗಿ ಹೀಗೆ ಹೇಳು ತ್ತಾರೆ. "ನಮ್ಮ ಪ್ರಾಂತದ ಎಲ್ಲ ಚಳುವಳಿಗಳಲ್ಲಿ ರೈತರಿಗೆ ಜೀವನದಾನ ಮಾಡುತ್ತಿರುವ ಅತ್ಯುತ್ತಮ ಫಲಕಾರಿಯಾದ ಚಳುವಳಿಯೆಂದರೆ ಈ ಪರಸ್ಪರ ಸಹಾಯಕಸಂಘಗಳ ಚಳುವಳಿಯೇ."[3] ಅವರು ಪಂಜಾಬಿನ ವಿಷಯವಾಗಿ ಹೇಳುವ ಮಾತು ಸ್ವಲ್ಪವೂ ಬದಲಾವಣೆಯಿಲ್ಲದೆ ಇತರ

ಪ್ರಾಂತಗಳಿಗೂ ಅನ್ವಯವಾಗುವುದು. ಪಾಶ್ಚಾತ್ಯದೇಶಗಳ ಅನುಭವವೂ ಈ ಅಭಿಮತಕ್ಕೇ ಬೆಂಬಲವನ್ನು ಕೊಡುತ್ತಿದೆ.

ಜರ್ಮನಿ, ಇಟಲಿ, ಫ್ರಾನ್ಸ್ ಮೊದಲಾದ ಅನೇಕ ದೇಶಗಳಲ್ಲಿ ನಮ್ಮ ದೇಶದಲ್ಲಿರುವಂತೆಯೇ ತೀರ ಬಡವರಾದ ರೈತರು ಬಹುಮಂದಿ ಇದ್ದರು; ಈಗಲೂ ಇದ್ದಾರೆ. ಇಂತಹ ರೈತರು ನಮ್ಮ ರೈತರಂತೆಯೇ ಬಹು ವಿಧವಾದ ಕಷ್ಟವನ್ನು ಅನುಭವಿಸುತ್ತಿದ್ದರು. ಆ ಕಷ್ಟಪರಂಪರೆಗಳ ಪರಿಹಾರಕ್ಕಾಗಿಯೇ ಪರಸ್ಪರ ಸಹಾಯಕ ಸಂಘಗಳು ಹುಟ್ಟಿದುವು. ಮೊದಲು ಸಣ್ಣ ಜರ್ಮನ್ ಪಟ್ಟಣಗಳಲ್ಲಿದ್ದ ಬಡವರಾದ ಕೈಕಸಬು ಗಾರರ ಉಪಯೋಗಾರ್ಥವಾಗಿ ಡೆಲಿಟ್ಸ್ ಪಟ್ಟಣದ ಷುಲ್ಸೆ ಎಂಬ ಒಬ್ಬ ಸರ್ಕಾರಿ ನೌಕರನು ಪರಸ್ಪರ ಸಹಾಯಕಸಂಘಗಳನ್ನು ಪ್ರಾರಂಭಿಸಿದನು. ಅದೇ ಕಾಲದಲ್ಲಿ ಎಂದರೆ 1850 ರ ಸುಮಾರಿನಲ್ಲಿ ರಾಫಿಸನ್ ಎಂಬ ಇನ್ನೊಬ್ಬ ಜರ್ಮನ್ ಸರ್ಕಾರಿ ನೌಕರನು ಹಳ್ಳಿಯವರ ಕಷ್ಟವನ್ನು ನೋಡಿ, ಅವರ ಉದ್ಧಾರಕ್ಕಾಗಿ ಹಳ್ಳಿಯ ಪರಸ್ಪರ ಸಹಾಯಕ ಸಂಘಗಳನ್ನು ಪ್ರಾರಂಭಿಸಿದನು. ಮೊದಲನೆಯ ಸಂಘವು ರೊಟ್ಟಿಯನ್ನು ತಯಾರಿಸುವ ಸಂಘವಾಗಿದ್ದಿತು. ಕೂಡಲೆ ಕಡಕೊಡುವ ಸಂಘವೂ ಪ್ರಾರಂಭವಾಯಿತು. ಕಾಲಕ್ರಮದಲ್ಲಿ ಕೃಷಿಕರ್ಮ, ವ್ಯಾಪಾರ, ಪಶುಪಾಲನೆ, ಹಾಲುಬೆಣ್ಣೆಗಳ ಶೇಖರ ಮತ್ತು ವ್ಯಾಪಾರ ಇವುಗಳಲ್ಲಿ—ಒಟ್ಟಿನಲ್ಲಿ ರೈತರ ಏಳಿಗೆಗೆ ಬೇಕಾದ ಎಲ್ಲಾ ಕಾರ್ಯಗಳಲ್ಲಿಯೂ—ನಿರತವಾಗಿರಲು ಸಂಘಗಳು ಹುಟ್ಟಿದುವು. ಇಂತಹ ಸಾವಿರಾರು ಸಂಘಗಳು, ಜರ್ಮನಿ, ಆಸ್ಟ್ರಿಯ, ಇಟಲಿ, ಸ್ವಿಟ್ಸರ್ಲೆಂಡ್, ಫ್ರಾನ್ಸ್—ಈ ದೇಶಗಳ ಹಳ್ಳಿಗಳಲ್ಲಿ ರೈತರ ಜೀವನವನ್ನು ಅತ್ಯುತ್ತಮಗೊಳಿಸಿವೆ. [1929 ನೆಯ ಜೂನ್ ತಿಂಗಳಲ್ಲಿ ಜರ್ಮನಿಯಲ್ಲಿ ಇಂತಹ ಸಂಘಗಳು 40396 ಇದ್ದವು.[4]] ಆದರೆ ಇವುಗಳಿಂದಾಗಿರುವ ಅಚ್ಚರಿಯ ಪರಿಣಾಮವು ಬಹು ಬಡವರಾದ ಐರ್ಲೆಂಡಿನ ರೈತರಲ್ಲಿಯೂ, ಡೆನ್ಮಾರ್ಕಿನ ರೈತರಲ್ಲಿಯೂ ಕಂಡುಬರುವುದು. ಡೆನ್ಮಾರ್ಕಿನಲ್ಲಿ ನಮ್ಮ ನಾಡಿನಂತೆಯೇ ಸಣ್ಣ ಸಣ್ಣ

ರೈತರಿರುವರು. ಅವರ ಜಮೀನಿನ ತಾಕುಗಳೂ ಚಿಕ್ಕವು; ವಾಯುಗುಣವು ಉತ್ತಮವಾದುದಲ್ಲ; ನೆಲವು ಫಲವತ್ತಾದುದಲ್ಲ. ಆದರೂ ಪ್ರಪಂಚದ ಬೇಸಾಯಗಾರರಲ್ಲಿ, ಅದರಲ್ಲೂ ಪಶುಪಾಲಕರಲ್ಲಿ ಡೇನರು ಅದ್ವಿತೀಯ ರಾಗಿರುವರು. ಪ್ರತಿಯೊಂದು ಹಳ್ಳಿಯಲ್ಲಿಯೂ ಪರಸ್ಪರ ಸಹಾಯಕ ಸಂಘಗಳಿರುವುವು. ಪ್ರಾಯಃ ಪ್ರತಿಯೊಬ್ಬ ಡೇನನೂ ನಾಲ್ಕಾರು ಬಗೆಯ ಸಂಘಗಳಲ್ಲಿ ಸದಸ್ಯನಾಗಿರುವನು. ಇಂಗ್ಲೆಂಡಿನಲ್ಲಿ ವಿನಾ ಇತರ ಎಲ್ಲಾ ಪ್ರಾಂತಗಳಲ್ಲಿಯೂ ಪರಸ್ಪರ ಸಹಾಯಕ ಸಂಘಗಳು ಉದ್ಭವಿಸಿವೆ.

ಪರಸ್ಪರ ಸಹಾಯಕ ಸಂಘಗಳು ಎಲ್ಲೆಲ್ಲಿ ಬೇರೂರಿ ನಿಂತಿವೆಯೋ ಅಲ್ಲೆಲ್ಲ ರೈತರ ಜೀವನವು ಅತ್ಯುತ್ತಮಸ್ಥಿತಿಯನ್ನು ಹೊಂದುತ್ತಿವೆ ಎಂಬು ದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ಬಹುಕಾಲದಿಂದ ಕೆಲಸಮಾಡುತ್ತಿರುವ ರಾಫಿರ್ಸ ಬ್ಯಾಂಕುಗಳಿಂದ ಏಳಿಗೆಗೆ ಬಂದ ರ್ಹೈ್ರ್ ನದಿಯ ಕಣಿವೆಯ ಹಳ್ಳಿಗಳನ್ನು ಕುರಿತು ಒಬ್ಬ ಗ್ರಂಥಕರ್ತನು ಹೇಳುವ ಮಾತನ್ನು ಕೇಳಿರಿ—"ರ್ಹೈ್ರ್ ನದಿಯ ತೀರದ ಹಳ್ಳಿಗಳಿಗೆ ಹೋಗಿ ನೋಡಿರಿ; ರೈತರ ಮನೆಗಳು ಎಷ್ಟು ಶುಚಿಯಾಗಿವೆ! ಎಷ್ಟು ಅನುಕೂಲವಾಗಿವೆ! ಬೇಸಾಯವು ಎಷ್ಟು ಉತ್ತಮವಾಗಿದೆ! ರೈತರು ಉತ್ತಮವಾದ ಯಂತ್ರಗಳನ್ನೂ ಉತ್ತಮ ವಾದ ಗೊಬ್ಬರಗಳನ್ನೂ ದನಕರುಗಳಿಗೆ ಉತ್ತಮವಾದ ಆಹಾರವನ್ನೂ ಸುಲಭವಾದ ಬೆಲೆಗೆ ಕೊಳ್ಳುತ್ತಿದ್ದಾರೆ; ದ್ರಾಕ್ಷಿಯ ಬೇಸಾಯದವರು ತಮ್ಮ ಹಣ್ಣುಗಳನ್ನು ಹಿಂದಿನ ಬೆಲೆಗಿಂತ ಎರಡರಷ್ಟು ಲಾಭಕ್ಕೆ ಮಾರು ತ್ತಿದಾರೆ. ಅನೇಕ ಹಳ್ಳಿಗಳಲ್ಲಿ ಎಷ್ಟೋ ಉಪವೃತ್ತಿಗಳು ಹುಟ್ಟಿವೆ; ವ್ಯಾಪಾರವು ಸುಗಮವಾಗಿ ನಡೆಯುತ್ತಿದೆ. ರೈತರ ಕತ್ತನ್ನು ಹಿಸುಕು ತ್ತಿದ್ದ ಸಾಹುಕಾರನು ಮಾಯವಾಗಿದಾನೆ. ರೈತರೇ ಬಂಡವಾಳಗಾರ ರಾಗುತ್ತಿದಾರೆ.[*]"

ಈ ಉಪಕಾರಗಳಿಗಿಂತಲೂ ಮಿಗಿಲಾಗಿ ರೈತರ ನಡೆನುಡಿಗಳಲ್ಲಿ ಆಗಿರುವ ಕ್ರಾಂತಿಯು ಎಂತಹ ನಿರಾಶಾವಾದಿಗಳನ್ನೂ ಕೂಡ ಮುಗ್ಧ

ರನ್ನಾಗಿಸದೆ ಬಿಡದು. ಮಿತವ್ಯಯ ಮತ್ತು ಪರಸ್ಪರ ಸಹಾಯಗಳೆಂಬ ಸೂರ್ಯರಶ್ಮಿಗಳು ಎಲ್ಲೆಲ್ಲಿ ಪ್ರವೇಶಿಸುತ್ತಿವೆಯೋ ಅಂತಹ ಕತ್ತಲೆಯ ಕೋಣೆಗಳಿಂದಲೂ ಅವು ರೈತರಲ್ಲಿ ಅಡಗಿರುವ ಅತ್ಯುತ್ತಮ ಗುಣಗಳನ್ನು ಬೆಳಕಿಗೆ ತರುತ್ತಿವೆ. ಸೋಮಾರಿಯು ದುಡಿಯುವವನಾಗಿರುವನು; ದುಂದುಗಾರನು ಮಿತವ್ಯಯಿಯಾಗಿರುವನು; ಕುಡುಕನು ತನ್ನ ದುರ್ಮಾರ್ಗವನ್ನು ಬಿಟ್ಟಿರುವನು; ಅನಕ್ಷರಸ್ಥನು ತಾನು ಹಣ್ಣು ಹಣ್ಣು ಮುದುಕನಾಗಿದ್ದರೂ ಉತ್ಸಾಹದಿಂದ ಅಕ್ಷರಾಭ್ಯಾಸಮಾಡುತ್ತಿರುವನು."

ಪರಸ್ಪರ ಸಹಾಯಕ ಸಂಘಗಳು ಇಷ್ಟು ಅದ್ಭುತವಾದ ಫಲವನ್ನುಂಟುಮಾಡುತ್ತಿರುವುವು ಎಂದ ಮೇಲೆ ಇದು ಹೇಗೆ ಎಂಬ ಪ್ರಶ್ನೆಯು ನಮಗೆ ಆಶ್ಚರ್ಯವನ್ನುಂಟುಮಾಡದಿರದು. ಈ ಸಂಘಗಳ ಗುಟ್ಟೇನು? ತತ್ತ್ವವೇನು? ಎಂಬುದನ್ನು ನಾವು ವಿಚಾರಿಸಬೇಕು. ವಿಚಾರಿಸಹೊರಟರೆ ಇದರ ತತ್ತ್ವವು ಎಷ್ಟು ಸರಳವಾದುದೆಂಬುದು ಗೋಚರವಾಗುವುದು. ಬಲಿಷ್ಠರಂತೆ ಅಥವಾ ಸಾಹುಕಾರರಂತೆ ರೈತರು ಒಂಟೊಂಟಿಯಾಗಿ ತಮಗೆ ಬೇಕಾದ ಸೌಕರ್ಯವನ್ನು ಒದಗಿಸಿಕೊಳ್ಳಲಾರರು; ಅವರು ಬಡವರು ಮತ್ತು ಅಜ್ಞಾನಿಗಳು; ಬಲಿಷ್ಠರೊಡನೆ ಹೋರಾಡಬೇಕಾಗಿರುವ ನಮ್ಮ ಜೀವನಸಂಗ್ರಾಮದಲ್ಲಿ ಗೆಲ್ಲುವುದು ಅವರಿಂದ ಸಾಧ್ಯವಿಲ್ಲ. ಇದಕ್ಕಾಗಿ ಬಹುಮಂದಿ ದಯಾಳುಗಳು ತಮ್ಮ ಉದಾರ ಹಸ್ತದ ಆಶ್ರಯವನ್ನು ರೈತರಿಗೆ ಕೊಟ್ಟು ಅವರನ್ನು ಬದುಕಿಸಲು ಪ್ರಯತ್ನಪಟ್ಟರು. ಆದರೆ ಈ ಬಗೆಯ ಅವ್ಯವಸ್ಥಿತವಾದ ದಾನದಿಂದ ರೈತರು ಉದ್ಧಾರವಾಗಲಿಲ್ಲ. ಏಕೆಂದರೆ ಬಹುಮಟ್ಟಿಗೆ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಬಲದಿಂದಲೇ ಬೆಳೆಯಬೇಕು. ತನ್ನ ಕಾಲಿನಮೇಲೆ ತಾನು ನಿಂತುಕೊಂಡು ಜೀವನಸಂಗ್ರಾಮದಲ್ಲಿ ಭಾಗಿಯಾಗಿ ವಿಜಯಿಯಾಗಬಹುದೇ ವಿನಾ ಇತರರ ಆಶ್ರಯದಿಂದ ಬದುಕಲಾರನು; ಏಳಿಗೆಗೆ ಬರಲಾರನು. ಆದುದರಿಂದ ಅವನನ್ನು ಬದುಕಿಸಬೇಕಾದರೆ ಅವನಿಗೆ ಸ್ವಸಾಮರ್ಥ್ಯದಲ್ಲಿ

ನಂಬುಗೆಯನ್ನು ಹುಟ್ಟಿಸಬೇಕು. ಸ್ವಸಾಮರ್ಥ್ಯಾವಲಂಬನವೇ ಪರಸ್ಪರ ಸಹಾಯಕ ಸಂಘಗಳ ಮೂಲತತ್ತ್ವ. ಏಕೆಂದರೆ ಪ್ರತಿಯೊಬ್ಬ ವ್ಯಕ್ತಿಯೂ ತನ್ನಲ್ಲಿರುವ ಅಲ್ಪಸ್ವಲ್ಪ ಹಣವನ್ನೂ ಜ್ಞಾನವನ್ನೂ ಇತರರ ಹಣ ಮತ್ತು ಜ್ಞಾನದೊಡನೆ ಬೆರೆಯಿಸಿ ತನ್ನ ಕಷ್ಟವನ್ನು ಪರಿಹಾರ ಮಾಡಿಕೊಳ್ಳಲು ಪ್ರಯತ್ನಿಸಿದರೆ ಇತರರ ಆಶ್ರಯದಿಂದ ಲಭಿಸುವ ಸುಖಕ್ಕಿಂತಲೂ ನೂರ್ಮಡಿಯಾದ ಸುಖವೂ, ಲಾಭವೂ ಉಂಟು. ಹನಿಗೂಡಿದರೆ ಹಳ್ಳ, ತೆನೆಗೂಡಿದರೆ ಭತ್ತ; ಇದೇ ಪರಸ್ಪರ ಸಹಾಯಕ ಸಂಘಗಳ ಮೂಲತತ್ತ್ವ.

ಬ್ರಿಟಿಷರು ನಮ್ಮ ದೇಶದಲ್ಲಿ ಸ್ಥಿರವಾಗಿ ನೆಲಸಿದ ಸ್ವಲ್ಪಕಾಲದಲ್ಲಿಯೇ ಅವರಲ್ಲಿ ಕೆಲವರು ನಮ್ಮ ರೈತರ ಕಷ್ಟನಿಷ್ಠುರಗಳ ಕಡೆಗೆ ತಮ್ಮ ಕಟಾಕ್ಷವನ್ನು ಬೀರಿದರು. ಕಷ್ಟನಿವಾರಣೆಗಾಗಿ ಅನೇಕ ಉಪಾಯಗಳನ್ನು ಹುಡುಕಿದರು. ರೈತರಿಗೆ ಸರಕಾರದವರೇ ಸ್ವಲ್ಪಮಟ್ಟಿಗೆ ಸಾಲಕೊಡಲು ಪಕ್ರಮಿಸಿದರು. ಸಾಹುಕಾರರ ಬಲೆಗೆ ಸಿಕ್ಕಿದ ರೈತರನ್ನು ಸಾಹುಕಾರರು ನುಂಗಿಬಿಡದಂತೆ ಕಾನೂನುಗಳನ್ನು ತಯಾರಿಸಿದರು. ರೈತರು ಹಣವನ್ನು ಸ್ವಲ್ಪಸ್ವಲ್ಪವಾಗಿ ಶೇಖರಿಸಿ ಇಟ್ಟುಕೊಳ್ಳಲು ಅನುಕೂಲವಾಗುವಂತೆ ಪೋಸ್ಟಲ್ ಸೇವಿಂಗ್ಸ್ ಬ್ಯಾಂಕುಗಳನ್ನು ಸ್ಥಾಪಿಸಿದರು. ಆದರೆ ಇವುಗಳೆಲ್ಲವೂ ಬೆಳವಣಿಗೆಯ ಮುಖ್ಯ ತತ್ತ್ವವಾದ ಆತ್ಮಾವಲಂಬನ ಪದ್ಧತಿಯನ್ನು ಅನುಸರಿಸಲಿಲ್ಲವಾದುದರಿಂದ ಇವುಗಳಿಂದ ಹೆಚ್ಚು ಪ್ರಯೋಜನವಾಗಲಿಲ್ಲ.

ಈ ಮಧ್ಯೆ ರೈತರ ಕಷ್ಟಪರಂಪರೆಗಳು ಬೆಳೆಯುತ್ತಲೇ ಬಂದುವು. ಅನೇಕರು ಪರಸ್ಪರ ಸಹಾಯಕ ಸಂಘಗಳನ್ನು ಸ್ಥಾಪಿಸಲೇ ಬೇಕೆಂದು ವಾದಮಾಡಹತ್ತಿದರು. ಮದರಾಸು ಸರ್ಕಾರದವರ ಪರವಾಗಿ ಸರ್ ಫ್ರೆಡರಿಕ್ ನಿಕಲ್‌ಸನ್ ಎಂಬುವರು ಪಾಶ್ಚಾತ್ಯದೇಶಗಳಲ್ಲಿ ಸಂಚಾರಮಾಡಿ ಅಲ್ಲಿಯ ಸಂಘಗಳ ಸ್ಥಿತಿಯನ್ನು ಕೂಲಂಕಷವಾಗಿ ವಿಮರ್ಶಿಸಿ ತಮ್ಮ

ಅಮೋಘವಾದ ವರದಿಯನ್ನು ಒಪ್ಪಿಸಿದರು (1895-97). "ನಮ್ಮ ರೈತರ ಉದ್ಧಾರಕ್ಕೆ ರಾಫೆಸರ್ಜ ಅಂತಹ ಮಹನೀಯರುಬೇಕು." ಎಂಬುದೇ ಅವರ ಮುಖ್ಯ ಸಲಹೆ. ಕ್ಷಾಮನಿವಾರಣಾ ಸಮಿತಿಯವರು 1901 ರಲ್ಲಿ ಇದೇ ಅಭಿಪ್ರಾಯವನ್ನು ಒತ್ತಿಹೇಳಿದರು. ದೂರದೃಷ್ಟಿಯುತರಾದ ಲಾರ್ಡ್ ಕರ್ಸನ್‌ರವರು 1904 ರಲ್ಲಿ ಪರಸ್ಪರ ಸಹಾಯಕ ಸಂಘದ ಕಾನೂನನ್ನು ಜಾರಿಗೆ ತಂದುದಲ್ಲದೆ ಅನೇಕ ಪ್ರಾಂತಗಳಲ್ಲಿ ಇದಕ್ಕಾಗಿಯೇ ಪ್ರತ್ಯೇಕ ಇಲಾಖೆಗಳನ್ನು ಸ್ಥಾಪಿಸಿದರು. ಬ್ರಿಟಿಷ್ ಇಂಡಿಯಾದಂತೆಯೇ ಬರೋಡ ಮತ್ತು ಮೈಸೂರು ಸಂಸ್ಥಾನಗಳಲ್ಲಿಯೂ ಪ್ರತ್ಯೇಕ ಇಲಾಖೆಗಳು ಸ್ಥಾಪಿತವಾದುವು. ಆದರೆ ಈ ಕಾನೂನಿನಲ್ಲಿ ಮಹತ್ತರವಾದ ಒಂದು ದೋಷವಿದ್ದಿತು. ಇದು ಬರಿಯ ಲೇವಾದೇವಿಗಳ ಸಂಘಗಳನ್ನು ಮಾತ್ರ ಅನುಮೋದಿಸಿತು. ಇತರ ವಿಧವಾದ ಸಂಘಗಳಿಗೆ ಅವಕಾಶ ವಿರಲಿಲ್ಲ ಮತ್ತು ಲೇವಾದೇವಿ ಸಂಘಗಳಿಗೆ ಹಣವನ್ನು ಒದಗಿಸಬಲ್ಲ ಕೇಂದ್ರಸಂಘಗಳ ಸ್ಥಾಪನೆಗೂ ಅವಕಾಶವಿರಲಿಲ್ಲ. 1912 ನೆಯ ಇಸವಿಯಲ್ಲಿ ಜಾರಿಗೆ ಬಂದ ಬೇರೊಂದು ಕಾನೂನು ಈ ದೋಷವನ್ನು ಪರಿಹರಿಸಿತು. ಲೇವಾದೇವಿ ಸಂಘಗಳಿಗಿಂತಲೂ ಹೆಚ್ಚು ಉಪಯೋಗವುಳ್ಳ ಇತರ ಬಗೆಯ ಸಂಘಗಳನ್ನು ಜಾರಿಗೆ ತರಲು ಅನುಕೂಲವಾಯಿತು. ಕೇಂದ್ರಸಂಘಗಳಿಗೂ ಅವಕಾಶವು ದೊರೆಯಿತು. 1919 ನೆಯ ಇಸವಿಯಿಂದೀಚೆಗೆ ಈ ಸಂಘಗಳ ಬೆಳವಳಿಕೆಯು ಪ್ರತಿ ಪ್ರಾಂತದಲ್ಲಿಯೂ ಪ್ರಜೆಗಳಿಂದ ಚುನಾಯಿತರಾದ ಮಂತ್ರಿಗಳ ಆಡಳಿತಕ್ಕೆ ಒಳಪಟ್ಟಿದೆ.

ಸರ್ಕಾರದವರ ಉದಾರಾಶ್ರಯ, ಉತ್ತೇಜನ ಮತ್ತು ಸಹಾಯ ಇವುಗಳ ನೆರಳಿನಲ್ಲಿ ಮೂವತ್ತು ವರ್ಷಗಳ ಹಿಂದೆ ಬಿತ್ತಲ್ಪಟ್ಟ ಬೀಜವು ಈಗಾಗಲೇ ಅತ್ಯುತ್ತಮಫಲಗಳನ್ನು ಕೊಡುತ್ತಿರುವ ದೊಡ್ಡ ಮರವಾಗಿ ನಮ್ಮ ನಾಡಿನ ಎಲ್ಲಾ ಪ್ರಾಂತಗಳಲ್ಲಿಯೂ ತನ್ನ ಶಾಖೋಪಶಾಖೆಗಳನ್ನು ಹರಡಿ ಜನಜೀವನದಲ್ಲಿ ಉತ್ಕೃಷ್ಟವಾದ ಸ್ಥಾನವನ್ನು ಪಡೆದುಕೊಂಡಿದೆ.

1908-9 ನೆಯ ಇಸವಿಯಲ್ಲಿ ಇಂಡಿಯಾದೇಶದಲ್ಲೆಲ್ಲ ಒಟ್ಟು 1500 ಸಂಘಗಳು ಮಾತ್ರ ಇದ್ದುವು. 1929-30 ರಲ್ಲಿ ಬ್ರಿಟಿಷ್ ಇಂಡಿಯ ಮತ್ತು 8-9 ಆಶ್ರಿತಸಂಸ್ಥಾನಗಳೂ ಸೇರಿ 1,04,187 ಸಂಘಗಳಿದ್ದುವು. ಅವುಗಳಲ್ಲಿ 88,693 ಸಂಘಗಳು ಬ್ರಿಟಿಷ್ ಇಂಡಿಯಾದಲ್ಲೂ, 15,494 ಸಂಘಗಳು ಆಶ್ರಿತಸಂಸ್ಥಾನಗಳಲ್ಲಿಯೂ ಇದ್ದುವು. ಪ್ರೈಮರಿ ಸೊಸೈಟಿಗಳಲ್ಲಿ ಮಾತ್ರ 41,89,904 ಸದಸ್ಯರಿದ್ದರು.[7] ಇಂತಹ ಸಂಘಗಳ ಆಡಳಿತದಲ್ಲಿ ಒಟ್ಟು 50 ಕೋಟಿ ರೂಪಾಯಿಗಳ ಬಂಡವಾಳವಿದ್ದಿತೆಂದೂ ಅದರಲ್ಲಿ 14 ಕೋಟಿ ರೂಪಾಯಿಗಳು ಸದಸ್ಯರ ಸ್ವಂತ ಹಣವೆಂಬುದಾಗಿಯೂ (ಎಂದರೆ ಷೇರ್ ಮತ್ತು ರಿಸರ್ವ್ ಫಂಡ್) ತಿಳಿಯಬರುತ್ತದೆ.[8]

ಇಂತಹ ಸೊಸೈಟಿಗಳಲ್ಲಿ ನಗರವಾಸಿಗಳ ಉಪಯೋಗಕ್ಕಾಗಿಯೇ ಇರುವ ಸೊಸೈಟಿಗಳೂ ಕೇಂದ್ರಸೊಸೈಟಿಗಳೂ ಸೇರಿವೆ. ಅವುಗಳಿಂದ ರೈತರಿಗೆ ನೇರವಾದ ಪ್ರಯೋಜನವಾವುದೂ ಇಲ್ಲ. ಆದುದರಿಂದ ಗ್ರಾಮ ಜೀವನದಲ್ಲಿ ಇಂತಹ ಸಂಘಗಳಿಗಿರುವ ಸ್ಥಾನವನ್ನು ಪರೀಕ್ಷಿಸಬೇಕಾದರೆ ರೈತರಿಗೇ ಅನ್ವಯವಾಗುವ ಸಂಸ್ಥೆಗಳ ಲೆಕ್ಕವನ್ನು ಪ್ರತ್ಯೇಕವಾಗಿ ವಿಮರ್ಶಿಸಬೇಕಾಗುವುದು.

ನಮ್ಮ ಹಳ್ಳಿಗಳಲ್ಲಿ ಅತಿ ಬಳಕೆಯಲ್ಲಿರುವ ಪರಸ್ಪರ ಸಹಾಯಕ ಸಂಘಗಳೆಂದರೆ ಕ್ರೆಡಿಟ್ ಸೊಸೈಟಿಗಳೆಂದು ಕರೆಯಲ್ಪಡುತ್ತಿರುವ ಲೇಣಾದೇಣಿ ಸಂಘಗಳು. 1926-27 ನೆಯ ಇಸವಿಯಲ್ಲಿ ಇಡೀ ಹಿಂದೂಸ್ಥಾನದಲ್ಲಿ ಇಂತಹ ಸಂಘಗಳು 65,101 ಇದ್ದುವು. ಅವುಗಳಲ್ಲಿ 2,11,576 ಸದಸ್ಯರಿದ್ದರು. ಒಟ್ಟು ಬಂಡವಾಳವು 24 ಕೋಟಿ 14 ಲಕ್ಷ ರೂಪಾಯಿಗಳು.[9] ಪಂಜಾಬು ಒಂದರಲ್ಲಿಯೇ 16,300 ಹಳ್ಳಿಯ ಬ್ಯಾಂಕುಗಳಿವೆ.[10] ಎಲ್ಲಾ ಪ್ರಾಂತಗಳಲ್ಲಿಯೂ ಇಂತಹ ಸಂಘಗಳು ಅಡ್ಡಿಯಿಲ್ಲದೆ ಬೆಳೆಯುತ್ತಿವೆ.

ರೈತರಿಗೆ ಈ ಸಂಘಗಳು ಎಷ್ಟು ಉಪಕಾರಮಾಡಿವೆ ಎಂಬುದನ್ನು ಪರೀಕ್ಷಿಸಬೇಕಾದರೆ ಈ ಸಂಘಗಳ ಸ್ಥಾಪನೆಯ ಉದ್ದೇಶವಾವುದೆಂಬು

ದನ್ನು ನಾವು ನಿರ್ಣಯಮಾಡಿಕೊಳ್ಳಬೇಕು. ಮೊದಲೇ ಹೇಳಿರುವಂತೆ ರೈತರ ತಲೆಯ ಮೇಲಿರುವ ಸಾಲದ ಹೊರೆಯನ್ನು ಇಳಿಸುವುದು, ('ರೈತರ ಸಾಲ' ಎಂಬ ಪ್ರಕರಣವನ್ನು ನೋಡಿ.) ರೈತರಲ್ಲಿ ದುಂದುವೆಚ್ಚವನ್ನು ತಪ್ಪಿಸಿ ಸ್ವಲ್ಪವಾದರೂ ಹಣವನ್ನು ಶೇಖರಿಸುವ ಸ್ವಭಾವ ಮತ್ತು ಕಾಲ ಕಾಲಕ್ಕೆ ಸಾಲವನ್ನು ಹಿಂದಿರುಗಿಕೊಡುವ ಶೀಲ, ಲೆಕ್ಕಾಚಾರವನ್ನು ಇಟ್ಟುಕೊಳ್ಳುವ ತಿಳಿವಳಿಕೆ—ಇವನ್ನು ಉಂಟುಮಾಡುವುದೇ 1904 ನೆಯ ಇಸವಿಯ ಪರಸ್ಪರ ಸಹಾಯಕ ಸಂಘಗಳ ಕಾನೂನಿನ ಮುಖ್ಯೋದ್ದೇಶಗಳಾಗಿದ್ದುವು. ಈ ಧ್ಯೇಯವು ಎಷ್ಟರಮಟ್ಟಿಗೆ ಫಲಕಾರಿಯಾಗಿದೆಯೆಂಬುದನ್ನು ನಾವು ಪರೀಕ್ಷಿಸಬೇಕು.

ಡಾರ್ಲಿಂಗ್ ಅವರು ತಮ್ಮ ಪುಸ್ತಕದಲ್ಲಿ[11] ಕೊಡುವ ಲೆಕ್ಕವನ್ನು ನೋಡಿದರೆ ಪ್ರತಿಯೊಬ್ಬ ಗ್ರಾಮಾಭಿಮಾನಿಯ ಹೃದಯವೂ ಹಿಗ್ಗುವುದೆಂಬುದರಲ್ಲಿ ಸಂದೇಹವಿಲ್ಲ. ಅವರು ಶೋಧನೆಮಾಡಿದ 2748 ವಿಲೇಜ್ ಬ್ಯಾಂಕುಗಳಲ್ಲಿ 83000 ಸದಸ್ಯರು 1 ಕೋಟಿ 58 ಲಕ್ಷ ರೂಪಾಯಿ ಸಾಲವನ್ನು ತೀರಿಸಿದುದಲ್ಲದೆ ಷೇರ್ ಮತ್ತು ರಿಸರ್ವ್‌ಫಂಡ್ ರೂಪದಲ್ಲಿ 80 ಲಕ್ಷ ರೂಪಾಯಿಗಳನ್ನು ಶೇಖರಮಾಡಿಟ್ಟುಕೊಂಡಿರುವರು. ಅಂತಹ ಸದಸ್ಯರಲ್ಲಿ ಶೇಕಡ 48 ಜನ ಸಾಹುಕಾರರ ಬಲೆಯಿಂದ ಸಂಪೂರ್ಣವಾಗಿ ತಪ್ಪಿಸಿಕೊಂಡಿರುವರು. ಸುಮಾರು 38 ಸಾವಿರ ಎಕರೆಗಳು ಆಧಾರದಿಂದ ಬಿಡುಗಡೆಹೊಂದಿರುವುವು. ಇತರ ಪ್ರಾಂತಗಳಲ್ಲಿಯೂ ಇಂತಹ ಸಂಘಗಳು ಇಷ್ಟುಮಟ್ಟಿಗೆ ಉಪಕಾರಮಾಡುತ್ತಿದ್ದಲ್ಲಿ ರೈತರ ಸಂಪೂರ್ಣ ಬಿಡುಗಡೆಯ ಕಾಲವು ಬೇಗ ಸಮೀಪಿಸುತ್ತಿದೆಯೆಂದು ಹೇಳಬಹುದಾಗಿತ್ತು. ಆದರೆ ಇತರ ಪ್ರಾಂತಗಳು ಪಂಜಾಬಿನಷ್ಟು ಮುಂದುವರಿದಿಲ್ಲ. ಪಂಜಾಬಿನಲ್ಲಿಯೂ ಪರಸ್ಪರ ಸಹಾಯಕ ಸಂಘದ ನೆರಳು ರೈತರಲ್ಲಿ ಶೇಕಡ ಹನ್ನೆರಡು ಜನಗಳಿಗೆ ಮಾತ್ರ ದೊರೆತಿರುವುದು. ಪಂಜಾಬಿನ 34 ಸಾವಿರ ಹಳ್ಳಿಗಳಲ್ಲಿ, ಅರ್ಧಕ್ಕಿಂತಲೂ ಹೆಚ್ಚು ಹಳ್ಳಿಗಳಿಗೆ ಪರಸ್ಪರ ಸಹಾಯಕಸಂಘಗಳೇ ಇಲ್ಲ.

ಈ ಕೆಳಗಿನ ಪಟ್ಟಿಯಿಂದ ಆಯಾ ಪ್ರಾಂತಗಳಲ್ಲಿ ಹಳ್ಳಿಯ ಜನಗಳು ಎಷ್ಟುರಮಟ್ಟಿಗೆ ಪರಸ್ಪರ ಸಹಾಯಕ ಸಂಘಗಳಿಂದ ಪ್ರಯೋಜನ ವನ್ನು ಹೊಂದುತ್ತಿದಾರೆಂಬುದು ವಿದಿತವಾಗುವುದು.

**ಪರಸ್ಪರ ಸಹಾಯಕಸಂಘಗಳಲ್ಲಿ ಭಾಗವಹಿಸಿರುವ ಕುಟುಂಬ ಗಳ ಸಂಖ್ಯೆ[12] (ಶೇಕಡ)**

| ಪ್ರಾಂತ | ಎಲ್ಲವಿಧವಾದ ಸಂಘಗಳಲ್ಲಿಯೂ | ಲೇವಾದೇವಿ ಸಂಘಗಳಲ್ಲಿ |
|---|---|---|
| ಅಸ್ಸಾಂ | 2.9 | 2.9 |
| ಬಂಗಾಳ | 4.4 | 3.8 |
| ಬಿಹಾರ್ ಮತ್ತು ಒರಿಸ್ಸ | 3.2 | 3.1 |
| ಬೊಂಬಾಯಿ | 10.0 | 8.7 |
| ಬರ್ಮ | 3.9 | 3.9 |
| ಮದ್ರಾಸು | 9·3 | 7.9 |
| ಪಂಜಾಬು | 10.9 | 10.2 |

[1926-27 ನೆಯ ಇಸವಿಯ ಅಂಕಿಗಳು]

ಮೈಸೂರು ದೇಶದಲ್ಲಿಯೂ ಕಳೆದ ಕಾಲುಶತಮಾನದಿಂದ ಸರ್ಕಾರದವರ ಉದಾರಾಶ್ರಯದಲ್ಲಿ ಪರಸ್ಪರ ಸಹಾಯಕ ಸಂಘಗಳು ಬೆಳೆಯುತ್ತಿವೆ. 1934-35 ರ ವೇಳೆಗೆ ನಮ್ಮ ದೇಶದಲ್ಲಿದ್ದ ಸಂಘಗಳು 1999. ಇವುಗಳಲ್ಲಿ 1,36,377 ಸದಸ್ಯರಿದ್ದರು. ಇವುಗಳಲ್ಲಿ ಸುಮಾರು 1500 ಸಂಘಗಳು ಬೇಸಾಯಗಾರರಿಗೇ ಅನ್ವಯಿಸತಕ್ಕುವು. ನಮ್ಮ ದೇಶದಲ್ಲಿರುವ 55,12,260 ಗ್ರಾಮವಾಸಿಗಳೊಡನೆಯೂ 16483 ಹಳ್ಳಿಗಳೊಡನೆಯೂ ಈ ಸಂಖ್ಯೆಗಳನ್ನು ಹೋಲಿಸಿ ನೋಡಿದರೆ ಪರಸ್ಪರ ಸಹಾಯಕ ಸಂಘಗಳು ಎಷ್ಟು ಹಿಂದುಳಿದಿವೆಯೆಂಬುದು ತಿಳಿಯುವುದು.[13] ಅದೇ ರೀತಿಯಲ್ಲಿ ನಮ್ಮ ಹಳ್ಳಿಯವರು ಕಳೆದ 30 ವರ್ಷಗಳಿಂದಲೂ ಕೂಡಿಟ್ಟಿರುವ ಬಂಡವಾಳವೆಷ್ಟೆಂಬುದನ್ನು ನೋಡಿ. 30-6-32 ರಲ್ಲಿ ಮೈಸೂರಿನ ಹಳ್ಳಿಗಳಲ್ಲಿದ್ದ

ಲೇವಾದೇವಿ ಸಂಘಗಳು 1623. ಸದಸ್ಯರು 68073. ಷೇರ್ ಮೊಬಲಗು 13,17,246 ರೂ. ರಿಸರ್ವ್‌ಫಂಡ್ 89,72,90 ರೂ. ಇಂತಹ ಸಂಘಗಳಲ್ಲಿರುವ ಡಿಪಾಜಿಟ್ ಹಣಗಳನ್ನು (ಅವು ರೈತರವೇ ಅಲ್ಲ.) ಲೆಕ್ಕಕ್ಕೆ ತೆಗೆದುಕೊಂಡರೆ ಒಟ್ಟು ಚಲಾವಣೆಯಲ್ಲಿದ್ದ 52,00,055 ರೂಪಾಯಿಗಳಲ್ಲಿ 22,14,536 ರೂಪಾಯಿಗಳು ರೈತರವೇ ಎಂದು ಹೇಳಬಹುದು.[14]

ಮೇಲ್ಕಂಡ ಅಂಕಿಗಳಿಂದ ನಮಗೆ ತಿಳಿಯಬರುವ ಮುಖ್ಯ ಅಂಶಗಳು ಯಾವುವೆಂದರೆ, (i) ಪರಸ್ಪರ ಸಹಾಯ ಸಂಘಗಳು ಹುಟ್ಟಿ 30 ವರ್ಷಗಳಾದರೂ ನಮ್ಮ ಗ್ರಾಮಗಳಲ್ಲಿ ಬಹುಮಂದಿ ಇವುಗಳಿಂದ ಪ್ರಯೋಜನವನ್ನು ಪಡೆಯುತ್ತಾ ಇಲ್ಲ. (ii) ನಮ್ಮ ರೈತರ ತಲೆಯ ಮೇಲಿರುವ ಅಸಹ್ಯವಾದ ಸಾಲದ ಹೊರೆಯನ್ನು ಸಾಮಾನ್ಯ ಪರಸ್ಪರ ಸಹಾಯಕ ಸಂಘಗಳು ಎಂದೆಂದಿಗೂ ಇಳಿಸಲಾರವು. (iii) ಇದುವರೆಗೂ ಪರಸ್ಪರ ಸಹಾಯಕ ಸಂಘಗಳು ಜನಗಳಲ್ಲಿ ಕಾಲಕಾಲಕ್ಕೆ ಹಣವನ್ನು ಪಾವತಿಮಾಡುವ ಅಭ್ಯಾಸವನ್ನಾಗಲೀ, ಬಿಗಿಹಿಡಿದು ಸಾಲಮಾಡುವ ಅಭ್ಯಾಸವನ್ನಾಗಲೀ ವಿಶೇಷವಾಗಿ ಬಳಕೆಗೆ ತಂದಿಲ್ಲ. [ಈ ಸಂದರ್ಭದಲ್ಲಿ ಮೈಸೂರು ಪರಸ್ಪರ ಸಹಾಯಕ ಸಂಘಗಳ ಇಲಾಖೆಯ ವಾರ್ಷಿಕವರದಿಯಿಂದ ಆರಿಸಿರುವ ಈ ಅಂಕಿಗಳು ಉಪಯೋಗಕ್ಕೆ ಬರುವುವು. 1931-32 ರ ವೇಳೆಗೆ ಪರಸ್ಪರ ಸಹಾಯಕ ಸಂಘಗಳು ರೈತರಿಗೆ ಕೊಟ್ಟಿದ್ದ ಒಟ್ಟು ಸಾಲವು 1,02,65,535 ರೂಪಾಯಿಗಳು. ಅವುಗಳಲ್ಲಿ ಬೇಸಾಯದ ಅಭಿವೃದ್ಧಿಗೆ ಮತ್ತು ಮನೆಯನ್ನು ಕಟ್ಟುವುದಕ್ಕಾಗಿ ಮಾಡಿದ ಸಾಲ 34,34,423 ರೂಪಾಯಿಗಳು. ಹಳೆಯ ಸಾಲವನ್ನು ತೀರಿಸಲು 15,64,725 ರೂಪಾಯಿಗಳು. ಲಾಭದಾಯಕವಲ್ಲದ ಇತರ ಕೆಲಸಗಳಿಗಾಗಿ 52,66,387 ರೂಪಾಯಿಗಳು. ಎಂದರೆ ರೈತರು ಮಾಡಿದ್ದ ಸಾಲದಲ್ಲಿ ಶೇಕಡ 51.4 ರಷ್ಟು ಮದುವೆ, ಮುಂಜಿ, ಉತ್ತರಕ್ರಿಯೆ, ದಿನಚರಿಯ ಖರ್ಚು ಮೊದಲಾದ ಲಾಭದಾಯಕವಲ್ಲದ ಕಾರಣಗಳಿಗಾಗಿ ಮಾಡಿದುದು.[15]]

ಸಾಮಾನ್ಯ ಲೇವಾದೇವಿಯ ಸಂಘಗಳು ರೈತರಿಗೆ ಬೇಕಾಗುವ ದೀರ್ಘಾವಧಿಯ ಸಾಲವನ್ನು ಒದಗಿಸಿಕೊಡಲಾರವು. ಕೊನೆಯ ಪಕ್ಷ ಮೂರು ವರ್ಷಕ್ಕೆ ಮೀರಿದ ಸಾಲವನ್ನು ಇಂತಹ ಸಂಘಗಳು ಕೊಡಲಾರ ವೆಂದು ಕೇಂದ್ರ ಬ್ಯಾಂಕಿಂಗ್ ಸಮಿತಿಯ ವರದಿಯು ಸಾರುತ್ತದೆ. ಆದು ದರಿಂದಲೇ ಜಮೀನು ಅಡಮಾನದ ಬ್ಯಾಂಕುಗಳನ್ನು ಸ್ಥಾಪಿಸಬೇಕೆಂಬ ಕೂಗು ಎಲ್ಲೆಲ್ಲಿಯೂ ಕೇಳಬರುತ್ತಿವೆ. ರೈತರ ಅಪಾರವಾದ ಸಾಲದ ಹೊರೆಯನ್ನಿಳಿಸುವುದಕ್ಕೂ ಜಮೀನಿನ ಆಬಾದಿಗೂ ಬೇಕಾಗುವ ದೀರ್ಘಾವಧಿಯ ಸಾಲವನ್ನು ಒದಗಿಸುವುದೇ ಇಂತಹ ಬ್ಯಾಂಕುಗಳ ಉದ್ದೇಶ. ಪರಸ್ಪರ ಸಹಾಯತತ್ತ್ವವನ್ನು ಅಂಗೀಕಾರಮಾಡಿಕೊಂಡಿ ರುವ ಜಮೀನು ಅಡಮಾನದ ಬ್ಯಾಂಕುಗಳು ನಮ್ಮ ನಾಡಿನಲ್ಲಿ ಹಬ್ಬು ತ್ತಿವೆ. ಈಗ ಪಂಜಾಬಿನಲ್ಲಿ ಈ ಬಗೆಯ ಹನ್ನೆರಡು ಬ್ಯಾಂಕುಗಳಿವೆ. ಬೊಂಬಾಯಿಯಲ್ಲಿ ಮೂರು; ಬಂಗಾಳವಲ್ಲಿ ಎರಡು; ಅಸ್ಸಾಮಿನಲ್ಲಿ ಐದು ಬ್ಯಾಂಕುಗಳಿವ. ಮದರಾಸಿನಲ್ಲಿ ಇಂತಹ ಬ್ಯಾಂಕುಗಳು ವಿಶೇಷವಾಗಿ ಬಳಕೆಗೆ ಬರುತ್ತಿವೆ; ಒಂದು ಕೇಂದ್ರ ಬ್ಯಾಂಕೂ ಮೂವತ್ತೆಂಟು ಪ್ರಾಥಮಿಕ ಬ್ಯಾಂಕುಗಳೂ ಇವೆ.[16] ಮೈಸೂರು ದೇಶದಲ್ಲಿ ಒಂದು ಕೇಂದ್ರ ಅಡಮಾನದ ಬ್ಯಾಂಕು ಸ್ಥಾಪಿತವಾಗಿದೆ. ಸರ್ಕಾರದವರು ಸವ್ಯಃ ಸಂಸ್ಥಾನವ ಇಪ್ಪತ್ತೈದು ತಾಲ್ಲೂಕುಗಳಲ್ಲಿ ಈ ಬ್ಯಾಂಕಿನ ಮೂಲಕ ಸಾಲ ಕೊಡಿಸಲು ಏರ್ಪಾಡು ಮಾಡಿರುವರು.[17]

ಕಳೆದ ವರ್ಷದ ವೇಳೆಗೆ ಎಲ್ಲಾ ಅಡಮಾನದ ಬ್ಯಾಂಕುಗಳನ್ನೂ ಒಟ್ಟುಗೂಡಿಸಲಾಗಿ ಬಂಡವಾಳವು 32 ಲಕ್ಷ ರೂಪಾಯಿಗಳು ಮಾತ್ರ ಆಗುತ್ತಿದ್ದಿತು. ನಮ್ಮ ರೈತರ ತಲೆಯ ಮೇಲಿರುವ ಸಾವಿರಕೋಟಿಯ ಸಾಲವೆಲ್ಲಿ? ಅಡಮಾನದ ಬ್ಯಾಂಕುಗಳ ಅಲ್ಪ ಬಂಡವಾಳವೆಲ್ಲಿ?

ಈ ಸಂದರ್ಭವಲ್ಲಿ ಇನ್ನೊಂದಂಶವನ್ನು ನಾವು ನೆನಪಿಗೆ ತಂದು ಕೊಳ್ಳಬಹುದು. ನಮ್ಮ ರೈತರಿಗೆ ದೀರ್ಘಾವಧಿಯ ಸಾಲವಲ್ಲದೆ ಪ್ರತಿ

ವರ್ಷವೂ ತಮ್ಮ ಉದ್ಯೋಗವನ್ನು ನಡೆಯಿಸಬೇಕಾದರೆ (Current needs of Agriculture) ಅನೇಕ ಕೋಟಿ ರೂಪಾಯಿಗಳು ಬೇಕಾಗುವುವು. ಪ್ರಾಯಃ ನಮ್ಮ ಸಾಮಾನ್ಯ ಪರಸ್ಪರ ಸಹಾಯಕ ಸಂಘಗಳೂ ಮತ್ತು ಅಡಮಾನದ ಬ್ಯಾಂಕುಗಳೂ ಹೆಚ್ಚು ಮುತುವರ್ಜಿಯಿಂದ ಕೆಲಸಮಾಡಿದರೆ ಈ ವಿಷಯದಲ್ಲಿ ಅವು ನಮ್ಮ ರೈತರಿಗೆ ನೆರವಾಗಬಹುದು.

ಮೇಲ್ಕಂಡ ವಿಮರ್ಶೆಯಿಂದ ನಮ್ಮ ಮನಸ್ಸಿನಲ್ಲಿ ಮೊದಲು ಹುಟ್ಟಿದ ಉತ್ಸಾಹವು ಸ್ವಲ್ಪಮಟ್ಟಿಗೆ ಕಡಿಮೆಯಾಗುವುದರಲ್ಲಿ ಸಂಶಯವಿಲ್ಲ. ಆದರೆ ಪರಸ್ಪರ ಸಹಾಯಕ ಸಂಘಗಳು ನಮ್ಮ ಗ್ರಾಮಜೀವನದಲ್ಲಿ ಇತರವಿಧವಲ್ಲಿ ಹೆಚ್ಚು ಉಪಯೋಗವನ್ನು ಕೊಡಬಲ್ಲವು. ಬರಿಯ ಕಡವನ್ನು ಒದಗಿಸುವುದಕ್ಕಿಂತಲೂ ಕಡತೆಗೆಯುವ ಅವಶ್ಯಕತೆಯೇ ಇಲ್ಲದಂತೆ ಮಾಡುವುದು ಉತ್ತಮವಾದ ಕೆಲಸವಲ್ಲವೆ? ಹೀಗೆ ಮಾಡಲು ಪರಸ್ಪರ ಸಹಾಯಕ ಸಂಘಗಳಿಂದ ನಮಗೆ ಹೆಚ್ಚು ಸಹಾಯವು ಒದಗುವುದರಲ್ಲಿ ಸಂದೇಹವಿಲ್ಲ. ಇದುಹೇಗೆ; ಯಾವ ವಿಧದಲ್ಲಿ ಪರಸ್ಪರ ಸಹಾಯಕ ಸಂಘಗಳು ನಮ್ಮ ಗ್ರಾಮಜೀವನವನ್ನು ಉತ್ತಮಗೊಳಿಸಬಹುದು; ಗ್ರಾಮಜೀವನದ ಯಾವ ಯಾವ ಶಾಖೆಗಳಲ್ಲಿ ಇದು ಪ್ರವೇಶಿಸಬಹುದು ಎಂಬಿವನ್ನು ನಾವು ಪರೀಕ್ಷಿಸೋಣ.

ಪಾಶ್ಚಾತ್ಯದೇಶಗಳಲ್ಲಿ ಇಂತಹ ಸಂಘಗಳು ಹೇಗೆ ಕೆಲಸಮಾಡುತ್ತಿವೆಯೆಂಬುದನ್ನು ನೋಡಿರಿ. ಡೆನ್ಮಾರ್ಕ್, ಇಟಲಿ, ಐರ್ಲೆಂಡ್ ಮೊದಲಾದ ದೇಶಗಳಲ್ಲಿ ಕಡಕೊಡುವ ಸಂಘಗಳಿಗಿಂತಲೂ ಇತರವಿಧವಾದ ಸಂಘಗಳು ಅಭಿವೃದ್ಧಿಯಲ್ಲಿವೆ. ಇಂಗ್ಲೆಂಡಿನಲ್ಲಂತೂ ಕಡಕೊಡುವ ಸಂಘಗಳು ಇಲ್ಲವೇ ಇಲ್ಲವೆನ್ನಬಹುದು. ಜರ್ಮಾದೇಶದಲ್ಲಿರುವ ಸಂಘಗಳಲ್ಲಿ ಶೇಕಡ 71 ಕ್ಕಿಂತ ಮಿಗಿಲಾಗಿ ರೈತರ ವ್ಯಾಪಾರದಲ್ಲಿ ನೆರವಾಗುವ ಸಂಘಗಳೇ ಇವೆಯೆಂಬುದಾಗಿ ತಿಳಿದುಬರುತ್ತದೆ.[18]

ಡೆನ್ಮಾರ್ಕಿನಲ್ಲಿ ತಯಾರಾಗುವ ಬೆಣ್ಣೆ, ಕೆನೆ, ಮಾಂಸ ಮುಂತಾದ ಪದಾರ್ಥಗಳನ್ನು ಅಲ್ಲಿಯ ಸಣ್ಣಪುಟ್ಟ ರೈತರಿಂದ ಶೇಖರಿಸಿ ಅವುಗಳನ್ನು ಒಟ್ಟೊಟ್ಟಾಗಿ ಇಂಗ್ಲೆಂಡ್, ಜರ್ಮನಿ ಮೊದಲಾದ ದೇಶಗಳಿಗೆ ಕಳುಹಿಸಿ ರೈತರು ದಳ್ಳಾಳಿಗಳ ಕೈಗೆ ಸಿಕ್ಕಿ ನರಳದಂತೆ ಮಾಡುವುದೇ ಇಂತಹ ಸಂಘಗಳ ಪ್ರಥಮಕರ್ತವ್ಯವಾಗಿದೆ. ಜಪಾನಿನ ಸೊಸೈಟಿಗಳು ಅಲ್ಲಿಯ ಸಣ್ಣಪುಟ್ಟ ರೈತರು ಬೆಳೆಯುವ ಅಕ್ಕಿ, ಗೋಧಿ, ಬಾರ್ಲಿ, ಸೋಯಾಬೀ಼, ತರಕಾರಿ, ಹಣ್ಣುಹಂಪಲು ಮೊದಲಾದ ಪದಾರ್ಥಗಳನ್ನು ಶೇಖರಿಸಿ ರೈತರಿಗೆ ಲಾಭಬರುವಂತೆ ಮಾರಲು ನೆರವಾಗುತ್ತಿವೆ. 1932 ನೆಯ ಇಸವಿಯಲ್ಲಿ ಇಂತಹ ಸಂಘಗಳು 202,88,38,620 ಎ಼ಗಳ ಬೆಲೆಬಾಳು ವಷ್ಟು ಪದಾರ್ಥಗಳನ್ನು ಮಾರಿದುವು.[19] ಇಂಗ್ಲೆಂಡ್ ದೇಶದಲ್ಲಿಯೂ, ರೈತರ ವ್ಯಾಪಾರದಲ್ಲಿ ನೆರವಾಗುವ ಸಂಘಗಳಿಗೆ ಹೆಚ್ಚು ಉತ್ತೇಜನ ಕೊಡುವ ಉದ್ದೇಶದಿಂದಲೇ ಅಗ್ರಿಕಲ್ಚರಲ್ ಮಾರ್ಕೆಟಿಂಗ್ ಆಕ್ಟ್ ಎಂಬ ನಿಬಂಧನೆಯನ್ನು 1931 ರಲ್ಲೂ ಪುನಃ 1933 ರಲ್ಲೂ ಜಾರಿಗೆ ತಂದಿರುವರು. ಆಸ್ಟ್ರೇಲಿಯಾ ಮತ್ತು ದಕ್ಷಿಣ ಆಫ್ರಿಕದೇಶಗಳಲ್ಲಿಯೂ ಇಂತಹ ಕಾನೂನುಗಳನ್ನು ಜಾರಿಗೆ ತಂದಿರುವರು. ಅವುಗಳ ಉದ್ದೇಶವು ಯಾವುದಾದರೂ ಒಂದು ಬೆಳೆಯನ್ನು ಬೆಳೆಯುತ್ತಿರುವ ರೈತರಲ್ಲಿ ಕೆಲವು ಜನರು ಪರಸ್ಪರ ಸಹಾಯಕ ಸಂಘಗಳಿಂದ ಹೊರಗಿದ್ದು ವ್ಯಾಪಾರಕ್ಕೆ ಅಡ್ಡಿಮಾಡುತ್ತಿದ್ದರೆ ಅಂತಹ ಜನರನ್ನು ಬಲಾತ್ಕರಿಸುವುದು.[20]

ನಮ್ಮ ದೇಶದಲ್ಲಿ ರೈತರ ವ್ಯಾಪಾರ ಮಾರ್ಗದಲ್ಲಿ ಎಷ್ಟೋ ಅಡ ಚಣೆಗಳಿವೆ. ಅವುಗಳನ್ನು ಪರಿಹರಿಸುವುದರಲ್ಲಿ ಪರಸ್ಪರ ಸಹಾಯಕ ಸಂಘಗಳು ಎಷ್ಟರ ಮಟ್ಟಿಗೆ ನೆರವಾಗಬಹುದೆಂಬುದನ್ನು ನಾವು ಬೇರೆಕಡೆ ಯಲ್ಲಿ ಚರ್ಚಿಸಿರುವೆವು.[21] ಪಂಜಾಬಿನಲ್ಲಿ ಕಮಿಾಷ಼ ಷಾಪುಗಳೆಂಬ ಹೆಸರಿನಿಂದಲೂ ಇತರ ಕಡೆಗಳಲ್ಲಿ ಸೇಲ್ ಸೊಸೈಟಿಗಳೆಂಬ ಹೆಸರಿನಿಂದಲೂ ಇಂತಹ ಸಂಘಗಳು ಬಳಕೆಯಲ್ಲಿವೆ. 32-33 ರಲ್ಲಿ ಇಂತಹ ಸಂಘಗಳು

ಇಂಡಿಯಾ ದೇಶದಲ್ಲಿ ಒಟ್ಟು 330 ಇದ್ದುವು.[22] ಇವುಗಳಿಂದಾಗುವ ಉಪಯೋಗವನ್ನೂ ಇಂತಹ ಸಂಘಗಳ ಸ್ಥಾಪನೆಯಲ್ಲಿರುವ ಕಷ್ಟವನ್ನೂ ಬೇರೆಡೆಯಲ್ಲಿ ವಿಶದವಾಗಿ ವಿಮರ್ಶಿಸಲಾಗಿದೆ.

ರೈತರ ವ್ಯಾಪಾರ ಮಾರ್ಗದಲ್ಲಿ ನೆರವಾಗುವಂತೆಯೇ ಅವರಬೇಸಾಯದ ಕ್ರಮಗಳನ್ನೂ ಬದಲಾಯಿಸಿ ನೂತನವಾದ ವ್ಯವಸಾಯಕ್ರಮವನ್ನು ಅವರಲ್ಲಿ ಹರಡಬೇಕಾದುದು ನಮ್ಮ ಕರ್ತವ್ಯವಾಗಿದೆ. ಬಹು ವರ್ಷದ ಅನುಭವದಿಂದ ಈ ಕರ್ತವ್ಯನಿರ್ವಹಣೆಗೆ ಪರಸ್ಪರ ಸಹಾಯಕ ಸಂಘಗಳೇ ರಾಜಮಾರ್ಗವೆಂಬುದೂ ಸಿದ್ಧವಾಗಿದೆ. ಹೊಸಯಂತ್ರಗಳನ್ನು ಕೊಳ್ಳುವುದು, ಉತ್ತಮವಾದ ಗಿಡಗಳನ್ನು ಪರದೇಶದಿಂದ ತರಿಸಿ ಹಂಚುವುದು, ಕೃತಕ ಗೊಬ್ಬರಗಳನ್ನು ತರಿಸಿಕೊಡುವುದು, ಉತ್ತಮಬೀಜವನ್ನು ಬಳಕೆಗೆ ತರುವುದು, ಈ ಕೆಲಸಗಳನ್ನು ಮಾಡಲು ಪ್ರತಿ ಹಳ್ಳಿಯಲ್ಲಿಯೂ ಸಂಘಗಳನ್ನು ಸ್ಥಾಪನೆಮಾಡಬಹುದು. 1934 ನೆಯ ಇಸವಿಯಲ್ಲಿ ಹುಬ್ಬಳ್ಳಿ ಸಂಘವು 20 ಲಕ್ಷ ಪೌಂಡಿನಷ್ಟು ಹತ್ತಿಯಬೀಜವನ್ನೂ, ಗದಗಿನ ಸಂಘವು 27,58,000 ಪೌಂಡುಗಳಷ್ಟು ಹತ್ತಿಯಬೀಜವನ್ನೂ ಹಂಚಿದುವು. ಮೈಸೂರು ದೇಶದಲ್ಲಿಯೂ ಮರಡಿಹಳ್ಳಿ ಸಂಘವು ವ್ಯವಸಾಯದ ಇಲಾಖೆಯಿಂದ ಉತ್ತಮವಾದ ಅರಳೆಯ ಬೀಜವನ್ನು ತೆಗೆದುಕೊಂಡು ಹಂಚಿತು. ಇದೇ ರೀತಿಯಲ್ಲಿ ಅನೇಕ ಸಂಘಗಳು ಉತ್ತಮವಾದ ಉಪಕರಣಗಳನ್ನು ಕೊಂಡು ರೈತರಲ್ಲಿ ಹಂಚುತ್ತಿವೆ. 1932-33 ನೆಯ ಇಸವಿಯಲ್ಲಿ ವ್ಯಾಪಾರ ಮತ್ತು ಕಸಬಿನ ಅಭಿವೃದ್ಧಿಗೆ ಅನ್ವಯವಾಗುತ್ತಿದ್ದ ಸಂಘಗಳು ಇಂಡಿಯಾದಲ್ಲಿ ಒಟ್ಟು 2842 ಇದ್ದುವು.

ಗ್ರಾಮಜೀವನದಲ್ಲಿರುವ ಇನ್ನೊಂದು ಮುಖ್ಯ ಕೊರತೆಯು ನಮ್ಮ ಜಮಿಾನು ಹಂಚುವಿಕೆಗೆ ಸಂಬಂಧಪಟ್ಟುದು. ನಮ್ಮ ರೈತರ ಅನುಭವದಲ್ಲಿರುವ ತಾಕುಗಳು ಅತಿ ಚಿಕ್ಕವೆಂದೂ ಮತ್ತು ಊರಿನ ನಾನಾಕಡೆ ಚದರಿವೆಯೆಂದೂ, ಅದರಿಂದ ಬೇಸಾಯದ ಅಭಿವೃದ್ಧಿಗೆ

ಬಹು ಕುಂದಕ ಉಂಟೆಂದೂ ಹಿಂದೆಯೇ ಚರ್ಚಿಸಿದೇವೆ. ಪಂಜಾಬು ದೇಶದಲ್ಲಿ ಈ ತೊಂದರೆಯ ಪರಿಹಾರಕ್ಕಾಗಿಯೇ ಪರಸ್ಪರ ಸಹಾಯಕ ಸಂಘಗಳನ್ನು ಸ್ಥಾಪಿಸುತ್ತಿದಾರೆಂಬುದನ್ನೂ ಅಂತಹ ಸಂಘಗಳು ಎಷ್ಟರ ಮಟ್ಟಿಗೆ ಕೆಲಸಮಾಡುತ್ತಿವೆಯೆಂಬುದನ್ನೂ ವಿಮರ್ಶಿಸಲಾಗಿದೆ.[23] ಇತರ ಪ್ರಾಂತಗಳಲ್ಲಿಯೂ ಇಂತಹ ಸಂಘಗಳ ಸ್ಥಾಪನೆಯು ಅತ್ಯಾವಶ್ಯಕವೆಂದು ಒತ್ತಿ ಒತ್ತಿ ಹೇಳಬಹುದು.

ಕೆಲವು ದೇಶಗಳಲ್ಲಿ ಗ್ರಾಮಸ್ಥರಿಗೆ ವೈದ್ಯರ ಸಹಾಯವನ್ನು ಒದಗಿಸಿಕೊಡುವ ನಿಮಿತ್ತದಿಂದಲೇ ಇಂತಹ ಸಂಘಗಳನ್ನು ಸ್ಥಾಪಿಸುತ್ತಿದಾರೆ. ಯೂರೋಪಿನ ಯೂಗೋಸ್ಲೇವಿಯ, ಏಷ್ಯಾದ ಜರ್ಪಾವೇಶಗಳನ್ನು ಇದಕ್ಕೆ ನಿದರ್ಶನವಾಗಿ ಹೇಳಬಹುದು. ನಮ್ಮ ಹಳ್ಳಿಗಳಲ್ಲಿರುವಂತೆಯೇ ಯೂಗೋಸ್ಲೇವಿಯದ ಹಳ್ಳಿಗಳಲ್ಲಿಯೂ ಜನಗಳಿಗೆ ವೈದ್ಯಸಹಾಯವು ಸಿಕ್ಕುವುದೇ ದುರ್ಲಭವಾಗಿತ್ತು. ಮನೆಯಲ್ಲಿ ಯಾರಿಗಾದರೂ ಹೆಚ್ಚು ಖಾಯಿಲೆಯಾದರೆ ರೈತರು ದೀಪವನ್ನು ಹಚ್ಚಿಟ್ಟು ಡಾಕ್ಟರು ಮೊದಲು ಬರುವರೋ ಯಮಭಟರು ಮೊದಲು ಬರುವರೋ ಎಂದು ನಿರೀಕ್ಷಿಸುತ್ತ ಕುಳಿತಿರಬೇಕಾಗಿತ್ತು. ಪಟ್ಟಣಗಳಲ್ಲಿ 860 ಮಂದಿಗೆ ಒಬ್ಬ ಡಾಕ್ಟರಿದ್ದರೆ ಹಳ್ಳಿಗಳಲ್ಲಿ 12000 ಮಂದಿಗೆ ಒಬ್ಬ ಡಾಕ್ಟರು ಸಿಕ್ಕುವುದೂ ಕಷ್ಟವಾಗಿತ್ತು. ಇದಕ್ಕಾಗಿ ಕೆಲವು ಬುದ್ಧಿವಂತರು ದಾರಿಹುಡುಕತೊಡಗಿದರು. 1921ನೆಯ ಇಸವಿಯಲ್ಲಿ Health Societies ಎಂಬ ಪರಸ್ಪರಸಹಾಯಕ ಸಂಘಗಳನ್ನು ಸ್ಥಾಪಿಸಲು ಅನುವಾದರು. ಇತರ ಪರಸ್ಪರ ಸಹಾಯಕ ಸಂಘಗಳಂತೆಯೇ ಸ್ವಲ್ಪ ಬೆಲೆಯುಳ್ಳ ಷೇರುಗಳು ಏರ್ಪಟ್ಟುವು. ಸಾಮಾನ್ಯವಾಗಿ ಪ್ರತಿಯೊಬ್ಬ ಷೇರುದಾರನೂ ತನ್ನ ಷೇರಿನ ಬೆಲೆಗೆ ಹತ್ತರಷ್ಟು ಜವಾಬ್ದಾರಿಯನ್ನು ಹೊರುತ್ತಾನೆ. (Liability) ಈ ಬಂಡವಾಳವಲ್ಲದೆ ಪ್ರತಿಯೊಂದು ಸಂಘದಲ್ಲೂ ಐಚ್ಛಿಕವಾಗಿಯಾಗಲೀ ಬಲಾತ್ಕಾರವಾಗಿಯಾಗಲೀ ಹೆಲ್ತ್‌ಫಂಡ್ ಎಂಬ ಒಂದು ಫಂಡಿಗೆ ಎಲ್ಲ ಸದಸ್ಯರೂ ಹಣ

ಕೊಡಬೇಕು. ಅಥವಾ ಹಣಕ್ಕೆ ತಕ್ಕ ದಿನಸಿಯನ್ನು ಕೊಡಬಹುದು. ಈ ಫಂಡಿಗೆ ಪ್ರತಿ ತಿಂಗಳೂ ಹಣವನ್ನು ಕಂತುಕಂತಾಗಿ ಪಾವತಿಮಾಡಬಹುದು. ಸಾಮಾನ್ಯವಾಗಿ ಹೆಚ್ಚುಮಂದಿ ತಮ್ಮ ಚಂದಾವನ್ನು ಸುಗ್ಗಿಯ ಕಾಲದಲ್ಲಿ ಕೊಡುವುದೇ ವಾಡಿಕೆ. ಇಂತಹ ಪರಸ್ಪರ ಸಹಾಯಕ ಸಂಘಗಳು ಡಾಕ್ಟರುಗಳನ್ನು ನೇಮಕಮಾಡಿಕೊಂಡು ಹೆಲ್ತ್ ಹೌಸಸ್ ಎಂಬ ಆಸ್ಪತ್ರೆಗಳನ್ನು ಇಟ್ಟುಕೊಂಡು ವೈದ್ಯರ ಸಹಾಯವನ್ನೂ ಒದಗಿಸಿಕೊಡುತ್ತಿವೆ. 1928-34 ರ ವೇಳೆಗೆ ಇಂತಹ ಹದಿನಾಲ್ಕು ಆಸ್ಪತ್ರೆಗಳು ಬಹು ಶ್ರದ್ಧೆಯಿಂದ ಕೆಲಸಮಾಡುತ್ತಿದ್ದುವು.[24] ಜರ್ಮನಿದೇಶದಲ್ಲಿಯೂ ರೈತರಿಗೆ ವೈದ್ಯಸಹಾಯವನ್ನು ಒದಗಿಸಲು ಇಂತಹ ಸಂಘಗಳು ಬಳಕೆಗೆ ಬರುತ್ತಿವೆ. 1933 ನೆಯ ಇಸವಿಯ ಇಪ್ಪತ್ತೊಂಭತ್ತು ವೈದ್ಯಸಹಾಯಸಂಘಗಳಲ್ಲಿ 79399 ಜನ ಸದಸ್ಯರಿದ್ದರು. ಇವುಗಳ ಆಶ್ರಯದಲ್ಲಿ 43 ಆಸ್ಪತ್ರೆಗಳೂ 138 ಡಾಕ್ಟರುಗಳೂ ಇದ್ದು 3,66,802 ಕುಟುಂಬಗಳಿಗೆ ವೈದ್ಯರ ಸಹಾಯವನ್ನು ಒದಗಿಸಿಕೊಡುತ್ತಿದ್ದುವು.[25]

ನಮ್ಮ ಹಳ್ಳಿಗಳಲ್ಲಿ ವೈದ್ಯಸಹಾಯವು ಎಷ್ಟರಮಟ್ಟಿಗಿದೆಯೆಂಬುದು ಸಕಲರಿಗೂ ತಿಳಿದ ಅಂಶವಾಗಿದೆ. ಆದುದರಿಂದ ಈ ಬಗೆಯ ಸಂಘಗಳನ್ನು ನಾವು ಬಳಕೆಗೆ ತರುವುದು ಅತ್ಯಾವಶ್ಯಕವೆಂದು ತೋರಿಬರುವುದು. ಪೂರ್ವದಿಂದಲೂ ನಮ್ಮ ರೈತರು ತಮ್ಮ ನೆರವಿಗೆ ಬರುತ್ತಿದ್ದ ಉದ್ಯೋಗಸ್ಥರಿಗೆ ಸುಗ್ಗಿಯಕಾಲದಲ್ಲಿ ದಿನಸಿಯ ಮೂಲಕ ಪಾರಿತೋಷಕವನ್ನು ಕೊಡುವ ಪದ್ಧತಿಯನ್ನಿಟ್ಟುಕೊಂಡಿರುವುದು ಸರಿಯಷ್ಟೆ. ಯೂಗೋಸ್ಲೇವಿಯದಲ್ಲಿರುವ ಪದ್ಧತಿಯನ್ನು ಜಾರಿಗೆ ತರುವುದು ನಮಗೆ ಬಹು ಸುಲಭವೆಂದು ತೋರಿಬರುವುದು. ಇಂಡಿಯದಲ್ಲಿ ಇಂತಹ ಸಂಘಗಳು ಇಲ್ಲವೆನ್ನಬಹುದು. ಆದರೆ ಬಂಗಾಳ ಪ್ರಾಂತದಲ್ಲಿ ಡಾಕ್ಟರ್ ಗೋಪಾಲಚಂದ್ರ ಚಟರ್ಜಿ ಎಂಬುವರ ಉತ್ಸಾಹದಿಂದ ಮಲೇರಿಯಾಜ್ವರದ ನಿವಾರಣೆಗಾಗಿ ಸ್ಥಾಪಿಸಲ್ಪಟ್ಟ ಕೆಲವು ಪರಸ್ಪರಸಹಾಯಕ ಸಂಘಗಳು ಶ್ಲಾಘ್ಯವಾದ ಕೆ

ಸವನ್ನು ಮಾಡುತ್ತಿವೆ. ಇದಕ್ಕಾಗಿ ಒಂದು ಕೇಂದ್ರಸಂಘವೂ ಸುಮಾರು 900 ಪ್ರಾಥಮಿಕ ಸಂಘಗಳೂ ಇವೆ.[26] ಇಂತಹ ಸಂಘಗಳು ಅವುಗಳ ಸದಸ್ಯರಿಂದ ತಿಂಗಳಿಗೆ ನಾಲ್ಕು ಆಣೆಯಿಂದ ಒಂದು ರೂಪಾಯಿಯವರೆಗೆ ಚಂದಾವಸೂಲ್‌ಮಾಡಿ ಅಂತಹ ಸದಸ್ಯರಿಗೆ ಉಚಿತವೈದ್ಯಸಹಾಯವನ್ನು ಒದಗಿಸುತ್ತಿವೆ. ಇಂತಹ ಸಂಘಗಳು ಇತರ ಪ್ರಾಂತಗಳಿಗೂ ಹರಡಲೆಂಬುದೇ ನಮ್ಮ ಆಶಯ.

ಹೀಗೆಯೇ ರೈತರಲ್ಲಿ ಜೀವವಿಮಾಪದ್ಧತಿಯನ್ನು ಜಾರಿಗೆ ತರಲೂ ಪರಸ್ಪರ ಸಹಾಯಕ ಸಂಘಗಳನ್ನು ಸ್ಥಾಪಿಸಬಹುದು. ನಮ್ಮ ದೇಶದ ರೈತರಿಗೆ ಈ ಪದ್ಧತಿಯೇ ತಿಳಿಯದೆಂದರೆ ಅತಿಶಯೋಕ್ತಿಗಲಾರದು. ಸದ್ಯಃ ಈ ಕೆಲಸಗಳನ್ನು ಕೈಕೊಂಡಿರುವ ಸಂಘಗಳು ಬೊಂಬಾಯಿ, ಮದ್ರಾಸು, ಬಂಗಾಳಗಳಲ್ಲಿ ಒಂದೊಂದು ಮಾತ್ರ ಇವೆ. ಈ ವಿಧವಾದ ಸಂಘಗಳು ಹೆಚ್ಚು ಬಳಕೆಗೆ ಬರುವುದು ಉತ್ತಮ. ಆದರೆ ಪಾಲಿಸಿಯ ಹಣಗಳು ಕೊಂಚವಾಗಿರಬೇಕು ಮತ್ತು ರೈತರಿಗೆ ಹೆಚ್ಚು ತೊಡಕಾಗಿಲ್ಲದರೀತಿಯಲ್ಲಿ ವಿಮಾಮಾಡಿಸಲನುಕೂಲವಿರಬೇಕು.

ಈಚಿಗೆ ರೈತರ ದಿನಚರಿಯ ಜೀವನದಲ್ಲಿರುವ ಅನೇಕ ದೋಷಗಳನ್ನು ಪರಿಹಾರಮಾಡಿ ಜೀವನದ ಅಂತಸ್ತನ್ನು ಉತ್ತಮಗೊಳಿಸಲೋಸುಗವೇ ಪ್ರತ್ಯೇಕ ಸಂಘಗಳು ಹುಟ್ಟುತ್ತಿವೆ. ಇವುಗಳನ್ನು ಬೆಟರ್ ಲಿವಿಂಗ್ ಸೊಸೈಟಿಗಳೆಂದು ಕರೆಯುತ್ತಾರೆ. ಪಂಜಾಬಿನಲ್ಲಿ ಇವು ವಿಶೇಷ ಬಳಕೆಯಲ್ಲಿವೆ; 1931 ರಲ್ಲಿ ಇಂತಹ 359 ಸಂಘಗಳು ಇದ್ದುವು. ಮುಖ್ಯವಾಗಿ ಮದುವೆ, ಮುಂಜಿ, ಉತ್ತರಕ್ರಿಯೆ ಮುಂತಾದುವುಗಳಲ್ಲಿ ದುಂದುವೆಚ್ಚವನ್ನು ತಪ್ಪಿಸುವುದು; ಹೆಚ್ಚು ಹಣವನ್ನು ಒಡವೆಗಳ ಮೇಲೆಹಾಕಿ ರೈತರಿಗೆ ಬರುವ ಸಂಪಾದನೆಯನ್ನು ಹಾಳುಮಾಡುತ್ತಿರುವ ಪದ್ಧತಿಯನ್ನು ಕಡಮೆಮಾಡುವುದು; ರೈತರು ಮನೆಮಠಗಳನ್ನು ಶುಚಿಯಾಗಿಡುವಂತೆ ಮಾಡುವುದು—ಮುಂತಾದುವು ಇವುಗಳ ಪಾಲಿಗೆ ಬಂದ ಕಾರ್ಯಗಳು.

ಇಂತಹ ಸಂಘಗಳು ಕೆಲಸಮಾಡುತ್ತಿರುವ ಹಳ್ಳಿಗಳಲ್ಲಿ ಮದುವೆಯ ವೆಚ್ಚವು ಶೇಕಡ 50 ರಿಂದ 75ರ ವರೆಗೂ ಇಳಿದಿದೆಯೆಂಬುದಾಗಿ ಡಾರ್ಲಿಂಗ್ ಅವರು ವಿಮರ್ಶೆಮಾಡಿ ಬರೆಯುತ್ತಾರೆ.[27]

ವ್ಯಾಜ್ಯವ್ಯವಹಾರಗಳು ನಮ್ಮ ರೈತರ ರಕ್ತಗತವಾದ ದೊಡ್ಡ ರೋಗ. ಇದರಿಂದ ಎಷ್ಟು ಅನನುಕೂಲವಾಗುತ್ತಿದೆ, ಎಷ್ಟು ವೆಚ್ಚವಾಗುತ್ತಿದೆ ಯೆಂಬುದು ಪ್ರತಿಯೊಬ್ಬರಿಗೂ ತಿಳಿದ ಅಂಶವಾಗಿದೆ. ಪಂಜಾಬಿನಲ್ಲಿ ಮ|| ರಾ|| ಸ್ಟ್ರಿಕ್‌ಲ್ಯಾಂಡ್ ಅವರೂ ಡಾರ್ಲಿಂಗ್ ಅವರೂ ಈ ರೋಗಪರಿಹಾರಕ್ಕೆ ಪರಸ್ಪರ ಸಹಾಯಕ ಸಂಘಗಳನ್ನೇಕೆ ಸ್ಥಾಪಿಸಬಾರದೆಂದು 1920 ರಲ್ಲಿ ಪ್ರಯತ್ನಮಾಡಲು ಆರಂಭಿಸಿದರು. ಸದ್ಯಃ ಅಲ್ಲಿ ಇಂತಹ 54 ಸಂಘಗಳು 8000 ಸದಸ್ಯರನ್ನೊಳಗೊಂಡು ಕೆಲಸಮಾಡುತ್ತಿವೆ. 27-31 ರ ವೇಳೆಗೆ ಇವು 2500 ವ್ಯಾಜ್ಯಗಳನ್ನು ತೀರ್ಮಾನಿಸಿದುವು. ಇವುಗಳ ತೀರ್ಮಾನಕ್ಕೆ ವಿರೋಧವಾಗಿ ಯಾರೂ ನಡೆದಿಲ್ಲ.[28] ವ್ಯಾಜ್ಯಕೂಪದಲ್ಲಿ ಮುಳುಗುತ್ತಿರುವ ನಮ್ಮ ಗ್ರಾಮಗಳಿಗೆ ಇಂತಹ ಸಂಘಗಳು ಮಹೋಪಕಾರವನ್ನು ಮಾಡಬಲ್ಲವೆಂಬುದಕ್ಕೆ ಸಂಶಯವೇ ಇಲ್ಲ.

ಇತರ ದೇಶಗಳ ಅನುಭವವನ್ನೂ ನಮ್ಮ ದೇಶದ ಅನುಭವವನ್ನೂ ಮನದಲ್ಲಿಟ್ಟು ವಿಮರ್ಶೆಮಾಡತೊಡಗಿವರೆ ಪರಸ್ಪರ ಸಹಾಯಕ ಸಂಘಗಳು ಗ್ರಾಮಜೀವನದ ಎಲ್ಲಾ ಶಾಖೆಗಳಲ್ಲೂ ತಮ್ಮ ಅಮೃತಹಸ್ತವನ್ನು ನೀಡಬಲ್ಲುವೆಂಬುದು ಗೋಚರವಾಗದಿರದು. ಆದರೂ ನಮ್ಮ ದೇಶದಲ್ಲಿ, ಅದರಲ್ಲಿಯೂ ನಮ್ಮ ಗ್ರಾಮಗಳಲ್ಲಿ ಕಡಕೊಡುವ ಸಂಘಗಳಾಗಲೀ ಇತರ ವಿಧವಾದ ಸಂಘಗಳಾಗಲಿ ಹೆಚ್ಚು ಬೆಳವಳಿಗೆಯನ್ನು ತೋರಿಸುತ್ತಾ ಇಲ್ಲ. ಇತರ ದೇಶಗಳಲ್ಲಿ ಸರ್ಕಾರದವರ ನೆರವಿಲ್ಲದೆಯೇ ಅವು ಬೆಳೆಯುತ್ತಿವೆ. ನಮ್ಮ ದೇಶದಲ್ಲಿ ಸರ್ಕಾರದವರು ಪರಸ್ಪರ ಸಹಾಯಕ ಸಂಘಗಳ ಬೆಳವಳಿಕೆಗಾಗಿ ಟೊಂಕಕಟ್ಟಿ ನಿಂತು ಕಳೆದ ಮೂವತ್ತು ವರ್ಷಗಳಿಂದಲೂ ಸತತಪ್ರಯತ್ನವನ್ನು ನಡೆಯಿಸುತ್ತಿದಾರೆ. ಅವರ ಉದಾರಾಶ್ರಯದಲ್ಲಿಯೂ

ಕೂಡ ಈ ಸಂಘಗಳು ಬೆಳೆಯದಿರುವುದನ್ನು ನೋಡಿದರೆ ಆಶ್ಚರ್ಯವಾಗದಿರದು. ಪುರಾತನಕಾಲದಿಂದಲೂ ನಮ್ಮ ರೈತರಲ್ಲಿ ಪರಸ್ಪರ ಸಹಾಯ ಪದ್ಧತಿಯು ಎಷ್ಟರಮಟ್ಟಿಗಿತ್ತೆಂಬುದನ್ನು ನೆನೆದುಕೊಂಡರೆ ಇಂದಿನ ಸ್ಥಿತಿಯು ನಮಗೆ ವಿಷಾದವನ್ನೇ ಉಂಟುಮಾಡುವುದು.

ಗ್ರಾಮಸ್ಥರ ಅಜ್ಞಾನವೇ ಈ ಹೀನಸ್ಥಿತಿಗೆ ಕಾರಣವೆಂದರೆ ಅತಿಶಯೋಕ್ತಿಯಾಗಲಾರದು. ಅನೇಕ ಹಳ್ಳಿಗಳಲ್ಲಿ ಪರಸ್ಪರ ಸಹಾಯಕ ಸಂಘಗಳ ಲೆಕ್ಕಪತ್ರವನ್ನು ಸರಿಯಾಗಿಟ್ಟುಕೊಳ್ಳಬಲ್ಲ ಒಬ್ಬಿಬ್ಬರು ಸಿಕ್ಕುವುದೂ ಕಷ್ಟ; ಕೆಲವು ವಿದ್ಯಾವಂತರು ಸಿಕ್ಕಿದರೂ ನಿಸ್ಪೃಹತೆಯಿಂದ ಕೆಲಸಮಾಡುವವರು ವಿರಳ; ಸಂಘವನ್ನು ಸ್ವಾರ್ಥಕ್ಕಾಗಿ ಉಪಯೋಗಿಸಿಕೊಳ್ಳದವರು ಅತ್ಯಂತ ವಿರಳ. ಅಲ್ಲದೆ ರೈತರಲ್ಲನೇಕರು ತಾವು ಪಡೆದ ಸಾಲವನ್ನು ಕಾಲಕಾಲಕ್ಕೆ ಪಾವತಿಮಾಡಿದರೆ ಸಂಘಕ್ಕೂ ಸುಖ ತಮಗೂ ಕ್ಷೇಮವೆಂಬುದನ್ನು ತಿಳಿಯರು. ವಿದ್ಯಾಪ್ರಚಾರವೇ ಇದಕ್ಕೆ ತಕ್ಕ ಮದ್ದು. ನಿರುದ್ಯೋಗಿಗಳಾದ ವಿದ್ಯಾವಂತರು ಹಳ್ಳಿಗಳಲ್ಲಿ ಹೆಚ್ಚು ಹೆಚ್ಚಾಗಿ ನೆಲಸಿದಷ್ಟೂ ಇಂತಹ ಕಷ್ಟಗಳು ಕಡಿಮೆಯಾದಾವು. ಹಳ್ಳಿಯ ಉಪಾಧ್ಯಾಯರು ಪರಸ್ಪರ ಸಹಾಯಕ ಸಂಘಗಳನ್ನು ನಡೆಯಿಸುವುದರಲ್ಲಿ ರೈತರಿಗೆ ನೆರವಾಗಬಹುದು.

ಪರಸ್ಪರ ಸಹಾಯಕ ಸಂಘಗಳು ಗ್ರಾಮಜೀವನದ ಎಲ್ಲಾ ಶಾಖೆಗಳಲ್ಲಿಯೂ ಪ್ರವಹಿಸಬಲ್ಲವೆಂಬುದನ್ನು ನಾವು ತಿಳಿದುಕೊಂಡಿರುವೆವು. ಇದಕ್ಕಾಗಿ ಪ್ರತಿ ಹಳ್ಳಿಯಲ್ಲಿಯೂ ಬೇರೆ ಬೇರೆ ಉದ್ದೇಶದಿಂದ ಹತ್ತಾರು ಸಂಘಗಳನ್ನು ಸ್ಥಾಪಿಸುವುದಕ್ಕಿಂತಲೂ ಒಂದೊಂದು ಸಂಘವನ್ನು ಸ್ಥಾಪಿಸಿ ಅದರ ಮೂಲಕವೇ ಎಲ್ಲಾ ಸಹಾಯವನ್ನೂ ಪಡೆಯುವುದು ಉತ್ತಮ. ಪಾಶ್ಚಾತ್ಯದೇಶಗಳಲ್ಲಿ ಅದರಲ್ಲಿಯೂ ಡೆನ್ಮಾರ್ಕಿನಲ್ಲಿ ಪ್ರತಿಯೊಬ್ಬ ರೈತನೂ ಹತ್ತಾರು ಸಂಘಗಳಲ್ಲಿ ಬೇರೆ ಬೇರೆ ಉದ್ದೇಶದಿಂದ ಸದಸ್ಯನಾಗಿರುವುದು ನಿಜ; ಆದರೆ ಒಂದು ಸಂಘವನ್ನೇ ಸಮರ್ಪಕವಾಗಿ ನಡೆಯಿಸುವ ಶಕ್ತಿ

ಯಿಲ್ಲದ ನಮ್ಮ ಹಳ್ಳಿಗಳಲ್ಲಿ ಇದು ಕಷ್ಟ. ಆದುದರಿಂದ ನೂರಾರು ಸಂಘಗಳನ್ನು ಸ್ಥಾಪಿಸುವುದು ಅನುಚಿತ. ಕೊನೆಯದಾಗಿ "ರೈತರ ಉದ್ಧಾರವು ಪರಸ್ಪರ ಸಹಾಯಕ ಸಂಘಗಳಿಂದ ನಡೆಯದಿದ್ದರೆ ಅವರ ಉದ್ಧಾರದ ಆಸೆಯನ್ನೇ ನಾವು ಬಿಡಬಹುದು" ಎಂಬ ಲಿಂಲಿತ್ಗೋ ಕಮಿಷನ್ನಿನವರ ಮಾತನ್ನು ಎಲ್ಲರೂ ನೆನಪಿನಲ್ಲಿಡಬೇಕು.[29]

# ೧೧ ಗ್ರಾಮಾರೋಗ್ಯ

ನಾವು ಇಲ್ಲಿಯ ವರೆಗೆ ನಮ್ಮ ರೈತರ ಆರ್ಥಿಕ ಜೀವನ ಕ್ರಮವನ್ನು ವರ್ಣಿಸಿರುವೆವು; ಅಂತಹ ಜೀವನದಲ್ಲಿರುವ ಮುಖ್ಯವಾದ ಕುಂದುಕೊರತೆಗಳನ್ನು ಸೂಚಿಸಿರುವೆವು; ಆ ಕುಂದುಕೊರತೆಗಳನ್ನು ಪರಿಹರಿಸಲು ಕೆಲವು ಉಪಾಯಗಳನ್ನೂ ವಿಮರ್ಶಿಸಿರುವೆವು. ಆದರೆ ಅಂತಹ ಉಪಾಯಗಳಿಗಿಂತಲೂ, ಅವುಗಳನ್ನು ಆಚರಿಸುವ ವ್ಯಕ್ತಿಗಳ ದೇಹದಾರ್ಢ್ಯವು ಹೆಚ್ಚು ಪ್ರಧಾನವಾದುದು. ಆದುದರಿಂದ ಇಲ್ಲಿಯ ವರೆಗೆ ನಾವು ಚರ್ಚಿಸಿರುವ ಉಪಾಯಗಳನ್ನು ಮನದಲ್ಲಿಟ್ಟುಕೊಂಡು, ನಮ್ಮ ರೈತರ ಬಾಹುಬಲದ ಕಡೆಗೆ ನಮ್ಮ ಗಮನವನ್ನು ಕೊಡಬೇಕಾದುದು ಆವಶ್ಯಕ.

ಉಪಾಯಗಳಿಂದ ವ್ಯಕ್ತಿಗಳ ಕಡೆಗೆ ನಮ್ಮ ಗಮನವು ತಿರುಗಿದ ಕೂಡಲೆ ವಿಪುಲವಾದ ಐಶ್ವರ್ಯಕ್ಕಿಂತಲೂ ದೃಢಕಾಯವು ಹೆಚ್ಚು ಬೆಲೆಯುಳ್ಳುದೆಂಬ ('A Strong body is above infinite wealth) ನಾಣ್ಣುಡಿಯು ನೆನಪಿಗೆ ಬರುವುದು. ಪ್ರತಿಯೊಬ್ಬ ವ್ಯಕ್ತಿಯ ಅಥವಾ ಸಮಾಜದ ಆರ್ಥಿಕೋನ್ನತಿಯು ಆ ವ್ಯಕ್ತಿಯ ಅಥವಾ ಸಮಾಜದ ಬಾಹುಬಲವನ್ನು ಸಂಪೂರ್ಣವಾಗಿ ಅವಲಂಬಿಸಿರುವುದೆಂಬುದನ್ನು ಮರೆಯಲಾಗದು. ಒಬ್ಬ ಅರ್ಥಶಾಸ್ತ್ರಜ್ಞನ ಈ ಹೇಳಿಕೆಯನ್ನು ಓದಿರಿ.

" The bed rock foundation of all national strength and efficiency is physical.[1] " ಅಹನ್ಯಹನಿ ಕಾಲಕ್ಷೇಪಮಾಡುತ್ತಿರುವ ನಮ್ಮ ಬಡರೈತರು ಒಂದುದಿನ ರೋಗದಿಂದ ನರಳಬೇಕಾಗಿ ಬಂದರೆ, ಅಂದು ಅವರು ಹಸಿದುಕೊಂಡೇ ಇರಬೇಕಾಗಿದೆ. ಇಂತಹ ಜನಾಂಗದವರ ಆರ್ಥಿಕಾಭ್ಯುದಯವು ಅವರ ದೇಹದಾರ್ಢ್ಯದ ಪ್ರಮಾಣವನ್ನೇ ಅವಲಂಬಿಸಿರುವುದು.[2] ಲಿನ್‌ಲಿತ್ಗೋ ಕಮಿಷನ್ನಿನವರು ನಮ್ಮ ಆರ್ಥಿಕೋನ್ನತಿಗೂ, ನಮ್ಮ ದೇಶದ ಆರೋಗ್ಯಕ್ಕೂ ಇರುವ ಈ ನಿಕಟವಾದ ಸಂಬಂಧವನ್ನು ಸ್ಫುಟಾಕ್ಷರದಲ್ಲಿ ಬರೆದಿರುವರು. 1924 ರಲ್ಲಿ ನೆರೆದಿದ್ದ ಅಖಿಲಭಾರತ ವೈದ್ಯವಿದ್ಯಾ ಸಂಘದವರು "ಭಾರತಭೂಮಿಯ ಬಡತನಕ್ಕೂ ಹಣಕಾಸಿನ ಮುಗ್ಗಟ್ಟಿಗೂ ಅತಿಮುಖ್ಯವಾದ ಕಾರಣವು ನಿವಾರಣೀಯವಾದ ರೋಗಗಳಿಂದ ನಮ್ಮ ಜನಾಂಗದಲ್ಲಿ ಬೆಳೆಯುತ್ತಿರುವ ದೌರ್ಬಲ್ಯವೇ[3] " ಎಂಬುದಾಗಿ ಸಾರಿದುದನ್ನು ಲಿನ್‌ಲಿತ್ಗೋ ಕಮಿಷನ್ನಿನವರೂ ಅನುಮೋದಿಸಿರುವರು. ಬಂಗಾಳಾ ದೇಶದ ಹಳ್ಳಿಗಳಲ್ಲಿ ಗದ್ದೆಗಳ ಬೆಳಸು ಕಡಮೆಯಾಗುವುದಕ್ಕೂ, ಮಲೇರಿಯಾ ರೋಗವು ಹರಡುವುದಕ್ಕೂ ಇರುವ ಸಂಬಂಧವನ್ನು ವಿಶ್ವಭಾರತಿಯ ಗ್ರಾಮಪುನರುದ್ಧಾರ ಶಾಖೆಯವರು ತಮ್ಮ ಪ್ರಯೋಗಗಳ ಮೂಲಕ ನಿರ್ಧರಿಸಿರುವರು. ರೈತರ ಬಡತನಕ್ಕೂ ರೈತರಲ್ಲಿ ಹರಡುತ್ತಿರುವ ರೋಗರುಜಿನಾದಿಗಳಿಗೂ ನಿಕಟವಾದ ಸಂಬಂಧವಿರುವುದರಿಂದ, ನಮ್ಮ ಹಳ್ಳಿಗಳ ಆರೋಗ್ಯಭಾಗ್ಯದ ಸಮಸ್ಯೆಯನ್ನು ನಾವು ಸ್ವಲ್ಪಮಟ್ಟಿಗಾದರೂ ಪರೀಕ್ಷಿಸದಿದ್ದರೆ ನಮ್ಮ ಗ್ರಾಮಜೀವನದ ಸಮಸ್ಯೆಯ ಚಿತ್ರವು ಸಂಪೂರ್ಣವೆನಿಸಿಕೊಳ್ಳಲಾರದು.

ನಮ್ಮ ನಾಡಿನ ಸಂಸ್ಕೃತಿಯು ಐಹಿಕಸುಖಕ್ಕೆ ಪ್ರಾಶಸ್ತ್ಯವನ್ನು ಕೊಡುತ್ತಿರಲಿಲ್ಲವೆಂದೂ, ಆಮುಷ್ಮಿಕ ಸೌಖ್ಯವೇ ನಮ್ಮ ಗುರಿಯಾಗಿದ್ದಿತೆಂದೂ ಆದುದರಿಂದ ತಮ್ಮ ದೇಹಸಂರಕ್ಷಣೆಗೂ, ದೇಹಪುಷ್ಟಿಗೂ ನಮ್ಮ ಪುರಾತನರೂ ಸಹ ಹೆಚ್ಚು ಗಮನವನ್ನು ಕೊಡುತ್ತಿರಲಿಲ್ಲವೆಂದೂ, ಅದಕ್ಕೆ

ಪ್ರತಿಯಾಗಿ ದೇಹವನ್ನು ದಂಡಿಸಿ ಕೃಶಪಡಿಸುವುದೇ ವಾಡಿಕೆಯಾಗಿದ್ದಿತೆಂದೂ, ನಮ್ಮ ಸಂಸ್ಕೃತಿಯ ಮೇಲೆ ಪಾಶ್ಚಾತ್ಯರು ದೋಷಾರೋಪಣೆ ಮಾಡುವುದುಂಟು. ನಮ್ಮ ಇತಿಹಾಸವನ್ನು ಪರೀಕ್ಷಿಸಿದರೆ ಈ ಆರೋಪಣೆಗೆ ಬುಡವಿಲ್ಲವೆಂಬುದೂ, ಅದಕ್ಕೆ ಪ್ರತಿಯಾಗಿ ದೇಹದ ಸೌಂದರ್ಯ ಮತ್ತು ಬೆಳವಳಿಗೆಗೆ ಗಮನಕೊಡುವುದರಲ್ಲಿ ಪುರಾತನಾರ್ಯರು ಪುರಾತನ ಗ್ರೀಕರಿಗಾಗಲಿ, ರೋಮನರಿಗಾಗಲಿ ಹಿಂದುಳಿದಿರಲಿಲ್ಲವೆಂಬುದೂ ವಿದಿತವಾಗುವುವು. ಅಲೆಗ್ಸಾಂಡರನನ್ನು ಎದುರಿಸಿದ ಪುರೂರವಸ್ಸೆಂಬ ದೊರೆಯು ಏಳು ಅಡಿ ಎತ್ತರವಾಗಿದ್ದನೆಂದು ಗ್ರೀಕರ ಬರವಣಿಗೆಯಿಂದಲೇ ತಿಳಿದುಬರುವುದು. ನಮ್ಮ ಪುರಾತನರು ದೇಹದಾರ್ಢ್ಯಕ್ಕೂ, ಪೂರ್ಣಾಯುಸ್ಸಿಗೂ ಹೆಚ್ಚು ಗಮನವನ್ನು ಕೊಡುತ್ತಿದ್ದರೆಂಬುದಕ್ಕೆ ಈಗಲೂ ವಾಡಿಕೆಯಲ್ಲಿರುವ ಆಶೀರ್ವಾದ ಮಂತ್ರಗಳು ಸಾಕ್ಷ್ಯವನ್ನು ಕೊಡುವುವು. ಆ ಮಂತ್ರಗಳಿಂದ ಅವರು ತಮ್ಮ ಆಯುಃಪರಿಮಿತಿಗೆ ಕೊಡುತ್ತಿದ್ದ ಸ್ಥಾನವು ಮನಗಾಣುವುದು.

ಅಂದಿನ ಚಿತ್ರದೊಡನೆ ಇಂದಿನ ಚಿತ್ರವನ್ನು ಹೋಲಿಸಿ ನೋಡೋಣವೇ? ಯಾವ ಭಾರತೀಯರು ನೂರುವರ್ಷಗಳಾದರೂ ಬದುಕಬೇಕೆಂಬ ಆಸೆಯುಳ್ಳವರಾಗಿದ್ದರೋ ಅದೇ ಭಾರತೀಯರ ಈಗಿನ ಸರಾಸರಿ ಆಯುಃಪರಿಮಿತಿಯನ್ನು ಈ ಗ್ರಂಥದ ಬೇರೆ ಕಡೆಯಲ್ಲಿ ನಿರೂಪಿಸಿರುವೆವು.[4] ಅಲ್ಲಿ ಕೊಟ್ಟಿರುವ ಅಂಕಿಗಳನ್ನು ಪರಿಶೀಲಿಸಿದರೆ ನಮ್ಮ ಆಸೆಯಲ್ಲಿ ಕಾಲು ಭಾಗದಷ್ಟೂ ನಮ್ಮ ಆಯಸ್ಸಿರುವಂತೆ ತೋರುವುದಿಲ್ಲ. ಇದು ಶೋಚನೀಯವಾದ ಅಂಶವಲ್ಲವೆ?

ಯಾವ ಭಾರತಭೂಮಿಯಲ್ಲಿ ಧನ್ವಂತರಿ, ಚರಕ, ಶುಶ್ರುತ ಮೊದಲಾದ ಪ್ರಸಿದ್ಧರಾದ ವೈದ್ಯರು ಜನಗಳ ರೋಗರುಜಿನಾದಿಗಳಿಗೆ ಸಂಜೀವಿನಿಯನ್ನು ಕಂಡುಹಿಡಿದು, ಅನೇಕವೇಳೆ ಯಮಧರ್ಮರಾಯನೊಡನೆಯೂ ಹೋರಾಡಿ, ಜೀವವನ್ನು ಉಳಿಸುವೆವೆಂಬ ಶ್ಲಾಘ್ಯವಾದ

ಗರ್ವವನ್ನು ಪ್ರದರ್ಶಿಸಲು ಶಕ್ತರಾಗಿದ್ದರೋ ಅದೇ ಭಾರತಭೂಮಿಯಲ್ಲಿ ಪ್ರತಿವರ್ಷವೂ ನಿವಾರಣೀಯವಾದ ರೋಗರುಜಿನಗಳಿಂದ ಸಾಯುವಷ್ಟು ಮಂದಿ, ಪಾಶ್ಚಾತ್ಯ ಪೌರಸ್ತ್ಯರಾಷ್ಟ್ರಗಳಲ್ಲಿ ಇನ್ನೆಲ್ಲಿಯೂ ಸಾಯುತ್ತಿಲ್ಲ ವೆಂದರೆ ನಾವು ನಾಚಿ ತಲೆ ಬಾಗಬೇಕಲ್ಲವೆ? ಈ ಕೆಳಗಿನ ಅಂಕಿಗಳನ್ನು ಪರೀಕ್ಷಿಸಿರಿ. ಅವು ಆಯಾ ರಾಷ್ಟ್ರದಲ್ಲಿ ಪ್ರತಿವರ್ಷವೂ ಸರಾಸರಿ ಸಾಯುತ್ತಿ ರುವವರ ಸಂಖ್ಯೆಯನ್ನು ಪ್ರದರ್ಶಿಸಲೋಸುಗ ಆರಿಸಿದುವು.

**ಕೆಲವು ರಾಷ್ಟ್ರಗಳಲ್ಲಿ ಮರಣದ ಪ್ರಮಾಣವನ್ನು ತೋರಿಸುವ ಪಟ್ಟಿ**

(1926–30 ರ ಸರಾಸರಿ)

| | | |
|---|---|---|
| ಇಂಡಿಯಾ | 24·3 | ಪ್ರತಿ 1000 ಜನಗಳಿಗೆ |
| ಜಪಾನ್ | 19·3 | |
| ಫ್ರಾನ್ಸ್ | 16·8 | |
| ಇಂಗ್ಲೆಂಡ್ | 12·3 | |
| ಜರ್ಮನಿ | 11·8 | |
| ಸಂಯುಕ್ತರಾಷ್ಟ್ರ | 11·8 | |
| ಕೆನಡ | 11·1 | |
| ಡೆನ್ಮಾರ್ಕ್ | 11·1 | |
| ಆಸ್ಟ್ರೇಲಿಯ | 9·3 | |

ನಮ್ಮ ನಾಡಿನಲ್ಲಿ ಸಾಯುವಷ್ಟು ಹೆಚ್ಚು ಮಂದಿ ಇನ್ನಾವ ನಾಡಿ ನಲ್ಲಿಯೂ ಸಾಯುತ್ತಿಲ್ಲವೆಂಬುದು ಮೇಲಿನ ಅಂಕಿಗಳಿಂದ ವಿದಿತವಾಗು ವುದು. ಕೆಲವರೇನೋ ಇದು ಬಹಳ ಒಳ್ಳೆಯದೇ ಎಂದು ವಾದಿಸುವರು. ಏಕೆಂದರೆ ಜನಸಂಖ್ಯೆಯ ವೃದ್ಧಿಯ ವೇಗದಲ್ಲಿ ನಮ್ಮ ದೇಶವು ಇತರ ದೇಶ ಗಳನ್ನು ಮೀರಿಸಿದೆ; ಆದುದರಿಂದ ಮರಣದವೇಗವು ಹೆಚ್ಚಿದಷ್ಟೂ ಅನು ಕೂಲವೇ ಎಂದು ಅವರ ಅಭಿಪ್ರಾಯ. ಜನನದ ಪ್ರಮಾಣವನ್ನು ತೋರಿ ಸುವ ಕೆಳಗಿನ ಅಂಕಿಗಳನ್ನು ಗಮನಿಸಿರಿ.

## ಕೆಲವು ದೇಶಗಳ ಜನನದ ಪ್ರಮಾಣ.[6]

(1926–30 ರ ಸರಾಸರಿ)

| | | | |
|---|---|---|---|
| ಇಂಡಿಯ | 33·3 | ಕೆನಡ | 24·1 |
| ಆಸ್ಟ್ರೇಲಿಯ | 21·0 | ಸಂಯುಕ್ತರಾಷ್ಟ್ರ | 19·7 |
| ಜರ್ಮನಿ | 18·4 | ಡೆನ್ಮಾರ್ಕ್ | 19·4 |
| ಫ್ರಾನ್ಸ್ | 18·2 | ಇಂಗ್ಲೆಂಡ್ | 17·2 |

ಈ ಅಂಕಿಗಳನ್ನು ವಿಮರ್ಶಿಸುತ್ತ ನಮ್ಮ ದೇಶದ ಜನಸಂಖ್ಯೆಯ ಬೆಳವಳಿಗೆಯನ್ನು ನೋಡಿ ಗಾಬರಿಗೊಂಡಿರುವ ಇಂಡಿಯಾ ಸೆನ್ಸಸ್ ಕಮಿಷನರಾದ ಹಟ್ಟ್‌ನ್ ಅವರು ನಮ್ಮ ದೇಶದಲ್ಲಿ ವೈದ್ಯ ಸಹಾಯವನ್ನು ಹೆಚ್ಚುಮಾಡುವುದಕ್ಕಿಂತ ಕಡಿಮೆ ಮಾಡುವುದೇ ಹಿತಕರವೆಂಬುದಾಗಿ ದುಃಖದಿಂದ ಹೇಳುವರು.[7] ಪ್ರತಿವರ್ಷದಲ್ಲಿಯೂ ಬ್ರಿಟಿಷ್ ಇಂಡಿಯಾ ದಲ್ಲಿ ಮಾತ್ರ ಸರಾಸರಿ 58,05,666 ಮಂದಿ ಸಾಯುತ್ತಿದ್ದರೂ ಹತ್ತು ವರ್ಷಗಳಲ್ಲಿಯೇ 3 ಕೋಟಿ 40 ಲಕ್ಷ ಜನಸಂಖ್ಯೆಯು ವೃದ್ಧಿಯಾದಾಗ ಯಾರಿಗೆತಾನೆ ಗಾಬರಿಯಾಗದು ? ಆದರೆ ಇದಕ್ಕೆ ಪರಿಹಾರೋಪಾಯವು ವೈದ್ಯರನ್ನು ಕಡಿಮೆಮಾಡುವುದರಲ್ಲಿಲ್ಲ; ಸಂತಾನವನ್ನು ನಿರೋಧಮಾಡುವ ಕ್ರಮವನ್ನು ಬಳಕೆಗೆ ತರುವುದರಲ್ಲಿದೆ. ಆದುದರಿಂದ ನಮ್ಮ ದೇಶದಲ್ಲಿ ಬಹುಮಂದಿ ಸಾಯುತ್ತಿರುವುದು ವಿಷಾದಕರವೇ. ಕಳೆದ ಹಲವು ವರ್ಷ ಗಳಿಂದಲೂ ನಮ್ಮ ಹಳ್ಳಿಗಳಲ್ಲಿಲ್ಲದಿದ್ದರೂ ನಗರಗಳಲ್ಲಿ ವೈದ್ಯಸಹಾಯವೂ ಬೆಳೆದಿದೆ; ನೈರ್ಮಲ್ಯವೂ ಹೆಚ್ಚಿದೆ; ಇದಲ್ಲದೆ ವೈದ್ಯಶಾಸ್ತ್ರವೂ ಕೂಡ ಅದ್ಭುತವಾದ ಬೆಳವಳಿಗೆಯನ್ನು ಪ್ರದರ್ಶಿಸಿದೆ. ಆದರೂ ನಮ್ಮ ದೇಶದಲ್ಲಿ ಸಾಯುವವರ ಸಂಖ್ಯೆಯು ಮಾತ್ರ ಕಡಿಮೆಯಾಗುತ್ತಾ ಇಲ್ಲ.

ಸಾವು ಸರ್ವರಿಗೂ ಸ್ವಾಭಾವಿಕ. ಸ್ವಾಭಾವಿಕಕಾರಣದಿಂದಾಗುವ ಸಾವನ್ನು ಮನುಷ್ಯನು ತಪ್ಪಿಸಲಾರನು; ಅದಕ್ಕಾಗಿ ವ್ಯಸನಪಟ್ಟರೂ ಪ್ರಯೋಜನವಿಲ್ಲ. ಆದರೆ ಕೆಟ್ಟಪದ್ಧತಿಗಳಿಂದಲೂ ನಿವಾರಣೀಯವಾದ

ರೋಗರುಜಿನಗಳಿಂದಲೂ ಸಾಯುವುದರಿಂದ ಜನಾಂಗಕ್ಕೆ ಹೆಚ್ಚು ಹಾನಿಯುಂಟು. ಆದುದರಿಂದ ನಮ್ಮ ದೇಶದಲ್ಲಿ ಸಾಯುವವರ ಸಂಖ್ಯೆಯನ್ನು ಕಡಿಮೆಮಾಡಲು ಸಾಧ್ಯವೆ ಎಂಬುದನ್ನು ವಿಮರ್ಶಿಸಬೇಕಾದರೆ, ಸಾವಿನ ಕಾರಣವನ್ನು ವಿಮರ್ಶಿಸಬೇಕು. ಹಾಗೆ ವಿಮರ್ಶಿಸಿದರೆ ಸಹಜವಾದ ಕಾರಣದಿಂದ ಸಾಯುವವರಿಗಿಂತ ನೂರ್ಮಡಿ ಮಿಗಿಲಾಗಿ ನಿವಾರಣೀಯವಾದ ಕಾರಣಗಳಿಂದ ಭಾರತೀಯರು ಸಾಯುತ್ತಿರುವುದು ಗೋಚರವಾಗುವುದು. ಉದಾಹರಣೆ: ಬ್ರಿಟಿಷ್ ಇಂಡಿಯಾದಲ್ಲಿ 1932 ನೆಯ ಇಸವಿಯಲ್ಲಿ ಸತ್ತ 58,05,666 ಜನಗಳಲ್ಲಿ 15,27,432 ಮಂದಿ ಒಂದು ವರ್ಷವೂ ಬದುಕದಿದ್ದ ಮಕ್ಕಳು; 10,10,427 ಮಂದಿ 5 ವರ್ಷಗಳೊಳಗಿದ್ದ ಮಕ್ಕಳು; 3,00,048 ಮಂದಿ 5-10 ವರ್ಷ ವಯಸ್ಸಿನವರು; ಎಂದು ತಿಳಿದುಬರುವುದು. ಅಂದರೆ ಸತ್ತವರಲ್ಲಿ ಶೇಕಡ 48 ಮಂದಿ ಹತ್ತುವರ್ಷದೊಳಗಿನ ಮಕ್ಕಳೆಂಬುದು ವಿದಿತವಾಗುವುದು.[8] ಇಷ್ಟುಮಂದಿ ಮಕ್ಕಳು ಸಾಯುವುದು ಸಹಜವೆಂದು ಯಾರೂ ಹೇಳಲಾರರು. ಇಂತಹ ಶಿಶು ಮರಣಕ್ಕೆ ಅನೇಕ ಕಾರಣಗಳಿರುವುವು. ಆದರೆ ಆ ಕಾರಣಗಳೆಲ್ಲವೂ ನಿವಾರಣೀಯವಾದುವೆಂಬುದಕ್ಕೆ ಸ್ವಲ್ಪವೂ ಸಂಶಯವಿಲ್ಲ. 1931 ನೆಯ ಇಸವಿಯ ಮೈಸೂರು ಸೆನ್ಸಸ್ ವರದಿಯಲ್ಲಿ ನಮ್ಮ ನಾಡಿನ ಶಿಶುಗಳ ಮರಣಕ್ಕೆ ಮುಖ್ಯವಾದ ಕಾರಣಗಳು ಈ ಬಗೆಯಲ್ಲಿ ವರ್ಣಿತವಾಗಿವೆ.[9]

(1) ಬಡತನ.

(2) ಅಜ್ಞಾನ—ಮಕ್ಕಳ ಪೋಷಣೆಯಲ್ಲಿ, ಬಾಣಂತಿಯರನ್ನು ಕಾಪಾಡುವುದರಲ್ಲಿ.

(3) ಆರೋಗ್ಯ ನಿಯಮಗಳ ಉಲ್ಲಂಘನೆ.

(4) ಚಿಕ್ಕಂದಿನಲ್ಲಿಯೇ ಮಕ್ಕಳನ್ನು ಹೆರುವುದು.—ಬಾಲ್ಯವಿವಾಹದ ಫಲಿತಾಂಶವಾಗಿ.

(5) ಗಾಳಿ, ಬೆಳಕು, ನೈರ್ಮಲ್ಯ—ಇವುಗಳಿಗವಕಾಶವಿಲ್ಲದ ವಾಸಸ್ಥಳ.

(6) ಮಕ್ಕಳಿಗೂ ಬಾಣಂತಿಯರಿಗೂ ಸರಿಯಾದ ಆಹಾರವಿಲ್ಲದಿರುವಿಕೆ—ಅದರಲ್ಲಿಯೂ ಉತ್ತಮವಾದ ಹಾಲಿಲ್ಲದಿರುವಿಕೆ.

ಇನ್ನೂ ಅನೇಕ ಕಾರಣಗಳಿವೆ. ನಾವು ಮೇಲ್ಕಂಡ ಕಾರಣಗಳನ್ನು ಸೂಚಿಸಿರುವುದು ಅವುಗಳೆಲ್ಲವೂ ನಿವಾರಣೀಯವಾದುವೆಂಬುದನ್ನು ಪ್ರದರ್ಶಿಸುವುದಕ್ಕೆ. ಅನೇಕ ದೇಶಗಳು ಇಂತಹ ನಿವಾರಣೀಯವಾದ ತೊಡಕುಗಳನ್ನು ಪರಿಹರಿಸಿಕೊಂಡಿವೆ; ಮತ್ತು ಪ್ರತಿದಿನವೂ ಪರಿಹರಿಸಿಕೊಳ್ಳುತ್ತಿವೆ. ಆದುದರಿಂದಲೇ ಅಲ್ಲವೆ ನಮ್ಮ ನಾಡಿನಲ್ಲಿ ಸಾಯುವಷ್ಟು ಮಂದಿ ಮಕ್ಕಳು ಇನ್ನಾವ ನಾಡಿನಲ್ಲಿಯೂ ಸಾಯದೆ ಇರುವುದು ! ಈ ಅಂಕಿಗಳಿಂದ ಈ ವಿಷಯವು ವಿದಿತವಾಗುವುದು.

**ಕೆಲವು ದೇಶಗಳಲ್ಲಾಗುವ ಶಿಶುಮರಣದ ದರವನ್ನು ತೋರಿಸುವ ಅಂಕಿಗಳು.**[10]

(1926-30 ರ ಸರಾಸರಿ)

| | | |
|---|---|---|
| ಬ್ರಿಟಿಷ್ ಇಂಡಿಯ | 178 | ಹುಟ್ಟಿದ ಸಾವಿರ ಮಕ್ಕಳಲ್ಲಿ ಒಂದು ವರ್ಷದೊಳಗೆ ಸತ್ತುವು. |
| ಈಜಿಪ್ಟ್ | 152 | |
| ಜಪಾನ್ | 137 | |
| ಜರ್ಮನಿ | 94 | |
| ಕೆನಡ | 93 | |
| ಫ್ರಾನ್ಸ್ | 89 | |
| ಡೆನ್ಮಾರ್ಕ್ | 83 | |
| ಇಂಗ್ಲೆಂಡ್ ಮತ್ತು ವೇಲ್ಸ್ | 68 | |
| ಸಂಯುಕ್ತರಾಷ್ಟ್ರ | 68 | |

ಸಮಾಜದ ಆರೋಗ್ಯನಿಯಮಗಳಿಗೂ ವೈದ್ಯಸಹಾಯಕ್ಕೂ ಹೆಚ್ಚು ಗಮನವನ್ನು ಕೊಡುತ್ತಿರುವ ಪಾಶ್ಚಾತ್ಯದೇಶಗಳಲ್ಲಿ ಶಿಶುಮರಣವು ಎಷ್ಟು ಕಡಿಮೆಯಾಗಿದೆ ಎಂಬುದು ಮೇಲ್ಕಂಡ ಅಂಕಿಗಳಿಂದ ವ್ಯಕ್ತವಾಗುವುದು.

ಶಿಶುಮರಣವನ್ನು ಹಿಂಬಾಲಿಸಿ, ಅದರಂತೆಯೇ ಕ್ರೂರವಾದ ಇನ್ನೊಂದು ಸಮಸ್ಯೆಯು ನಮ್ಮ ದೇಶದಲ್ಲಾಗುತ್ತಿರುವ ತಾಯಂದಿರ ಮರಣ. ಬಾಲ್ಯವಿವಾಹ, ಘೋಷಾ ಪದ್ಧತಿ ಮೊದಲಾದ ಸಾಮಾಜಿಕ ದೋಷಗಳ ಫಲಿತಾಂಶ, ಮಕ್ಕಳನ್ನು ಹೆರುವ ಶಕ್ತಿಯು ಕಡಿಮೆಯಾಗಿರುವ ವಯಸ್ಸಿನಲ್ಲಿಯೇ ಗರ್ಭಿಣಿಯರಾಗುವುದು, ಬಾಣಂತಿಯ ಪೋಷಣೆಗೂ ಸಹಾಯಕ್ಕೂ ಹೆಚ್ಚು ಗಮನವನ್ನು ಕೊಡದಿರುವುದು, ಅದರಲ್ಲಿಯೂ ಹಳ್ಳಿಗಳಲ್ಲಿ ಇದು ಹೀನಾಯವಾದ ಕೆಲಸವೆಂಬ ಭಾವನೆಯಿಂದ ಅಜ್ಞರಾದ ದಾದಿಗಳಿಗೆ ಈ ಕೆಲಸವನ್ನು ವಹಿಸುವುದು, ಸಾಮಾನ್ಯವಾಗಿ ಗಾಳಿ ಬೆಳಕುಗಳಿಗವಕಾಶವಿಲ್ಲದ ಕತ್ತಲೆಯ ಕೋಣೆಯನ್ನೇ ಹೆರಿಗೆಯ ಮನೆಯಾಗಿ ಉಪಯೋಗಿಸುವುದು—ಈ ಕಾರಣಗಳಿಂದ ಬಹುಮಂದಿ ಬಾಣಂತಿಯರು ಸಾಯುತ್ತಿದ್ದಾರೆ. ಸರ್ ಜಾರ್ಜ್ ಮೆಗಾ ಎಂಬ ವೈದ್ಯರ ಹೇಳಿಕೆಯನ್ನು ನೋಡಿರಿ. "ಚಿಕ್ಕ ವಯಸ್ಸಿನ ತಾಯಂದಿರಲ್ಲಿ 1000 ಕ್ಕೆ 100 ರಂತೆ ಹೆರಿಗೆಯ ಕಾಲದಲ್ಲಿ ಸಾಯುತ್ತಿರುವರು. ಪ್ರತಿ ವರ್ಷವೂ ಭಾರತಭೂಮಿಯಲ್ಲಿ ಎರಡು ಲಕ್ಷಕ್ಕೆ ಕಡಿಮೆಯಿಲ್ಲದೆ ಹೆರಿಗೆಯಾದ ಕೂಡಲೇ ತಾಯಂದಿರು ಸಾಯುತ್ತಿರುವರು.[11]" ನಾವು ಮೇಲೆ ವಿವರಿಸಿರುವ ಈ ನಷ್ಟದ ಕಾರಣಗಳನ್ನು ಗಮನಿಸಿದರೆ ಅವುಗಳೆಲ್ಲವೂ ನಿವಾರಣೀಯವಾದುವೆಂಬುದು ವಿದಿತವಾಗುವುದು. ಇಂಡಿಯಾ ಸೆನ್ಸಸ್ ಕಮಿಷನರು ಹೇಳುವಂತೆ ನಮಗೆ ನಿಜವಾಗಿಯೂ ಬೇಕಾಗಿರುವುದು ಹೆಚ್ಚು ಸಂಖ್ಯೆಯ ಮಕ್ಕಳಲ್ಲ; ದೃಢಕಾಯರಾದ ಮಕ್ಕಳು. ಬಾಲ್ಯದಲ್ಲಿಯೇ ಬಾಣಂತಿಯರಾಗುವುದನ್ನು ತಪ್ಪಿಸಬೇಕು; ಜನರ ಜೀವನದ ಅಂತಸ್ತನ್ನು ಉತ್ತಮಪಡಿಸಬೇಕು; ಮತ್ತು ಇಷ್ಟೊಂದು ಮರಣಕ್ಕೆ ಕಾರಣವಾದ ಸನ್ನಿವೇಶವನ್ನು ಬದಲಾಯಿಸಬೇಕು. ಇವುಗಳೆಲ್ಲ ಸುಲಭಸಾಧ್ಯಗಳೇ.

ನಾವು ಶಿಶುಮರಣವನ್ನೂ, ಮತ್ತು ತಾಯಂದಿರ ಮರಣವನ್ನೂ ಮೊದಲು ವಿಮರ್ಶಿಸುವುದಕ್ಕೆ ಕಾರಣವೇನೆಂದರೆ, ಈ ಎರಡೂ ಬಹು

ಮಟ್ಟಿಗೆ ನಿವಾರಣೀಯಗಳಾಗಿವೆ ಎಂದು. ಸಾಮಾಜಿಕ ಪದ್ಧತಿಯನ್ನೂ ಮತ್ತು ನಮ್ಮ ಆರೋಗ್ಯನಿಯಮಗಳನ್ನೂ ಕ್ರಮಪಡಿಸಿಕೊಂಡರೆ, ಈ ಮೇಲ್ಕಂಡ ಕಾರಣಗಳಿಂದಾಗುವ ಸಾವನ್ನು ಸಂಪೂರ್ಣವಾಗಿ ತೊಡೆದು ಹಾಕುವುದು ಅಸಾಧ್ಯವಾದರೂ, ಬಹುವಾಗಿ ಕಡಿಮೆಮಾಡಬಹುದು. ಹಿಂದೆ ಇಂಗ್ಲೆಂಡ್‌ದೇಶದಲ್ಲಿ ನಮ್ಮ ನಾಡಿನಂತೆಯೇ ಬಹಳ ಮಕ್ಕಳು ಹುಟ್ಟಿದ ಒಂದು ವರ್ಷದೊಳಗೇ ಸಾಯುತ್ತಿದ್ದುವು. ಆದರೆ ಸಾಮಾನ್ಯವಾದ ಆರೋಗ್ಯನಿಯಮಗಳು ಬಳಕೆಗೆ ಬಂದಂತೆಲ್ಲ ಮತ್ತು ವೈದ್ಯಸಹಾಯವು ಬೆಳೆದಂತೆಲ್ಲ ಈ ಶಿಶುಮರಣವು ಬಹುಮಟ್ಟಿಗೆ ಕಡಿಮೆಯಾಗಿರುವುದು. ಈ ಅಂಕಿಗಳು ಆ ವಿಷಯವನ್ನು ಸ್ಪಷ್ಟಪಡಿಸುವುವು.

**ಇಂಗ್ಲೆಂಡ್ ಮತ್ತು ವೇಲ್ಸಿನಲ್ಲಿ ಶಿಶುಮರಣಗಳ ದರವು ಇಳಿಯುತ್ತಿರುವುದನ್ನು ತೋರಿಸುವ ತಃಖ್ತೆ.**[12]

ಜನಿಸಿದ ಒಂದು ಸಾವಿರ ಮಕ್ಕಳಲ್ಲಿ ಒಂದು ವರ್ಷದೊಳಗೆ ಮರಣಹೊಂದಿದ ಮಕ್ಕಳ ಸಂಖ್ಯೆ.

| | |
|---|---|
| 1850-5 | 156 |
| 1870-75 | 153 |
| 1891-95 | 151 |
| 1896-1900 | 156 |
| 1902-5 | 138 |
| 1906-10 | 117 |
| 1911-5 | 110 |
| 1916 | 89 |
| 1924 | 75 |
| 1926 | 70 |

ಶಿಶುಮರಣ ಮತ್ತು ತಾಯಂದಿರ ಮರಣದ ವಿಷಯದಲ್ಲಿ ಹೇಗೋ ಹಾಗೆಯೇ ಇತರ ವಿಧವಾದ ಸಾವುಗಳಲ್ಲಿಯೂ ನಿವಾರಣೀಯವಾದುವು

ಹೆಚ್ಚಾಗಿವೆ. ಈ ದೃಷ್ಟಿಯಿಂದ ನಮ್ಮ ನಾಡಿನಲ್ಲಿ ಪ್ರಬಲವಾಗಿರುವ ಕೆಲವು ವ್ಯಾಧಿಗಳ ವ್ಯಾಪ್ತಿಯನ್ನು ವಿಮರ್ಶಿಸೋಣ. ಕೆಳಗಿನ ಪಟ್ಟಿಗಳು ಬ್ರಿಟಿಷ್ ಇಂಡಿಯಾದಲ್ಲಿಯೂ ಮೈಸೂರಿನಲ್ಲಿಯೂ ಲೆಕ್ಕಕ್ಕೆ ಸಿಕ್ಕಿರುವ ಮರಣಗಳ ಕಾರಣಗಳಲ್ಲಿ ಮುಖ್ಯವಾದವುಗಳನ್ನು ನಿರೂಪಿಸುವುವು.

### (1) ಬ್ರಿಟಿಷ್ ಇಂಡಿಯಾದಲ್ಲಿ ಹರಡಿರುವ ರೋಗಗಳಿಂದ ಆದ ಮರಣಗಳ ವ್ಯಾಪ್ತಿಯನ್ನು ತೋರಿಸುವ ಅಂಕಿಗಳು.[13]

(ಒಟ್ಟು 1923-32 ರ ಸರಾಸರಿ ಮರಣ 62,70,619)

| | |
|---|---|
| ಜ್ವರಗಳು | 36,80,165 |
| ಆಮಶಂಕೆ ಮತ್ತು ಭೇದಿ | 2,28,945 |
| ವಾಂತಿಭೇದಿ | 2,19,740 |
| ಶ್ವಾಸಕೋಶಕ್ಕೆ ಸಂಬಂಧಪಟ್ಟ ವ್ಯಾಧಿ | 3,70,047 |
| ಪ್ಲೇಗು | 1,25,946 |
| ಸಿಡುಬು | 74473 |
| ಇತರ ರೋಗಗಳು | 15,71,303 |

### (2) ಮೈಸೂರು ದೇಶದಲ್ಲಿ 1931 ನೆಯ ಇಸವಿಯಲ್ಲಿ ಮರಣ ಹೊಂದಿದವರ ಸಂಖ್ಯೆಯನ್ನೂ ಕಾರಣವನ್ನೂ ತೋರಿಸುವಪಟ್ಟಿ.[14]

| | |
|---|---|
| ಜ್ವರಗಳು | 40,399 |
| ಪ್ಲೇಗು | 5,715 |
| ವಾಂತಿಭೇದಿ | 6,385 |
| ಸಿಡುಬು | 2,296 |
| ಆಮಶಂಕೆ-ಭೇದಿ | 3,899 |
| ಶ್ವಾಸಕೋಶದ ರೋಗಗಳು | 3,232 |
| ಇನ್‌ಫ್ಲುಯಂಜ | 1,552 |
| ಇತರ ಕಾರಣಗಳು | 30,780 |

ಮೇಲ್ಕಂಡ ಪಟ್ಟಿಗಳು ರೋಗಗಳ ವ್ಯಾಪ್ತಿಯನ್ನು ಸಂಪೂರ್ಣವಾಗಿ ತೋರಿಸುವುದಿಲ್ಲ. ನಮ್ಮ ನಾಡಿನಲ್ಲಿ ಜನನ ಮರಣದ ಲೆಕ್ಕವನ್ನು

ಕ್ರಮವಾಗಿಡುತ್ತಾ ಇಲ್ಲ. ಆದರಲ್ಲಿಯೂ ನಮ್ಮ ಹಳ್ಳಿಗಳಿಂದ ಬರುವ ಲೆಕ್ಕಗಳು ನಂಬಲರ್ಹವೆಂದು ಯಾರೂ ಹೇಳಲಾರರು. ಅನೇಕವೇಳೆ ಸಾವಿನ ಕಾರಣವನ್ನು ಹೇಳಬಲ್ಲ ವೈದ್ಯರೇ ಹಳ್ಳಿಗಳಲ್ಲಿ ದೊರೆಯುವುದಿಲ್ಲ; ಇದಲ್ಲದೆ ಈ ರೋಗಗಳಿಂದ ಪೀಡಿತರಾದವರಲ್ಲಿ ಅನೇಕರು ಸಾಯುವುದಿಲ್ಲ. ಈ ಎರಡು ಕಾರಣಗಳಿಂದಲೂ ನಮ್ಮ ದೇಶದಲ್ಲಿರುವ ನಾನಾ ರೋಗಗಳ ವ್ಯಾಪ್ತಿಯನ್ನು ನಾವು ಚೆನ್ನಾಗಿ ತಿಳಿಯುವುದು ಅಸಾಧ್ಯ. ಆದರೆ ಸಾಯುವವರ ಸಂಖ್ಯೆಯನ್ನೂ ಆಸ್ಪತ್ರೆಗಳಲ್ಲಿ ಔಷಧಿಯನ್ನು ತೆಗೆದುಕೊಂಡಿರುವವರ ಸಂಖ್ಯೆಯನ್ನೂ ಕೂಡಿಸಿ ಅದರೊಡನೆ ವೈದ್ಯಸಹಾಯವಿಲ್ಲದೆಯೇ ನರಳುವವರೆಷ್ಟುಮಂದಿ ಎಂಬುದನ್ನು ಊಹಿಸಿದರೆ ರೋಗರುಜಿನಗಳ ಪ್ರಭಾವವು ನಿಮಗೆ ಸ್ವಲ್ಪ ತಿಳಿದಂತಾಗುವುದು.

ಈ ರೋಗರುಜಿನಗಳಿಂದ ನಮಗೆ ನಾನಾಬಗೆಯ ನಷ್ಟವುಂಟು. ಅವುಗಳಲ್ಲಿ ಸಾವು ಒಂದು ಬಗೆಯ ನಷ್ಟ; ಆದರೆ ಇದಕ್ಕಿಂತಲೂ ನೂರ್ಮಡಿಯಾದ ತೊಂದರೆಯು ಜನರ ಮನದಲ್ಲುಂಟಾಗುವ ನಿರುತ್ಸಾಹ. ರೋಗಪೀಡಿತರಾದ ಜನರು ಎಂದೆಂದಿಗೂ ಸಂತೋಷಚಿತ್ತರಾಗಿರಲಾರರು. ಸಂತೋಷವಿಲ್ಲದೆ ಯಾವ ಕೆಲಸವನ್ನೂ ಸಮರ್ಪಕವಾಗಿ ಮಾಡಲಾಗುವುದಿಲ್ಲ. ಸಮರ್ಪಕವಾಗಿ ಕೆಲಸಮಾಡಿದರೂ ಹೊಟ್ಟೆಹೊರೆಯುವುದು ಕಷ್ಟವಾಗಿರುವಾಗ ರೋಗಪೀಡಿತರ ಕೆಲಸದ ಫಲವನ್ನು ಕೇಳಬೇಕೆ! ಅದರಲ್ಲಿಯೂ ಮಲೇರಿಯ, ಕೊಕ್ಕೆ ಹುಳುವಿನ ರೋಗ ಮೊದಲಾದ ರೋಗಗಳಿಂದ ಜೀವಚ್ಛವಗಳಾಗಿರುವ ನಮ್ಮ ರೈತರು ದರಿದ್ರನಾರಾಯಣನ ಸೇವೆಯನ್ನೆಂತು ತಪ್ಪಿಸಿಕೊಳ್ಳುವರು? ಜೊತೆಗೆ ನಮ್ಮ ಸಾಮಾಜಿಕ ಪದ್ಧತಿಗಳೋ! ಅವೂ ವಿಲಕ್ಷಣ. ರೋಗಗಳಿಂದೊದಗುವ ಕಷ್ಟವನ್ನು ಇನ್ನೂ ಹೆಚ್ಚಿಸುವಂತಿವೆ; ಸತ್ತವರಿಗಿಂತ ಬದುಕಿರುವವರಿಗೇ ಹೆಚ್ಚು ತೊಂದರೆಯನ್ನು ಕಲ್ಪಿಸುತ್ತಿವೆ. ರೈತರು ಸಾಲದ ಬಲೆಯಲ್ಲಿ ಹೆಚ್ಚು ಹೆಚ್ಚಾಗಿ ತೊಡರಿಕೊಳ್ಳುತ್ತಿದ್ದಾರೆ. ಇದಲ್ಲದೆ ನಮ್ಮ ದೇಶದ ಜಮೀನು ಹಂಚುವಿಕೆಯ

ಪದ್ಧತಿಯಲ್ಲಿರುವ ದೋಷಗಳಿಗೂ ರೈತರ ಅಕಾಲಮರಣವೇ ಕಾರಣವೆಂದು ಹೇಳಬಹುದು. ನಮ್ಮ ನಾಡಿನಲ್ಲಿರುವ ರೋಗರುಜಿನಗಳನ್ನು ಬಹುಮಟ್ಟಿಗೆ ಕಡಿಮೆಮಾಡಬಹುದೆಂದು ನಾವು ಒತ್ತಿ ಒತ್ತಿ ಹೇಳುತ್ತಿರುವೆವು. ಇದು ಎಷ್ಟರಮಟ್ಟಿಗೆ ಸಾಧ್ಯವೆಂಬುದನ್ನು ವಿಮರ್ಶಿಸಬೇಕಾದರೆ ನಮ್ಮ ಜನಗಳು ಇಷ್ಟು ರೋಗಪೀಡಿತರಾಗಿರಲು ಸಾಮಾನ್ಯಕಾರಣಗಳಾವುವು ಎಂಬುದನ್ನು ಪರೀಕ್ಷಿಸಬೇಕು. ಪ್ಲೇಗು, ಕಾಲರ, ಮಲೇರಿಯ ಮೊದಲಾದ ಪ್ರತಿಯೊಂದು ಖಾಯಿಲೆಗೂ ಪ್ರತ್ಯೇಕವಾದ ಕಾರಣಗಳಿರುವುವು. ವೈದ್ಯಶಾಸ್ತ್ರವು ಅಂತಹ ಕಾರಣಗಳನ್ನೆಲ್ಲ ಕಂಡುಹಿಡಿದು, ಅವುಗಳಿಗೆ ತಕ್ಕ ಪ್ರತೀಕಾರವನ್ನೂ ಕಂಡುಹಿಡಿದಿರುವುದು. ಅವುಗಳನ್ನು ಇಲ್ಲಿ ಚರ್ಚಿಸಬಯಸುವುದಿಲ್ಲ. ಆದರೆ ಅವುಗಳಿಗಿಂತಲೂ ಮುಖ್ಯವಾದ ಬೇರೊಂದು ಬಗೆಯ ಕಾರಣಗಳನ್ನು ಇಲ್ಲಿ ಚರ್ಚಿಸುವೆವು. ಎಲ್ಲಾ ವಿಧವಾದ ರೋಗಗಳ ಹರಡುವಿಕೆಗೂ ನಮ್ಮ ಭರತಭೂಮಿಯು ಉತ್ತಮಕ್ಷೇತ್ರವಾಗಿರಲು ಕಾರಣವೇನು ? ಎಂಬ ವಿಷಯವನ್ನು ಸ್ವಲ್ಪಮಟ್ಟಿಗೆ ನಾವು ವಿಮರ್ಶಿಸೋಣ.

1. **ವಾಯುಗುಣ**—ನಮ್ಮ ದೇಶವು ಉಷ್ಣವಲಯದಲ್ಲಿದೆ. ವಾಯುಗುಣದಲ್ಲಿ ತಟ್ಟನೆ ಆಗುವ ವೈಪರೀತ್ಯವು ಜನಗಳ ದೇಹಬಲವನ್ನು ಬಹುಮಟ್ಟಿಗೆ ಕುಗ್ಗಿಸುವುದು; ಅಲ್ಲದೆ ರೋಗವನ್ನು ಹರಡುವ ಅನೇಕ ವಿಧವಾದ ಬ್ಯಾಕ್ಟೀರಿಯಾಗಳಿಗೆ ಅನುಕೂಲವಾದ ಸನ್ನಿವೇಶವನ್ನು ಕಲ್ಪಿಸಿಕೊಡುವುದು. ಆದುದರಿಂದ ನಮ್ಮ ಕಷ್ಟಕ್ಕೆ ಬಹುಮಟ್ಟಿಗೆ ನಮ್ಮ ವಾಯುಗುಣವು ಒಂದು ಕಾರಣವೆನ್ನಬಹುದು.

2. **ಆಹಾರ**—ನಮ್ಮ ರೈತರಲ್ಲಿ ಬಹುಮಂದಿಗೆ ದೇಹದ ಬೆಳವಳಿಗೆಗೂ, ಪುಷ್ಟಿಗೂ, ಆರೋಗ್ಯಕ್ಕೂ ಬೇಕಾಗುವಷ್ಟು ಆಹಾರವು ದೊರೆಯುವುದಿಲ್ಲವೆಂಬಂಶವನ್ನು ಈ ಗ್ರಂಥದ ಪೀಠಿಕಾಪ್ರಕರಣದಲ್ಲಿಯೂ ಮತ್ತು ರೈತರ ಜೀವನದ ಅಂತಸ್ತನ್ನು ವಿಮರ್ಶಿಸುವಾಗಲೂ ಚರ್ಚಿಸಿರುವೆವು.

ಇತ್ತೀಚೆಗೆ ಪಾಶ್ಚಾತ್ಯದೇಶಗಳಲ್ಲಿ ಜನರು ಉಪಯೋಗಿಸುತ್ತಿರುವ ಆಹಾರಕ್ಕೂ ಜನರ ಆರೋಗ್ಯಕ್ಕೂ ಇರುವ ಸಂಬಂಧವನ್ನು ಕೂಲಂಕಷವಾಗಿ ಪ್ರಯೋಗಗಳ ಮೂಲಕ ನಿರ್ಧರಿಸುತ್ತಿರುವರು. ಈಗಾಗಲೇ ಲೀಗ್ ಆಫ್ ನೇಷನ್ಸ್ ಸಮಿತಿಯ ಆರೋಗ್ಯಶಾಖೆಯವರು ಈ ವಿಷಯಕ್ಕೆ ಸಂಬಂಧಪಟ್ಟ ಕೆಲವು ಪ್ರಯೋಗಗಳ ಫಲಿತಾಂಶವನ್ನು ನಾನಾದೇಶಗಳ ಜನರ ಆಹಾರನಿಯಮಗಳೊಡನೆ ತುಲನೆಮಾಡಿ ಗ್ರಂಥಗಳನ್ನು ರಚಿಸಿರುವರು. ನಮ್ಮ ದೇಶದಲ್ಲಿ ಸರ್ ರಾಬರ್ಟ್ ಮೆಕ್ಕಾರಿರ್ಸ ಮತ್ತು ಡಾಕ್ಟರ್ ಆಕ್ರಾಯಡ್ ಮೊದಲಾದ ಮಹನೀಯರು ಕೆಲವು ಪ್ರಯೋಗಗಳನ್ನು ಮಾಡಿರ್‍ವರು. ವೈಜ್ಞಾನಿಕರು ಯಾವ ಬಗೆಯ ಆಹಾರವು ಆವಶ್ಯಕವೆಂದು ಹೇಳ್‍ವರೋ ಆ ಆಹಾರಕ್ಕೂ ನಮ್ಮ ರೈತರು ಉಪಯೋಗಿಸುತ್ತಿರುವ ಆಹಾರಕ್ಕೂ ಬಹಳ ಅಂತರವಿದೆಯೆಂಬುದನ್ನು ನಾವು ಹೇಳಬೇಕಾದುದೇ ಇಲ್ಲ. ಮೊದಲು ಎಷ್ಟು ಆಹಾರವು ಬೇಕೋ ಅಷ್ಟು ದೊರೆಯುತ್ತಿಲ್ಲವೆಂಬುದು ಒಂದು ಮುಖ್ಯವಾದ ಕೊರತೆ. ಜನಸಂಖ್ಯೆಯು ಬೆಳೆದಷ್ಟೂ ರೈತನ ಸಂಪಾದನೆಯು ಬೆಳೆಯದಿರುವುದರಿಂದ ಈ ಕೊರತೆಯು ದಿನೇ ದಿನೇ ಬೆಳೆಯುತ್ತಿರುವುದು. ಇದಲ್ಲದೆ ದೊರೆಯುತ್ತಿರುವ ಆಹಾರದಲ್ಲಿ ಪುಷ್ಟಿಕರವಾದ ಅಂಶವು ಹೆಚ್ಚಾಗಿಲ್ಲವೆಂಬುದನ್ನು ನಾವು ಮರೆಯಬಾರದು. ಹಾಲು, ಮೊಸರು, ಬೆಣ್ಣೆ, ತರಕಾರಿ, ಹಣ್ಣುಹಂಪಲು, ಮಾಂಸ, ಮೊಟ್ಟೆ—ಇವುಗಳು ದೇಹದ ಬೆಳವಳಿಗೆಗೆ ಅವಶ್ಯವಾದ ಸಾಮುಗ್ರಿಗಳನ್ನು ಹೊಂದಿರುವುವು. ಆದರೆ ನಮ್ಮ ರೈತರಲ್ಲಿ ಎಷ್ಟು ಮಂದಿಗೆ ಈ ಪದಾರ್ಥಗಳು ದೊರೆಯುತ್ತಿವೆ ಎಂಬಂಶವು ಎಲ್ಲರಿಗೂ ತಿಳಿದ ವಿಷಯ. ಪ್ರಾಯಃ ಮನುಷ್ಯನು ಉಪಯೋಗಿಸುವ ಆಹಾರದಲ್ಲೆಲ್ಲ ಹಾಲಿಗಿಂತಲೂ ಶ್ರೇಷ್ಠವಾದ ಆಹಾರವು ಮತ್ತಾವುದೂ ಇಲ್ಲ. ಹಿಂದೆಯೇ ಹೇಳಿರುವಂತೆ ಪಶುಪಾಲನೆಯಲ್ಲಿ ಹಿರಿಯ ದೇಶವೆಂದು ಹೆಸರುಗೊಂಡಿರುವ ನಮ್ಮ ನಾಡಿನಲ್ಲಿ ಶಿಶುಗಳಿಗೂ ಬಾಣಂತಿಯರಿಗೂ ಕೂಡ ಸಾಕಾಗು

ವಷ್ಟು ಹಾಲು ದೊರೆಯುತ್ತಾ ಇಲ್ಲವೆಂಬುದು ಶೋಚನೀಯವಾದ ವಿಷಯವಲ್ಲವೆ ! ನಮ್ಮ ನಾಡಿನಲ್ಲಿ ಉಪಯೋಗಿಸುತ್ತಿರುವ ಆಹಾರಕ್ಕೂ, ನಮ್ಮ ಜನಗಳ ದೌರ್ಬಲ್ಯಕ್ಕೂ ಇರುವ ಸಂಬಂಧವನ್ನು ಚರ್ಚಿಸುತ್ತ ಸರ್ ರಾಬರ್ಟ್ ಮೆಕ್ಕಾರಿಸನ್‌ರವರು ಈ ಮಾತನ್ನು ಹೇಳುವರು. "ಅನೇಕಕೋಟಿ ಭಾರತೀಯರ ಆಹಾರವು ಅವರನ್ನು ಬಲಿಷ್ಠರನ್ನಾಗಿಯೂ ಆರೋಗ್ಯಶಾಲಿಗಳನ್ನಾಗಿಯೂ ಇರಿಸಲು ತಕ್ಕುದಾಗಿಲ್ಲ; ಬಹುಮಂದಿ ತಮ್ಮ ತಾಯಂದಿರ ಹೊಟ್ಟೆಯಲ್ಲಿರುವಾಗಿನಿಂದ ಸಾಯುವವರೆಗೂ ಅಲ್ಪಾಹಾರಿಗಳಾಗಿಯೇ ಜೀವಿಸುವರು. ನಾನು ಮಾಡಿರುವ ಪರೀಕ್ಷೆಗಳಿಂದ ಈ ವಿಷಯಗಳು ನನ್ನ ಮನಸ್ಸಿನಲ್ಲಿ ದೃಢವಾಗಿ ಬೇರೂರಿವೆ.[16]" ನಮ್ಮ ಹಳ್ಳಿಗಳ ಆರೋಗ್ಯವಿಷಯವನ್ನು ಸ್ವಲ್ಪಮಟ್ಟಿಗೆ ವಿಮರ್ಶಿಸಿದ ಸರ್ ಜಾನ್ ಮೆಗಾ ಎಂಬ ಪ್ರಸಿದ್ಧ ವೈದ್ಯರೂ ಇದೇ ಅಭಿಪ್ರಾಯವನ್ನು ಅನುಮೋದಿಸುವರು. ಅವರು ಪರೀಕ್ಷಿಸಿದ ಹಳ್ಳಿಗಳಲ್ಲಿ ನೂರಕ್ಕೆ 39 ಮಂದಿ ಪುಷ್ಟಿಕರವಾದ ಆಹಾರವನ್ನು ತೆಗೆದುಕೊಳ್ಳುವವರಿದ್ದರಂತೆ; 41 ಮಂದಿ ಅಲ್ಪಾಹಾರಿಗಳಾಗಿಯೂ 21 ಮಂದಿ ಅತ್ಯಲ್ಪಾಹಾರಿಗಳಾಗಿಯೂ ಇದ್ದರಂತೆ. ಅವರು ತಮ್ಮ ತೀರ್ಮಾನವನ್ನು ಈ ಬಗೆಯಲ್ಲಿ ಹೇಳಿರುವರು "ಪ್ರೋಟೀನ್ಸ್, ಕೊಬ್ಬು ಮತ್ತು ವಿಟಮಿನ್ ಎಂಬ ಆಹಾರ ಪದಾರ್ಥಗಳು ದೊರೆಯುತ್ತಿರುವುದು ಅತಿವಿರಳವೆಂಬುದು ದೃಢವಾಗಿದೆ." (It is evident that the supply of available proteins, fats and some of the vitamins is seriously inadequate except in a few favoured localities.)

ಆದುದರಿಂದ ನಮ್ಮ ನಾಡಿನಲ್ಲಿ ಯಾವ ವಿಧವಾದ ವ್ಯಾಧಿಯು ಆರಂಭವಾದರೂ ಕಾಡುಗಿಚ್ಚಿನಂತೆ ಹರಡಲು ಅನುಕೂಲಗಳು ಸಿದ್ಧವಾಗಿವೆ. ದೇಹಪುಷ್ಟಿಯು ಹೆಚ್ಚಾಗಿದ್ದಷ್ಟೂ ವ್ಯಾಧಿಗಳೊಡನೆ ಮನುಷ್ಯನು ಹೋರಾಡಬಹುದು. ಅಂತಹ ದೇಹಪುಷ್ಟಿಗೇ ಅವಕಾಶವಿಲ್ಲದಿದ್ದರೆ,

ವ್ಯಾಧಿಯೊಡನೆ ಹೋರಾಡುವುದಕ್ಕೆ ಬದಲು, ಅದರೊಡನೆ ಸಹಕರಿಸಿ ಅದರ ಬೆಳವಳಿಕೆಗೆ ಪ್ರೋತ್ಸಾಹವನ್ನು ಕೊಡುತ್ತಿರುವರು. ನಮ್ಮ ನಾಡಿನಲ್ಲಿ ಬಹುಮಂದಿ, ರೋಗಗಳಿಗೆ ಸುಖಾಗಮನವನ್ನು ಬಯಸಲು ಸಕಲ ಸಿದ್ಧತೆ ಗಳನ್ನೂ ಅಣಿಮಾಡಿಟ್ಟಿರುವರೆಂದು ಹೇಳಿದರೆ ಅತಿಶಯೋಕ್ತಿಯಾಗದು.

3. **ಕೆಲವು ಅನಾರೋಗ್ಯಕರವಾದ ಸಮಾಜಪದ್ಧತಿಗಳು**— ನಮ್ಮ ರೈತರು ವ್ಯಾಧಿಗಳಿಗೆ ಆಹ್ವಾನವನ್ನು ಕೊಡುತ್ತಿರುವರೆಂಬ ವಾಕ್ಯ ದಲ್ಲಿ ನಂಬುಗೆಯಿಲ್ಲದವರು ನಮ್ಮ ಸಮಾಜಪದ್ಧತಿಗಳಲ್ಲಿ ಕೆಲವಕ್ಕೆ ಗಮ ನವನ್ನು ಕೊಡಲಿ.

(a) **ಬಾಲ್ಯವಿವಾಹ**—ಇದು ನಮ್ಮ ಜನಾಂಗದ ಬಲಹೀನತೆಗೆ ಒಂದು ಪ್ರಬಲವಾದ ಕಾರಣವಾಗಿದೆ. ಬಾಲ್ಯವಿವಾಹಪದ್ಧತಿಯು ಎಷ್ಟರ ಮಟ್ಟಿಗೆ ಬಳಕೆಯಲ್ಲಿದೆ ನೋಡಿರಿ.

| | 20ವರ್ಷಗಳಿಗೆ ಕಡಮೆ ವಯಸ್ಸಿರುವ ಗಂಡಸರಲ್ಲಿ ಮದುವೆಯಾಗಿರುವವರು (ನೂರರಲ್ಲಿ) | 20ವರ್ಷಗಳಿಗೆ ಕಡಮೆ ವಯಸ್ಸಿರುವ ಹೆಂಗಸರಲ್ಲಿ ಮದುವೆಯಾಗಿರುವವರು (ನೂರರಲ್ಲಿ) |
|---|---|---|
| ಇಂಡಿಯ | 9.0 | 25.0 |
| ಇಟಲಿ | 0.1 | 1.0 |

ಪ್ರಾಯಃ ಪ್ರತಿಯೊಬ್ಬ ಹುಡುಗಿಯೂ 14 ವರ್ಷ ವಯಸ್ಸಿನೊಳಗೆ ಮದುವೆಯಾಗುವಳು. ಈ ಪದ್ಧತಿಯು ಹಿಂದುಗಳಲ್ಲಿ ಮಾತ್ರವೆಂದು ತಿಳಿಯಬಾರದು. ಮಹಮ್ಮದೀಯರಲ್ಲಿಯೂ ಈ ಪದ್ಧತಿ ಇದೆಯಂತೆ. ಇದರ ಫಲವಾಗಿ ಸಾಧ್ಯವಾದಷ್ಟು ಬೇಗ ಹುಡುಗಿಯರು ತಾಯಂದಿರಾಗು ವರು. ಅವರ ಶಕ್ತಿಯು ಕುಂದುವುದು. ಅವರು ಹೆರುವ ಮಕ್ಕಳು ಗರ್ಭ ದಿಂದಲೂ ಅಶಕ್ತರಾಗಿಯೇ ಇರುವರು. ಆದುದರಿಂದ ಸಕಲವಿಧವಾದ ವ್ಯಾಧಿಗಳಿಗೂ ಅವರು ತುತ್ತಾಗಲೇಬೇಕು. ಇದಲ್ಲದೆ ಮಕ್ಕಳಿಗೆ ಒಂಬತ್ತು ತಿಂಗಳಿಗಿಂತ ಹೆಚ್ಚುಕಾಲ ಎದೆಹಾಲನ್ನು ಕೊಡುತ್ತಿದ್ದರೆ ಅಂತಹ ತಾಯಂ

ದಿರು ಕೃಶರಾಗುವುದು ಸಹಜವೆಂದು ಬಹುಮಂದಿ ವೈದ್ಯರು ಅಭಿಪ್ರಾಯ ಪಡುತ್ತಾರೆ.

(b) **ಘೋಷಾಪದ್ಧತಿ**—ಈ ಪದ್ಧತಿಯು ಉತ್ತರ ಹಿಂದೂಸ್ಥಾನದಲ್ಲಿ ಹೆಚ್ಚು ಬಳಕೆಯಲ್ಲಿದೆ. ಮಹಮ್ಮದೀಯರಲ್ಲಿ ಮಾತ್ರವೇ ಅಲ್ಲ; ಹಿಂದುಗಳಲ್ಲಿಯೂ ಅನೇಕರಲ್ಲಿ ಈ ಪದ್ಧತಿಯು ಬಳಕೆಯಲ್ಲಿದೆ. ಸುಮಾರು 4-5 ಕೋಟಿ ಹೆಂಗಸರು ಈ ರೀತಿಯಾಗಿ ಗಾಳಿಬೆಳಕುಗಳಿಗೆ ಅವಕಾಶವಿಲ್ಲದೆ, ವ್ಯಾಧಿಗಳಿಗೆ ತುತ್ತಾಗಬೇಕಾಗಿದೆ. ಅದರಲ್ಲಿಯೂ ಶ್ವಾಸಕೋಶಕ್ಕೆ ಸಂಬಂಧಪಟ್ಟ ವ್ಯಾಧಿಗಳಿಗೆ ಜನಾನಾಗಳು ಮಾತೃಸ್ಥಾನಗಳೆಂದು ನಿರ್ಭಯವಾಗಿ ಹೇಳಬಹುದು. ಘೋಷಾಪದ್ಧತಿಯು ಬಳಕೆಯಲ್ಲಿರುವೆಡೆ ಮರಣದ ದರವು ಗಂಡಸರಿಗಿಂತ ಹೆಂಗಸರಲ್ಲಿ ಶೇಕಡ 40 ರಷ್ಟು ಹೆಚ್ಚೆಂಬುದಾಗಿ ಡಾಕ್ಟರ್ ಲ್ಯಾಂಕೆಸ್ಟರ್ ಅವರು ಹೇಳುವರು.[18]

(c) **ಅಸ್ಪೃಶ್ಯತೆ**—ನಮ್ಮ ಜನಾಂಗದಲ್ಲಿ 5-6 ಕೋಟಿ ಜನಗಳು ಸಮಾಜ ಬಹಿಷ್ಕೃತರಾಗಿರುವರಷ್ಟೆ. ಈ ಪದ್ಧತಿಯಿಂದ ಆ ಜನಗಳಿಗೆ ಕುಡಿಯುವುದಕ್ಕೆ ಒಳ್ಳೆಯ ನೀರಾಗಲಿ, ವಾಸಿಸಲು ತಕ್ಕ ಸ್ಥಳಗಳಾಗಲಿ ದೊರಕುವುದಿಲ್ಲ. ಅಲ್ಲದೆ ಸಮಾಜದಲ್ಲಿ ಯಾವ ಕೆಲಸಗಳು ಅಸಹ್ಯವೋ ಅವುಗಳನ್ನೆಲ್ಲ ಅವರು ಮಾಡಬೇಕು. ಹಳ್ಳಿಯ ಪಾಠಶಾಲೆಗಳಾಗಲಿ, ಹಳ್ಳಿಯ ವೈದ್ಯರಾಗಲೀ ಅವರಿಗೆ ಸಹಾಯ ಮಾಡಲಾರರು. ಆದುದರಿಂದ ಅವರೆಲ್ಲರೂ ವ್ಯಾಧಿಗಳಿಗೆ ಸಿದ್ಧರಾಗಿಯೇ ಇರಬೇಕಾಗಿದೆ.

4. **ಅಶುಚಿತ್ವ**-ಶುಚಿತ್ವವೇ ದೈವತ್ವವೆಂಬುದು ನಿಜವಾಗಿದ್ದ ಪಕ್ಷಕ್ಕೆ ನಮ್ಮ ಹಳ್ಳಿಗಳನ್ನು ದೇವರು ಮರೆತಿರುವನೆಂದು ಧಾರಾಳವಾಗಿ ಹೇಳಬಹುದು. ಪಾಶ್ಚಾತ್ಯದೇಶಗಳಲ್ಲಿ ಹೊಲಗಳಲ್ಲಿ ಕಷ್ಟಪಟ್ಟು ದುಡಿದು ರೈತರೂ ಅವರ ಮಕ್ಕಳೂ ಶುಚಿಯಾದ ತಮ್ಮ ಹಳ್ಳಿಗಳಿಗೆ ಬರುವರು. ನಮ್ಮ ಹಳ್ಳಿಗಳಲ್ಲಿ ರೈತರು ತಮ್ಮ ಮನೆಯಿಂದ ಹೊರಗಿರುವಾಗಲೇ ಅವರು ಸ್ವರ್ಗದಲ್ಲಿರುವರೆಂದು ಭಾವಿಸಬೇಕು. ಹಳ್ಳಿಗೆ ಬಂದರೆಂದರೆ ತಿಪ್ಪೆಯ ಗುಂಡಿಗೆ,

ಅಲ್ಲ, ನರಕಕ್ಕೆ ಬಂದರೆಂದೇ ಅರ್ಥ. ಹಳ್ಳಿಗಳ ಈ ಅಶುಚಿತ್ವಕ್ಕೂ ಅನಾರೋಗ್ಯಕ್ಕೂ ನಿಕಟವಾದ ಸಂಬಂಧವಿದೆಯೆಂಬುದರಲ್ಲಿ ಸಂದೇಹವೇ ಇಲ್ಲ. 1918-19 ನೆಯ ಇಸವಿಯಲ್ಲಿ ನಮ್ಮ ನಾಡಿನಲ್ಲೆಲ್ಲ ದಾಂಧಲೆಯನ್ನು ನಡೆಯಿಸಿದ ಇಂಪ್ಲುಯಂಜಾ ರೋಗದ ಚರಿತ್ರೆಯನ್ನು ಸ್ವಲ್ಪ ಪರೀಕ್ಷಿಸಿದರೆ ನಮ್ಮ ಹಳ್ಳಿಗಳ ಅಶುಚಿತ್ವಕ್ಕೂ, ರೈತರ ಅನಾರೋಗ್ಯಕ್ಕೂ ಇರುವ ಸಂಬಂಧವು ವ್ಯಕ್ತವಾಗುವುದು. ಇಂಪ್ಲುಯಂಜಾ ವ್ಯಾಧಿಯು ನಗರವಾಸಿಗಳು, ರೈತರು ಎಂಬ ಪಕ್ಷಪಾತವನ್ನು ಮಾಡದೆ ಪ್ರತಿಯೊಂದು ತರಗತಿಯ ಜನಗಳ ಮೇಲೆಯೂ ತನ್ನ ಪ್ರಭಾವವನ್ನು ಬೀರಿತು. ಆದರೆ ಅದರಿಂದ ತಪ್ಪಿಸಿಕೊಂಡವರು ಯಾವ ಯಾವ ಪಂಗಡಗಳವರೆಂಬುದನ್ನು ಗಮನಿಸಿರಿ.

**ಇಂಪ್ಲುಯಂಜಾವ್ಯಾಧಿಗ್ರಸ್ತರಾದ ಜನಗಳಲ್ಲಿ ಸತ್ತವರ ಸಂಖ್ಯೆ.**[19]

(100 ಜನಕ್ಕೆ)

| | |
|---|---|
| ಯೂರೋಪಿಯನರು | 5 ಕ್ಕಿಂತ ಕಡಮೆ |
| ಉತ್ತಮ ತರಗತಿಯ ಭಾರತೀಯರು | 6 |
| ರೈತರು | 50 |

ಮೇಲಿನ ಅಂಕಿಗಳು ಶುಚಿತ್ವಕ್ಕೂ ಆರೋಗ್ಯಕ್ಕೂ ಇರುವ ಸಂಬಂಧವನ್ನು ಸ್ಥಿರಪಡಿಸುವುವು. ಯಾವ ರೈತರ ಹಳ್ಳಿಗಳ ಸನ್ನಿವೇಶವೂ, ಸಮಾಜಪದ್ಧತಿಯೂ ಶುಚಿತ್ವಕ್ಕೆ ಎಡೆಯನ್ನು ಕೊಡವೋ ಅಂತಹ ರೈತರಲ್ಲಿ ವ್ಯಾಧಿಗ್ರಸ್ತರಿಗೂ ಮರಣವನ್ನು ಹೊಂದಿದವರಿಗೂ ಇದ್ದ ಪ್ರಮಾಣವು 100 : 50. ಇದರಿಂದ ಶುಚಿಯಾದ ಮನೆ, ಶುಚಿಯಾದ ಉಡುಪು, ಶುಚಿಯಾದ ಆಹಾರ, ಶುಚಿಯಾದ ಹಳ್ಳಿ ಇವು ಎಷ್ಟು ಆವಶ್ಯಕಗಳೆಂಬುದು ವಿದಿತವಾಗುವುದು. ಆದರೂ ಕೆಲವು ರೋಗಗಳ ಹರಡುವಿಕೆಗೆ ಅಶುಚಿತ್ವವೇ ಮೂಲಕಾರಣವೆಂಬುದನ್ನು ದೃಢಪಡಿಸುವ ಉದ್ದೇಶದಿಂದ ಕೆಲವು ರೋಗಗಳ ವಿವರನ್ನು ವಿಮರ್ಶಿಸುವ.

**ಕೊಕ್ಕೆಹುಳುವಿನ ರೋಗ**—ಚಿತ್ರದುರ್ಗ, ಹಾಸನ ಮೊದಲಾದ ಡಿಸ್ಟ್ರಿಕ್ಟುಗಳಲ್ಲಿ ಜನರಲ್ಲಿ ನಿರುತ್ಸಾಹವನ್ನೂ, ಅಶಕ್ತಿಯನ್ನೂ ಹರಡಿರುವ ರೋಗಗಳಲ್ಲಿ ಇದೊಂದು ಪ್ರಬಲವಾದುದು. ಈ ರೋಗವು ಹರಡುವ ವಿಧಾನವನ್ನು ನೋಡಿರಿ. ಈ ರೋಗದ ಕ್ರಿಮಿಗಳು ರೋಗಪೀಡಿತರಾದವರ ಹೇಸಿಗೆಯೊಡನೆ ಹೊರಗೆ ಬಂದು ಮೊಟ್ಟೆಹಾಕಿ ಕಾಯುತ್ತಿರುವುವು; ಇಂತಹ ಹೇಸಿಗೆಯು ಇರುವೆಡೆಯಲ್ಲಿ ಪಾದರಕ್ಷೆಯಿಲ್ಲದೆ ಸಂಚಾರಮಾಡುವವರು ಸಿಕ್ಕಿದ ಕೂಡಲೆ ಬಹು ಸಂತೋಷದಿಂದ ಅವರ ಪಾದಗಳ ಮೂಲಕ ಅವು ಶರೀರವನ್ನು ಸೇರಿ ವ್ಯಾಪಿಸುವುವು. ನಮ್ಮ ಹಳ್ಳಿಗಳಲ್ಲಿ ಬೀದಿಗಳೂ, ಕೆರೆಯ ಅಂಗಳವೂ ಕಕ್ಕಸಗಳೆಂಬುದನ್ನು ತಿಳಿಯದವರಾರು? ಅಲ್ಲದೆ ನಮ್ಮ ಹಳ್ಳಿಗಳಲ್ಲಿ ಎಷ್ಟು ಮಂದಿ ಪಾದರಕ್ಷೆಯನ್ನು ಹಾಕಿಕೊಂಡೇ ತಿರುಗುವರು? ಆದುದರಿಂದ ಕೊಕ್ಕೆಹುಳುವಿನ ವ್ಯಾಪ್ತಿಗೆ ನಮ್ಮ ಹಳ್ಳಿಗಳ ಅಶುಚಿತ್ವವೇ ಕಾರಣವಲ್ಲವೆ?

**ವಾಂತಿಭೇದಿ**—ವಾಂತಿಭೇದಿಯೊಂದರಿಂದಲೆ 1932 ನೆಯ ಇಸವಿಯಲ್ಲಿ ಬ್ರಿಟಿಷ್ ಇಂಡಿಯಾದಲ್ಲಿ 2,19,740 ಮಂದಿ ಮೃತರಾದರು. ಈ ವಾಂತಿಭೇದಿಯು ಹರಡುವುದಕ್ಕೆ ನಮ್ಮ ಹಳ್ಳಿಗಳಲ್ಲಿ ಜನರು ಉಪಯೋಗಿಸುವ ಕೊಳಕು ನೀರೇ ಬಹುಮಟ್ಟಿಗೆ ಕಾರಣವು. ಅತ್ಯುತ್ಕೃಷ್ಟವಾದ ನೀರಿನ ಸರಪರಾಜು ದೊರೆಯುವೆಡೆಯಲ್ಲೆಲ್ಲ ಈ ಸಾಂಕ್ರಾಮಿಕ ರೋಗವು ಕ್ರಮಕ್ರಮವಾಗಿ ತಗ್ಗಿಸಲ್ಪಟ್ಟಿದೆ. ಶುಚಿತ್ವಕ್ಕೂ ಆರೋಗ್ಯಕ್ಕೂ ಇರುವ ಸಂಬಂಧವನ್ನು 1892-95 ರಲ್ಲಿ ಪ್ರಪಂಚದಲ್ಲೆಲ್ಲ ತನ್ನ ರುದ್ರರೂಪವನ್ನು ಪ್ರದರ್ಶಿಸುತ್ತಿದ್ದ ವಾಂತಿಭೇದಿಯು ಸಾರಿಹೇಳಿರುವುದು. ಲಂಡನ್, ಬರ್ಲಿನ್ ಮೊದಲಾದ ನಗರಗಳಲ್ಲಿ ನೀರಿನ ಸರಪರಾಜಿಗೆ ಉತ್ತಮವಾದ ಏರ್ಪಾಡು ಇದ್ದುದರಿಂದ ಅಂತಹ ನಗರಗಳಲ್ಲಿ ಇದರ ಪ್ರಭಾವವು ಕಡಿಮೆಯಾಗಿದ್ದಿತು.[20] ನಮ್ಮ ಹಳ್ಳಿಗಳಲ್ಲಿ ದೊರೆಯುವ ಕುಡಿಯುವ ನೀರನ್ನು ಪರೀಕ್ಷಿಸಿರಿ. ಪ್ರಾಯಃ ಅವುಗಳಲ್ಲಿ ಒಂದು ಕೆರೆಯಿರಬಹುದು; ಕೊಳವಿರ

ಬಹುದು; ತೊರೆಯಿರಬಹುದು. ಅದರ ಒಂದುಕಡೆಯಲ್ಲಿ ಒಬ್ಬ ರೈತನು ಎಮ್ಮೆಯನ್ನು ತೊಳೆಯುತ್ತಿರುವನು; ಇನ್ನೊಂದುಕಡೆ ಅಗಸನು ಕೊಳೆ ಬಟ್ಟೆಯನ್ನು ಒಗೆಯುತ್ತಿರುವನು; ಮತ್ತೊಂದುಕಡೆ ಹೆಂಗಸರು ಮುಸರೆಯನ್ನು ಉಜ್ಜುತ್ತಿರುವರು; ಮೊಗದೊಂದುಕಡೆ ಕೆಲವರು ಸ್ನಾನಮಾಡುತ್ತಿರುವರು; ಅಂಗಳದಲ್ಲಿಯೋ, ದಡದಲ್ಲಿಯೋ ಒಬ್ಬಿಬ್ಬರು ಮಲವಿಸರ್ಜನೆಯನ್ನು ಮಾಡುತ್ತಿರುವರು. ಇಂತಹ ಪವಿತ್ರ ತೀರ್ಥವನ್ನು ಕುಡಿಯುವ ಹಳ್ಳಿಗಳಲ್ಲಿ ವ್ಯಾಧಿಗಳು ಇಲ್ಲದಿದ್ದರೆ ಅದೇ ಆಶ್ಚರ್ಯ.

**ಮಲೇರಿಯ**—ವ್ಯಾಧಿಗಳ ರುದ್ರನಾಟಕದಲ್ಲಿ ಭೀಷಣಪಾತ್ರ ನಟನೆಗೆ ಮಲೇರಿಯಜ್ವರವು ಆಜನ್ಮಸಿದ್ಧವಾದ ಹಕ್ಕನ್ನುಪಡೆದಿದೆ. ಇತರ ಜ್ವರಗಳೂ, ವ್ಯಾಧಿಗಳೂ ನಮ್ಮನ್ನು ಬೇಗ ಸಾಯಿಸಬಹುದು. ಮಲೇರಿಯವು ಮಾತ್ರ ಈ ವಿಧವಾದ ಲೀಲೆಯಲ್ಲಿ ನಂಬುಗೆಯನ್ನಿಟ್ಟಿಲ್ಲ. ಯಾರ ಮೇಲೆ ಈ ಮಹಾಮಾರಿಯ ದೃಷ್ಟಿಯು ಬೀಳುವುದೋ ಅವರು ಈ ಮಾರಿಯ ಗುಲಾಮರಾಗಿ, ಸಾಯುವವರೆಗೂ ಜೀವಚ್ಛವಗಳಾಗಿ ನರಳುತ್ತಿದ್ದು ಉತ್ಸಾಹರಹಿತರಾಗಿ ಕೊನೆಗೆ ಈ ಮಾರಿಗೆ ತುತ್ತಾಗಬೇಕು. ಪ್ರಾಯಃ ನಮ್ಮ ದೇಶದ ಎಲ್ಲಾ ಮೂಲೆಯಲ್ಲಿಯೂ ಬಹುಮಂದಿ ಈ ರೋಗದಿಂದ ಪೀಡಿತರಾಗಿರುವರು. ವೈದ್ಯಶಾಸ್ತ್ರಜ್ಞರು ಈ ರೋಗದ ಹರಡುವಿಕೆಗೆ ಸೊಳ್ಳೆಗಳೇ ಕಾರಣವೆಂಬುದನ್ನು ಕಂಡುಹಿಡಿದಿರುವರು. ನೀರು ನಿಂತು ಕೊಳೆಯುವ ಎಡೆಗಳೆಲ್ಲಾ ಈ ಸೊಳ್ಳೆಗಳಿಗೆ ಮಾತೃಸ್ಥಾನಗಳೆಂಬುದನ್ನು ತಿಳಿಯದವರಾರು! ಆದರೆ ನಮ್ಮ ಹಳ್ಳಿಗಳಲ್ಲಿ ಬೀದಿಗಳೆಲ್ಲವೂ ಚರಂಡಿಗಳೇ ಅಥವಾ ಬಚ್ಚಲುಗಳೇ. ಕೊಳಕುನೀರೆಲ್ಲ ಊರಿನಲ್ಲಿಯೇ ನಿಲ್ಲಬೇಕು. ಒಂದುವೇಳೆ ಹೊರಗೆ ಹೋದರೆ ಕುಡಿಯುವ ನೀರಿಗೆ ಆಸರೆಯಾದ ಕೆರೆಗೋ, ಕುಂಟೆಗೋ ಹೋಗಬೇಕು. ಇದರೊಡನೆಯೇ ಊರಿನ ಸುತ್ತಮುತ್ತ ಪೊದೆಗಳು ಬೆಳೆದು ಸೊಳ್ಳೆಗಳಿಗೆ ಸೌಧಗಳನ್ನು ಕಲ್ಪಿಸಿಕೊಡುವುವು. ಆದುದರಿಂದ ಗ್ರಾಮನೈರ್ಮಲ್ಯಕ್ಕೂ, ಗ್ರಾಮಾರೋಗ್ಯಕ್ಕೂ ನಿಕಟವಾದ ಸಂಬಂಧವಿದೆಯೆಂದು ಮನಗಾಣುವುದಲ್ಲವೆ?

**ಪ್ಲೇಗು**—ಪ್ಲೇಗಿನ ಬ್ಯಾಕ್ಟೀರಿಯಾಗಳಿಂದ ಮನುಷ್ಯನಿಗೆ ತೊಂದರೆಯಾಗಬೇಕಾದರೆ ಇಲಿಗಳ ಸಹಾಯವಿಲ್ಲದೆ ಸಾಧ್ಯವಿಲ್ಲವೆಂಬುದಾಗಿ ವೈದ್ಯರ ಅಭಿಪ್ರಾಯವಷ್ಟೆ. ನಮ್ಮ ಮನೆಗಳಲ್ಲಿ ಕಸಕಡ್ಡಿಗಳನ್ನೂ, ದವಸಧಾನ್ಯಗಳನ್ನೂ ಸಿಕ್ಕಿದೆಡೆಯಲ್ಲಿ ಬಿಸಾಡುವುದರಿಂದಲ್ಲವೆ ಇಲಿಗಳು ತಮಗೆ ಆಹಾರ ದೊರಕುವುದೆಂಬ ಭರವಸೆಯಿಂದ ನಮ್ಮ ಮನೆಗಳಿಗೆ ಬರುವುದು; ಮತ್ತು ಪ್ಲೇಗ್ ಬ್ಯಾಕ್ಟೀರಿಯಾಗಳನ್ನೂ ತರುವುದು? ನಮ್ಮ ಮನೆಗಳ ಮತ್ತು ಗ್ರಾಮಗಳ ನೈರ್ಮಲ್ಯಕ್ಕೂ ನಮ್ಮ ವ್ಯಾಧಿಗಳಿಗೂ ಇರುವ ಸಂಬಂಧವನ್ನು ನೋಡಿರಿ.

**ಶ್ವಾಸಕೋಶಕ್ಕೆ ಸಂಬಂಧಪಟ್ಟ ರೋಗಗಳು**—ಇವುಗಳಲ್ಲಿ ಇಙ್ಫ್ಲುಯಂಜ ಮತ್ತು ಕ್ಷಯರೋಗಕ್ಕೆ ಅಗ್ರಸ್ಥಾನವು ದೊರೆತಿದೆ. ಈ ರೋಗಗಳ ಹರಡುವಿಕೆಗೆ ನಮ್ಮ ಮನೆಗಳೂ, ಗ್ರಾಮಗಳೂ ಅವುಗಳಲ್ಲಿರುವ ಕೊಳೆಯೂ ಎಷ್ಟರಮಟ್ಟಿಗೆ ಕಾರಣವೆಂಬುದನ್ನು ನೋಡಿರಿ. ದೇವರು ನಮ್ಮ ಆರೋಗ್ಯಕ್ಕಾಗಿಯೇ ಯಥೇಚ್ಛವಾಗಿ ಗಾಳಿ ಬೆಳಕುಗಳನ್ನು ಉಚಿತವಾಗಿಯೇ ದಯಪಾಲಿಸಿರುವರು. ಆದರೆ ನಮ್ಮ ಮನೆಗಳಿಗೆ ಗಾಳಿ ಬೆಳಕುಗಳು ಹೆಚ್ಚಾಗಿ ಎಲ್ಲಿ ಬಂದಾವೊ ಎಂಬ ಶಂಕೆಯಿಂದಲೇ ಅವುಗಳನ್ನು ಮನೆಗೆ ಬರಲೀಸದೆ ಒಂದು ಮನೆಯ ಪಕ್ಕದಲ್ಲಿ ಇನ್ನೊಂದು ಮನೆಯನ್ನು ಕಟ್ಟುವೆವಲ್ಲದೆ, ಕಿಟಕಿಗಳನ್ನೂ ಇಡುವುದಿಲ್ಲ. ಒಂದುವೇಳೆ ಕಿಟಕಿಗಳಿದ್ದರೂ ಅವುಗಳನ್ನು ಮುಚ್ಚದೆ ಮಲಗುವುದಿಲ್ಲ. (ಚಳಿಗಾಲದಲ್ಲಿ ಪಂಜಾಬಿನಲ್ಲಿ ಕಿಟಕಿಗಳಿಗೆ ಮೊಳೆಯನ್ನು ಹೊಡೆದು ಮುಚ್ಚುವರಂತೆ.) ಅಲ್ಲದೆ ಭಾರತೀಯರಲ್ಲಿ ಬಹುಮಂದಿ ಗೋಪೂಜೆಯನ್ನು ಮಾಡುವವರಲ್ಲವೆ! ಆದುದರಿಂದ ಅವುಗಳಿಗೆ ಬೇರೆ ಸ್ಥಳಗಳನ್ನು ಕೊಟ್ಟು ಪಕ್ಷಪಾತ ತೋರಿಸಿ ಪಾಪಿಗಳಾಗಬಾರದೆಂದು ತಾವು ಮಲಗುವೆಡೆಯಲ್ಲೆ ಅವುಗಳನ್ನು ಕಟ್ಟುವರು. ಇದರಿಂದ ರೈತರಿಗೆ ಒಂದಲ್ಲ; ಎರಡುವಿಧವಾದ ಸಂಪಾದನೆ: ಗಂಜಲದ ಪರಿಮಳವೊಂದು; ಬೇಗ ಮುಕ್ತಿಗೆ ದಾರಿಯನ್ನು ಕಲ್ಪಿಸಿಕೊಳ್ಳುವುದು ಮತ್ತೊಂದು!

ಹೀಗೆ ನಮ್ಮ ದೇಶದಲ್ಲಿ ಪ್ರಬಲವಾಗಿರುವ ಯಾವ ವ್ಯಾಧಿಯ ಪ್ರತಿಭೆಯನ್ನು ಪರೀಕ್ಷಿಸಿದರೂ ಆ ವ್ಯಾಧಿಯ ಜನನಕ್ಕೆ ಶಾಸ್ತ್ರೀಯವಾದ ಕಾರಣಗಳಾವುವಾದರೂ ಇರಲಿ, ಆ ವ್ಯಾಧಿಯ ಹರಡುವಿಕೆಗೆ ಗ್ರಾಮನೈರ್ಮಲ್ಯದಲ್ಲಿರುವ ಕುಂದುಕೊರತೆಗಳೇ ಕಾರಣವೆಂದು ನಿರ್ಧರವಾಗಿ ಹೇಳಬಹುದು.

(5) **ರೈತರ ಅಜ್ಞಾನ**—ಪಾಶ್ಚಾತ್ಯ ದೇಶಗಳಲ್ಲಿ ಹಳ್ಳಿಗಾಡಿನವರೂ ಕೂಡ ಕೆಲವು ಸಾಮಾನ್ಯವಾದ ಆರೋಗ್ಯನಿಯಮಗಳನ್ನು ತಿಳಿದುಕೊಂಡಿರುವರು. ಒಂದುವೇಳೆ ತಿಳಿಯದಿದ್ದರೂ ಸುಶಿಕ್ಷಿತರಾದ ವೈದ್ಯರು ಹೇಳುವ ಮಾತನ್ನು ನಂಬಿ ಅವರ ಉಪದೇಶದಂತೆ ನಡೆಯುವರು. ನಮ್ಮ ರೈತರಿಗೆ—ಏಕೆ ನಮ್ಮ ವಿದ್ಯಾವಂತರಲ್ಲಿಯೂ ಬಹುಮಂದಿಗೆ--ಸಾಮಾನ್ಯವಾದ ಆರೋಗ್ಯ ನಿಯಮಗಳೂ ತಿಳಿಯದು. ಹಲ್ಲುಗಳನ್ನು ಶುಚಿಯಾಗಿಡದಿದ್ದರೆ ತೊಂದರೆಯೇನು, ದಿನವೂ ಸ್ನಾನವನ್ನು ಮಾಡದಿದ್ದರೆ ನಷ್ಟವೇನು, ಮೊದಲಾದ ಸಣ್ಣ ಸಣ್ಣ ವಿಷಯಗಳೂ ರೈತರಿಗೆ ತಿಳಿಯವು. ಅಲ್ಲದೆ ಸುಶಿಕ್ಷಿತರಾದ ವೈದ್ಯರ ಸಹಾಯವೂ ಅವರಿಗೆ ದೊರಕುವುದಿಲ್ಲ. ಆರೋಗ್ಯಶಾಖೆಯವರು ಸಾವಿರಾರು ರೂಪಾಯಿಗಳನ್ನು ಸುರಿದು ಉತ್ತಮವಾದ ಚಿತ್ರಗಳನ್ನೂ, ಹಸ್ತಪತ್ರಿಕೆಗಳನ್ನೂ ಹಂಚಬಹುದು. ಆದರೆ ಅವುಗಳನ್ನು ಓದಿ ತಿಳಿದುಕೊಳ್ಳುವ ಶಕ್ತಿಯು ರೈತರಿಗೆ ಎಲ್ಲಿಂದ ಬರಬೇಕು ? ಆದುದರಿಂದಲೇ ಅವರು ತಮ್ಮ ಅಶುಚಿಯಾದ ಅನೇಕ ಪದ್ಧತಿಗಳನ್ನು ಇನ್ನೂ ಬಿಟ್ಟಿಲ್ಲ. ಇದಂತಿರಲಿ; ವೈದ್ಯಶಾಸ್ತ್ರಜ್ಞರು ನೂರಾರು ವರ್ಷಗಳ ಪ್ರಯೋಗಗಳ ಫಲಿತಾಂಶವಾಗಿ ಕಂಡುಹಿಡಿದಿರುವ ಇನಾಕ್ಯುಲೇರ್ಷ, ದೇವಿ ಹಾಕುವುದು, ಕ್ವಿನೈನಿನ ಪ್ರಯೋಗ—ಇವುಗಳಲ್ಲಿ ನಂಬುಗೆಯನ್ನಿಟ್ಟು, ಇವುಗಳನ್ನಾದರೂ ಉಪಯೋಗಿಸಿಕೊಳ್ಳುವರೆ ? ಇದಕ್ಕೆ ಪ್ರತಿಯಾಗಿ ಮಾರಿ ಮಸಣಿಗಳಿಗೆ ಬಲಿಕೊಡುವುದರಿಂದಲೇ ಕೃತಾರ್ಥರಾಗುವೆವೆಂಬ ಮೂಢಭಕ್ತಿಯನ್ನು ದೃಢವಾಗಿ ಇಟ್ಟುಕೊಂಡಿರುವರು. ಈ ಮಾರಿಮಸಣಿ

ಗಳು ಇತರರ ತಂಟೆಗೆ ಹೋಗದೆ, ಯಾರು ಅವುಗಳನ್ನು ಭಕ್ತಿಯಿಂದ ಪೂಜಿಸುವರೋ ಆ ಜನಾಂಗಕ್ಕೇ ಮಾತ್ರ ತಮ್ಮ ಕೈಲಾದಷ್ಟು ಕಷ್ಟವನ್ನು ಕೊಡುತ್ತಿವೆ. ಇದು ಏಕೆ ಎಂಬುದನ್ನು ವಿವರಿಸಲು ಸಾಧ್ಯವೆ? ಈ ವಿಧ ವಾದ ಅಜ್ಞಾನವೇ ನಮ್ಮ ರೈತರ ತೊಂದರೆಗೆಲ್ಲ ಮೂಲಕಾರಣವಾಗಿದೆ ಯೆಂದು ನಿಸ್ಸಂಕೋಚವಾಗಿ ಹೇಳಬಹುದು.

6. **ವೈದ್ಯ ಸಹಾಯದ ಅಭಾವ**—ಇಲ್ಲಿಯವರೆಗೆ ನಮ್ಮ ಗ್ರಾಮ ಗಳಲ್ಲಿ ನಾನಾ ವ್ಯಾಧಿಗಳು ಹರಡಲು ಇರುವ ಅನುಕೂಲಗಳನ್ನು ವಿಮರ್ಶಿ ಸಿರುವೆವು. ಇಂತಹ ರೋಗಗಳಿಂದ ನಗರವಾಸಿಗಳಿಗಿಂತಲೂ ಗ್ರಾಮವಾಸಿ ಗಳಿಗೆ ಹೆಚ್ಚು ತೊಂದರೆಯೆಂಬುದು ಸ್ವತಃ ಸಿದ್ಧವಾಗಿರುವ ವಿಷಯ. ಇದಕ್ಕೆ ಒಂದು ಪ್ರಬಲಕಾರಣವಾವುದೆಂದರೆ ನಗರಗಳಲ್ಲಿ ವೈದ್ಯಸಹಾಯವು ಹೆಚ್ಚುತ್ತಿದ್ದರೂ ಹಳ್ಳಿಗಳಲ್ಲಿ ವೈದ್ಯಸಹಾಯದ ಅಭಾವವಿದೆ. ಸರ್ಕಾರ ದವರು ಇಟ್ಟಿರುವ ಆಸ್ಪತ್ರೆಗಳೂ, ಡಿಸ್ಪೆನ್ಸರಿಗಳೂ ದೊಡ್ಡ ದೊಡ್ಡ ನಗರಗ ಳಲ್ಲಿರುವುವೇ ವಿನಾ ಹಳ್ಳಿಗಳಲ್ಲಿಲ್ಲ. ಆದುದರಿಂದ ರೋಗಪೀಡಿತರಿಗೆ ಹಳ್ಳಿಗಳಲ್ಲಿರುವ ಅಶಿಕ್ಷಿತರಾದ ವೈದ್ಯರು ಕಂದಾಚಾರದ ಪದ್ಧತಿಯಲ್ಲಿ ಸಹಾಯಮಾಡಬೇಕು; ಇಲ್ಲವಾದರೆ ದೇವರೇ ಗತಿ. ಹೀಗೆ ವೈದ್ಯ ಸಹಾಯವಿಲ್ಲದಿರುವುದರಿಂದಲೂ ಹಳ್ಳಿಗಳಲ್ಲಿ ರೋಗವು ವ್ಯಾಪಿಸುತ್ತಿದೆ. ವೈದ್ಯರಿದ್ದರೆ, ಎಷ್ಟರಮಟ್ಟಿಗೆ ರೋಗಗಳ ವ್ಯಾಪ್ತಿಯನ್ನು ಕಡಮೆಮಾಡ ಬಹುದೆಂಬುದಕ್ಕೆ ಡಚ್ಚರಿಗೆ ಸೇರಿದ ಜಾವಾ, ಸುಮಾತ್ರಾ ಮೊದಲಾದ ದ್ವೀಪಗಳಲ್ಲಿ ಸಿಡುಬಿನ ರೋಗವನ್ನು ನಿವಾರಣೆಮಾಡಿರುವ ಬಗೆಯನ್ನು ಉದಾಹರಣೆಯಾಗಿ ತೆಗೆದುಕೊಳ್ಳಬಹುದು. ಆ ದ್ವೀಪಗಳಲ್ಲಿ ಪ್ರತಿಯೊಬ್ಬ ನಿಗೂ ಬಲಾತ್ಕಾರವಾಗಿ ದೇವಿ ಚುಚ್ಚುವರು. ದೇವಿಯನ್ನು ಹಾಕಿಸಿ ಕೊಂಡಿರುವವರ ಸಂಖ್ಯೆಯು ಹೇಗೆ ಬೆಳೆಯುತ್ತಿದೆ ಎಂಬುದನ್ನು ನೋಡಿ.

## ಡಚ್ ಈಸ್ಟ್ ಇಂಡಿಯಾ ದ್ವೀಪಗಳಲ್ಲಿ ಬಲಾತ್ಕಾರವಾಗಿ ದೇವಿ ಹಾಕುವುದರ ಬೆಳವಣಿಗೆ[21]

| ಇಸವಿ | ಸರಾಸರಿ ವರ್ಷ ಒಂದಕ್ಕೆ |
|---|---|
| 1890-90 | 5,85,000 |
| 1899-1909 | 16,90,000 |
| 1909-1919 | 72,70,000 |
| 1920-27 | 1,02,80,000 |

ಇದರ ಫಲವಾಗಿ ಸಿಡುಬಿನ ಉಪದ್ರವವು ಅಲ್ಲಿ ಎಷ್ಟುಮಟ್ಟಿಗೆ ಕಡಿಮೆಯಾಗಿದೆಯೆಂಬುದನ್ನು ನೋಡಿರಿ. 1913ರಲ್ಲಿ ಒಟ್ಟು 3500 ಮಂದಿಗೆ ಸಿಡುಬು ಎದ್ದಿತು; ಅವರಲ್ಲಿ 800 ಮಂದಿ ಮೃತರಾದರು. 1932 ರಲ್ಲಿ 39 ಮಂದಿಗೆ ಮಾತ್ರ ಸಿಡುಬು ಎದ್ದಿತು; ಅವರಲ್ಲಿ ಇಬ್ಬರು ಮಾತ್ರ ಮೃತರಾದರು. ಆದುದರಿಂದ ವೈದ್ಯಸಹಾಯವಿದ್ದಷ್ಟೂ ಗ್ರಾಮಗಳಲ್ಲಿ ರೋಗಪೀಡಿತರಾದವರಿಗೆ ಅನುಕೂಲ ಹೆಚ್ಚು. ಒಟ್ಟಿನಲ್ಲಿ ನಮ್ಮ ಗ್ರಾಮ ಜೀವನದಲ್ಲಿರುವ ತೊಂದರೆಗಳಲ್ಲೆಲ್ಲ ವೈದ್ಯಸಹಾಯದ ಅಭಾವಕ್ಕೆ ಅಗ್ರ ಸ್ಥಾನವನ್ನು ಕೊಡಬೇಕಾಗಿದೆ.

ಹೀಗೆ ನಾನಾಕಾರಣಗಳು ಸೇರಿ ನಮ್ಮ ಹಳ್ಳಿಗಳ ಜನಗಳನ್ನು ವ್ಯಾಧಿಗ್ರಸ್ತರನ್ನಾಗಿ ಮಾಡಿವೆ. ತತ್ಫಲವಾಗಿ ಅವರ ಬಲಹೀನತೆಯೂ, ಸೋಮಾರಿತನವೂ ಬಡತನದ ಕಾರಣಗಳಲ್ಲಿ ಮುಖ್ಯಪಾತ್ರವನ್ನು ವಹಿಸಿರುವುವು. ಆದುದರಿಂದ ನಮ್ಮ ಗ್ರಾಮಜೀವನವನ್ನು ಉತ್ತಮಪಡಿಸಬೇಕಾದರೆ ಈ ಸಮಸ್ಯೆಯ ಪರಿಹಾರವೂ ಅತ್ಯಗತ್ಯವಾಗಿ ಆಗಬೇಕಾಗಿದೆ. ಮುಖ್ಯವಾದ ಪರಿಹಾರೋಪಾಯಗಳಲ್ಲಿ ಕೆಲವನ್ನು ಮುಂದೆ ವಿಮರ್ಶಿಸಲಾಗಿದೆ.

# ವ್ಯಾಧಿಗಳ ಹರಡುವಿಕೆಯನ್ನು ತಪ್ಪಿಸುವ ಉಪಾಯಗಳು.

(1) ರೈತರ ದೇಹವು ರೋಗಗಳ ಹೊಡೆತವನ್ನು ಸಹಿಸಲು ಶಕ್ತಿಯಿಲ್ಲದಿರುವುದಕ್ಕೆ ಮೊದಲನೆಯ ಕಾರಣವು ಅವರ ಆಹಾರದಲ್ಲಿರುವ ನ್ಯೂನತೆಯಷ್ಟೆ. ಆ ನ್ಯೂನತೆಯಲ್ಲಿ ಪ್ರಥಮಾಂಶವು ಸಾಕಾದಷ್ಟು ಆಹಾರವು ದೊರೆಯದಿರುವುದು—ಅಂದರೆ ರೈತನ ಬಡತನವೇ ಇದಕ್ಕೆ ಕಾರಣವೆಂದಂತಾಯಿತು. ಆದುದರಿಂದ ರೈತರ ಆರೋಗ್ಯವು ಅಭಿವೃದ್ಧಿಯಾಗಬೇಕಾದರೆ ಅವರ ಬಡತನವನ್ನು ನೀಗಬೇಕು. ಇದಕ್ಕೆ ಮಾರ್ಗಗಳನ್ನು ಈಗಾಗಲೇ ವಿಮರ್ಶಿಸಿರುವೆವು.

ಆಹಾರದಲ್ಲಿರುವ ನ್ಯೂನತೆಯಲ್ಲಿ ಎರಡನೆಯ ಅಂಗವು ಅಜ್ಞಾನದ ಫಲವಾಗಿ ಬೆಳೆದುದು. ಯಾವ ಬಗೆಯ ಆಹಾರವು ನಮ್ಮ ದೇಹಪುಷ್ಟಿಗೆ ಆವಶ್ಯಕವೆಂಬುದನ್ನು, ರೈತರ ಮಾತಂತಿರಲಿ, ವಿದ್ಯಾವಂತರೂ ಅರಿಯರು. ಈ ಕೊರತೆಯನ್ನು ಪರಿಹರಿಸಬೇಕಾದರೆ ನಮ್ಮ ದೇಶದಲ್ಲಿ ಉಪಯೋಗವಾಗುತ್ತಿರುವ ಮುಖ್ಯವಾದ ಆಹಾರಪದಾರ್ಥಗಳ ಯೋಗ್ಯತೆಯನ್ನು ಪರೀಕ್ಷೆಯ ಮೂಲಕ ನಿರ್ಣಯಿಸಬೇಕು. ಈ ಮೊದಲೇ ಹೇಳಿರುವಂತೆ ಮೆಕ್ಕಾರಿರ್ಸ್ ಮತ್ತು ಡಾಕ್ಟರ್ ಆಕ್ರಾಯಡ್ ಎಂಬ ಮಹನೀಯರಿಬ್ಬರು ಸ್ವಲ್ಪಮಟ್ಟಿಗೆ ಪ್ರಯೋಗಗಳನ್ನು ನಡೆಯಿಸಿರುವರು. ಇಂಡಿಯಾ ದೇಶಕ್ಕೆ ಹೊಸದಾಗಿ ವೈಸ್ರಾಯರಾಗಿ ಬಂದಿರುವ ಲಾರ್ಡ್ ಲಿನ್‌ಲಿದ್ಗೊ ಅವರು ಈ ವಿಷಯಕ್ಕೆ ತಮ್ಮ ಸ್ವಂತ ಗಮನವನ್ನು ಕೊಡುತ್ತಿರುವುದು ನಮಗೆ ಸ್ವಲ್ಪ ಭರವಸೆಯನ್ನುಂಟುಮಾಡುತ್ತಿದೆ. ಅವರ ನೇತೃತ್ವದಲ್ಲಿ ಕೇಂದ್ರ ಸರ್ಕಾರದವರು "ಸೆಂಟ್ರಲ್ ಬೋರ್ಡ್ ಆಫ್ ನ್ಯೂಟ್ರಿಷನ್" ಎಂಬ ಹೆಸರಿನಿಂದ ಹೊಸ ಸಂಸ್ಥೆಯನ್ನು ಏರ್ಪಡಿಸುವುದೂ ಸಂತೋಷಕರ.[೨೨] ಹೆಚ್ಚು ವೆಚ್ಚವನ್ನು ಮಾಡದೆಯೇ ರೈತರು ಅತ್ಯುತ್ತಮವಾದ ಆಹಾರವನ್ನು

ಪಡೆವುದು ಹೇಗೆ ಎಂಬುದನ್ನು ಕಂಡುಹಿಡಿಯಲು ಮಹಾತ್ಮಾ ಗಾಂಧಿಯವರು ಬಹುವಾಗಿ ಪ್ರಯತ್ನಿಸುತ್ತಿರುವರು.

ಈಗಾಗಲೆ ಇಂತಹ ಪ್ರಯೋಗಗಳ ಫಲಿತಾಂಶವಾಗಿ ಕೆಲವು ವಿಷಯಗಳು ಹೊರಬಿದ್ದಿವೆ. ಮುಖ್ಯವಾಗಿ ಒಂದೇ ಬಗೆಯ ಆಹಾರ ಪದಾರ್ಥದಿಂದ ದೇಹಪುಷ್ಟಿಗೆ ಬೇಕಾಗುವ ಎಲ್ಲ ಅಂಶಗಳೂ ದೊರೆಯಲಾರವೆಂಬುದು ನಿರ್ಣೀತವಾಗಿದೆ. ಅದರಲ್ಲಿಯೂ ಬರಿಯ ಪಿಷ್ಟಪದಾರ್ಥಗಳನ್ನೇ ವಿಶೇಷವಾಗಿ ಉಪಯೋಗಿಸುವ ನಮ್ಮ ರೈತರ ಆಹಾರವು ಪುಷ್ಟಿಕರವಲ್ಲ. ಆದರೆ ಅವರು ಈಗ ಉಪಯೋಗಿಸುತ್ತಿರುವ ರಾಗಿ, ಜೋಳ, ಅಕ್ಕಿ, ಹುರುಳಿ ಮೊದಲಾದ ಪದಾರ್ಥಗಳ ಜೊತೆಯಲ್ಲಿ ಹಾಲು, ಮೊಸರು, ಬೆಣ್ಣೆ, ಕೆನೆ, ಕೋಳಿಯಮೊಟ್ಟೆ, ಮಾಂಸ, ತರಕಾರಿ, ಹಣ್ಣು ಹಂಪಲು ಇವುಗಳನ್ನು ಸ್ವಲ್ಪ ಸ್ವಲ್ಪವಾದರೂ ಉಪಯೋಗಿಸಿದರೆ ಅವರ ಮುಖ್ಯವಾದ ಆಹಾರಪದಾರ್ಥದಲ್ಲಿರುವ ಕೊರತೆಯನ್ನು ಸ್ವಲ್ಪಮಟ್ಟಿಗೆ ಹೋಗಲಾಡಿಸಿದಂತಾಗುವುದು. ಮಾಂಸಸಂಬಂಧವಾದ ಪದಾರ್ಥಗಳು ಅಗತ್ಯವೆಂದು ತಿಳಿಯಬಾರದು. ಮೊಸರು, ಬೆಣ್ಣೆ, ಕೆನೆ, ತರಕಾರಿ, ಮುಖ್ಯವಾಗಿ ಹಾಲು ಇವುಗಳನ್ನು ಉಪಯೋಗಿಸಿದರೆ ನಮ್ಮ ರೈತರ ಆಹಾರದಲ್ಲಿರುವ ಕೊರತೆಗಳನ್ನು ಬಹುಮಟ್ಟಿಗೆ ತೊಲಗಿಸಿದಂತಾಗುವುದು.

ಜನಾಂಗಗಳ ಆಹಾರನಿಯಮಗಳಿಗೆ ಪಾಶ್ಚಾತ್ಯರಾಷ್ಟ್ರಗಳಲ್ಲಿ ಬಹು ಗಮನವು ಕೊಡಲ್ಪಡುತ್ತಿವೆ. ಆ ರಾಷ್ಟ್ರಗಳ ಸರ್ಕಾರಗಳು ತಮ್ಮ ಜನಾಂಗಕ್ಕೆ, ಅದರಲ್ಲಿಯೂ ಮಕ್ಕಳಿಗೆ ಉತ್ತಮವಾದ ಆಹಾರವನ್ನು ದೊರಕಿಸುವ ಭಾರವನ್ನು ತಾವೇ ವಹಿಸಿಕೊಂಡಿರುವರು. ಉದಾಹರಣೆ—ಆಂಗ್ಲೇಯರು ತಮ್ಮ ನಾಡಿನ ಶಾಲೆಗಳಲ್ಲಿ ಓದುವ ಬಾಲಕ ಬಾಲಕಿಯರಿಗೆ ಉತ್ತಮವಾದ ಆಹಾರವನ್ನು ಒದಗಿಸಿಕೊಡುತ್ತಿರುವರು. 1934 ನೆಯ ಇಸವಿಯಲ್ಲಿ ಸರ್ಕಾರದವರೇ ನಾಲ್ವತ್ತು ಲಕ್ಷ ಮಕ್ಕಳಿಗೆ 6,80,00,00 ಊಟವನ್ನು ಒದಗಿಸಿದರು; ಪ್ರಾಥಮಿಕ ಪಾಠಶಾಲೆಗಳಲ್ಲಿ ಓದುತ್ತಿದ್ದ

50 ಲಕ್ಷ ಮಕ್ಕಳಲ್ಲಿ 30 ಲಕ್ಷ ಮಕ್ಕಳಿಗೆ ಪ್ರತಿದಿನವೂ ಅರ್ಧಬೆಲೆಗೆ ಹಾಲನ್ನು ಒದಗಿಸಿಕೊಟ್ಟರು.[23]

ನಮ್ಮ ರೈತರು ಸ್ವಲ್ಪಮಟ್ಟಿಗೆ ತಮ್ಮ ಸೋಮಾರಿತನವನ್ನು ಬಿಟ್ಟರೆ ತಮಗೆ ಬೇಕಾಗುವಷ್ಟು ತರಕಾರಿಯನ್ನು ಬೆಳೆದುಕೊಳ್ಳಬಹುದು; ಹಣ್ಣು ಹಂಪಲುಗಳನ್ನೂ ಒದಗಿಸಿಕೊಳ್ಳಬಹುದು; ಸ್ವಲ್ಪಮಟ್ಟಿಗೆ ಹಾಲು ಮೊಸರನ್ನೂ ಕೂಡಿಸಿಕೊಳ್ಳಬಹುದು. ಇದು ಸಾಧ್ಯವಾಗಬೇಕಾದರೆ ಈ ಪದಾರ್ಥಗಳು ನಮ್ಮ ಶರೀರಪುಷ್ಟಿಗೆ ಎಷ್ಟು ಆವಶ್ಯಕವೆಂಬುದು ಅವರ ಮನಸ್ಸಿಗೆ ಗೋಚರವಾಗಬೇಕು. ಮತ್ತು ಇವನ್ನು ಒದಗಿಸಿಕೊಳ್ಳುವುದೂ ಸಾಧ್ಯವೆಂದು ಅವರ ಮನಸ್ಸಿಗೆ ಅಂಟಬೇಕು. ಒಟ್ಟಿನಲ್ಲಿ ರೈತರಿಗೆ ಪುಷ್ಟಿಕರವಾದ ಆಹಾರವು ದೊರೆತಷ್ಟೂ ವ್ಯಾಧಿಗಳ ಹರಡುವಿಕೆಯನ್ನು ಕಡಮೆ ಮಾಡಬಹುದು.

(2) ನೈರ್ಮಲ್ಯ, ದೇಹಪುಷ್ಟಿ, ಮನಸ್ಸಿನ ಲವಲವಿಕೆ–ಇವುಗಳಿರುವ ಸಂಬಂಧವನ್ನೂ ಸಾಮಾನ್ಯವಾದ ಆರೋಗ್ಯ ನಿಯಮಗಳನ್ನೂ ರೈತರಿಗೆ ತಿಳಿಯಹೇಳಬೇಕು.

(a) ಪ್ರತಿಯೊಬ್ಬ ವ್ಯಕ್ತಿಯೂ ತನ್ನ ದೇಹವು ದೇವರ ವಾಸಕ್ಕೆ ಅರ್ಹವಾದ ಗುಡಿ ಎಂಬುದನ್ನು ಮರೆಯಬಾರದು; ಕಾಲಕಾಲಕ್ಕೆ ಸ್ನಾನ, ಶುಚಿಯಾದ ಬಟ್ಟೆಯನ್ನು ಉಡುವುದು, ಶುಚಿಯಾದ ಆಹಾರವನ್ನು ತೆಗೆದುಕೊಳ್ಳುವುದು, ಹಲ್ಲು, ಕಣ್ಣು ಮೊದಲಾದ ಅಂಗಗಳನ್ನು ಎಚ್ಚರಿಕೆಯಿಂದ ನೋಡಿಕೊಳ್ಳುವುದು—ಇವುಗಳ ಮೂಲಕ ತನ್ನ ದೇಹವನ್ನು ಉತ್ತಮವಾಗಿಟ್ಟುಕೊಂಡು, ದೇಹಪುಷ್ಟಿಯಲ್ಲಿ ಆಸಕ್ತಿಯನ್ನು ಹೊಂದುವುದು ಆವಶ್ಯಕ.

(b) ಅದೇ ರೀತಿಯಲ್ಲಿ ತನ್ನ ಮನೆಯನ್ನೂ ಶುಚಿಯಾಗಿಟ್ಟುಕೊಳ್ಳಬೇಕು. ನಮ್ಮ ಹಳ್ಳಿಗಳ ಮನೆಗಳಲ್ಲಿರುವ ಮುಖ್ಯವಾದ ಕೊರತೆಗಳು ಯಾವುವೆಂದರೆ—(1) ಕಿಟಕಿಗಳಿಲ್ಲದಿರುವುದು. (2) ದನಗಳಿಗೆ ಪ್ರತ್ಯೇಕ

ಸ್ಥಳಗಳಿಲ್ಲದಿರುವುದು. (3) ಮನೆಯು ಜನಗಳಿಗೆ ಸಾಕಾಗುವಷ್ಟು ವಿಸ್ತಾರ ವಾಗಿಲ್ಲದಿರುವುದು. (4) ಕಕ್ಕಸಗಳಿಗೆ ಅನುಕೂಲವಿಲ್ಲದಿರುವುದು. (5) ಮನೆಯ ಬಚ್ಚಲು ನೀರು ಹೊರಗೆ ಹೋಗಲು ತಕ್ಕ ಅನುಕೂಲವಿಲ್ಲದಿರು ವುದು. (6) ಒಂದು ಮನೆಗೂ ಇನ್ನೊಂದು ಮನೆಗೂ ಮಧ್ಯದಲ್ಲಿ ಸ್ಥಳವಿ ಲ್ಲದಿರುವುದು. (7) ದವಸ ಧಾನ್ಯಗಳನ್ನು ಇಲಿಗಳಿಗೆ ಸಿಕ್ಕದಂತೆ ಕೂಡಿಡಲು ಅವಕಾಶವಿಲ್ಲದಿರುವುದು, ಮತ್ತು ತತ್ಫಲವಾಗಿ ಇಲಿ ಹೆಗ್ಗಣ ಗಳಿಗೆ ವಾಸಸ್ಥಾನಗಳನ್ನೊದಗಿಸಿರುವುದು. ಮನೆಯ ಯಜಮಾನರೂ, ಗ್ರಾಮಪಂಚಾಯತಿಯವರೂ ಬೆರೆತು ಕೆಲಸಮಾಡಿದರೆ ಈ ಕೊರತೆಗಳೆಲ್ಲ ವನ್ನೂ ಪರಿಹರಿಸುವುದು ಸಾಧ್ಯವಲ್ಲವೆ ?

(c) **ಗ್ರಾಮನೈರ್ಮಲ್ಯ**—ರೈತರಿಗೆ ತಮ್ಮ ದೇಹದ ಶುಚಿತ್ವ ದಲ್ಲಿಯೂ, ಮನೆಯ ಶುಚಿತ್ವದಲ್ಲಿಯೂ ಆಸಕ್ತಿಯನ್ನು ಹುಟ್ಟಿಸು ವುದು ಅಷ್ಟು ಕಷ್ಟವಲ್ಲ. ಆದರೆ ತಮ್ಮ ಗ್ರಾಮವೂ ಶುಚಿಯಾಗಿರ ಬೇಕೆಂಬ ಅಂಶವನ್ನು ಅವರಿಗೆ ಬೋಧಿಸುವುದು ಕಷ್ಟ. ಹತ್ತು ಜನಗಳಿಗೆ ಸೇರಿದ ಕೆಲಸಕ್ಕೂ ವ್ಯಕ್ತಿಯೊಬ್ಬಬ್ಬನಿಗೂ ಸಂಬಂಧವಿಲ್ಲವೆಂಬ ಮನೋ ಭಿಪ್ರಾಯವು ನಮ್ಮ ಹಳ್ಳಿಗಾಡಿನ ಜನರಲ್ಲಿ ಬೇರೂರಿ ನಿಂತಿರುವುದು. ತಮ್ಮ ನೆರೆಯು ಶುಚಿಯಾಗಿಲ್ಲದಿದ್ದರೆ ಅದರಿಂದ ತಮಗೂ ತೊಂದರೆ ಯೆಂಬ ವಿಷಯವು ರೈತರಿಗೆ ತಿಳಿಯಬೇಕು. ಹಾಗಾದಾಗಲೇ ಗ್ರಾಮ ಪಂಚಾಯತಿಗಳು ತಮ್ಮ ಮುಖ್ಯ ಕರ್ತವ್ಯವಾದ ಗ್ರಾಮನೈರ್ಮಲ್ಯದ ಕೆಲಸವನ್ನು ಸಮರ್ಪಕವಾಗಿ ಮಾಡಲು ಸಾಧ್ಯ.

ಈ ವಿಷಯದಲ್ಲಿ ಗ್ರಾಮಪಂಚಾಯತಿಗಳು ಅಗತ್ಯವಾಗಿಯೂ ಮಾಡಬೇಕಾದ ಕರ್ತವ್ಯಗಳಾವುವೆಂದರೆ—(1) ಬೀದಿಗಳನ್ನು ಸಮ ಗಟ್ಟಿ ಕಸಕಡ್ಡಿಗಳು ಬಿದ್ದು ಕೊಳೆಯದಂತೆ ಶುಚಿಯಾಗಿಡುವುದು. (2) ಊರಿನ ನೀರೆಲ್ಲವನ್ನೂ ಚರಂಡಿಗಳ ಮೂಲಕ ಹೊರಗೆ ಸಾಗಿಸುವುದು. (3) ಊರೊಳಗಾಗಲೀ, ಸಮೀಪದಲ್ಲಾಗಲಿ ಕಾಡುಗಿಡಗಳೂ, ಪೊದೆಗಳೂ

ಬೆಳೆಯುವಂತೆ ನೋಡಿಕೊಳ್ಳುವುದು. (4) ಕೆರೆಯ ಅಂಗಳವೂ, ಊರಿನ ಬೀದಿಗಳೂ ಕಕ್ಕಸಗಳಾಗದಂತೆಯೂ ತಿಪ್ಪೆಯ ಗುಂಡಿಗಳಾಗದಂತೆಯೂ ನೋಡಿಕೊಳ್ಳುವುದು. (ಎಲ್ಲ ಸಮಸ್ಯೆಗಳಿಗಿಂತಲೂ ಇದೇ ತೊಡಕಾದುದು. ಗ್ರಾಮಸ್ಥರಿಗೆ ಕಕ್ಕಸಗಳನ್ನು ಒದಗಿಸುವುದು ಹೇಗೆ? ಬ್ರೇನ್ ಅವರು ಪಂಜಾಬಿನಲ್ಲಿ ಪ್ರಚಾರಮಾಡುತ್ತಿರುವಂತೆ ಗೊಬ್ಬರದ ಗುಂಡಿಗಳ ಸುತ್ತಲೂ ಗೋಡೆಯನ್ನು ಹಾಕಿ ಆ ಗುಂಡಿಗಳನ್ನೇ ಕಕ್ಕಸಗಳಾಗಿ ಉಪಯೋಗಿಸಲು ನಮ್ಮ ರೈತರು ಒಪ್ಪುವರೇ? ಭರ್ಜಿಗೊಬ್ಬರವು ಅತ್ಯುತ್ತಮವಾದ ಸಸ್ಯಾಹಾರವೆಂಬುದನ್ನು ಅರಿತಿದ್ದರೂ, ಅದನ್ನು ಮುಟ್ಟಲು ಹಿಂಜರಿಯುವರು. ಮೈಸೂರು ಆರೋಗ್ಯದ ಇಲಾಖೆಯವರು ಬೋರ್‌ಹೋಲ್ ಕಕ್ಕಸಗಳನ್ನು ಬಳಕೆಗೆ ತರಬೇಕೆನ್ನುವರು. ಯಾವುದಾದರೂ ಆಗಲಿ, ಈ ಸಮಸ್ಯೆಯನ್ನು ಪ್ರತಿಯೊಂದು ಗ್ರಾಮಪಂಚಾಯತಿಯವರೂ ಪರಿಹರಿಸದಿದ್ದರೆ ಗ್ರಾಮದಲ್ಲಿ ಕುಡಿಯುವ ನೀರೂ ಶುಚಿಯಾಗಿರುವುದಿಲ್ಲ; ಮತ್ತು ಕೊಕ್ಕೆಹುಳುವಿನ ರೋಗವಾಗಲೀ, ನೊಣಗಳ ಕಾಟವಾಗಲೀ, ವಿಷವಾಯುವಿನ ಕಾಟವಾಗಲೀ ತಪ್ಪುವುದಿಲ್ಲ.) (5) ಊರಿನಲ್ಲಿ ಕುಡಿಯುವ ನೀರಿನ ಶುಚಿತ್ವವು ಕೆಡದಂತೆ ನೋಡಿಕೊಳ್ಳುವುದು. (6) ಊರಿನ ಬಳಿಯಲ್ಲಿ ನೀರು ನಿಂತು ಸೊಳ್ಳೆಗಳಿಗೂ ತದಂಗವಾದ ಮಲೇರಿಯಾ ಜ್ವರಕ್ಕೂ ಆಸರೆಯನ್ನೀಯದಂತೆ ಏರ್ಪಾಡು ಮಾಡುವುದು. (7) ಮನುಷ್ಯನ ಪರಮಶತ್ರುಗಳಾದ ಸೊಳ್ಳೆ, ಇಲಿ, ನೊಣ ಇವುಗಳ ಮೇಲೆ ಸಕಲ ವಿಧದಲ್ಲಿಯೂ ದಾಳಿಯಿಟ್ಟು ಅವುಗಳ ವಂಶವೇ ಇಲ್ಲದಂತೆಸಗುವುದು (ಗುಬ್ಬಿಯ ಮೇಲೆ ಬ್ರಹಾಸ್ತ್ರವೇಕೆಂದು ಕೆಲವರು ವಾದಿಸಬಹುದು. ಆದರೆ ಈ ಗುಬ್ಬಿಗಳ ಸ್ವಭಾವವನ್ನೂ, ಅವು ಎಷ್ಟರಮಟ್ಟಿಗೆ ಮನುಷ್ಯನಿಗೆ ತೊಂದರೆಯನ್ನು ಕೊಡುತ್ತಿರುವುವು ಎಂಬುದನ್ನು ಗಮನಿಸಿರಿ.)

ಹೀಗೆ ಎಲ್ಲಾ ಬಗೆಯಲ್ಲಿಯೂ ಗ್ರಾಮ, ಮನೆ, ಮಂದಿ ಎಲ್ಲವನ್ನೂ ನಿರ್ಮಲವಾಗಿಟ್ಟಿದ್ದರೆ ದೇಹಕ್ಕೂ ಸುಖ; ಹೃದಯಕ್ಕೂ ಆನಂದ.

(3) ಆರೋಗ್ಯ ನಿಯಮಗಳಿಗೆ ಪ್ರತಿಬಂಧಕಗಳಾಗಿರುವ ಕೆಲವು **ಸಾಮಾಜಿಕ ಪದ್ಧತಿಗಳನ್ನು ಬದಲಾಯಿಸುವುದು.**

(i) ಬಾಲ್ಯವಿವಾಹ.

(ii) ಘೋಷಾಪದ್ಧತಿ.

(iii) ಅಸ್ಪೃಶ್ಯತೆ.

ಇವುಗಳೆಲ್ಲವೂ ನಮ್ಮಲ್ಲಿ ಸಾಯುವವರ ಸಂಖ್ಯೆಯನ್ನೂ, ವ್ಯಾಧಿಗ್ರಸ್ತರ ಸಂಖ್ಯೆಯನ್ನೂ ಬೆಳೆಯಿಸುತ್ತಿವೆ ಎಂದು ಹಿಂದೆಯೇ ಹೇಳಿದೆವಷ್ಟೆ. ಇವುಗಳನ್ನು ವಿದ್ಯಾಪ್ರಚಾರದ ಮೂಲಕ ಬದಲಾಯಿಸಬೇಕು.

(4) ಮೇಲ್ಕಂಡ ಮಾರ್ಗಗಳನ್ನು ಅನುಸರಿಸುವುದರಿಂದ ನಮ್ಮ ಹಳ್ಳಿಗಾಡಿನಲ್ಲಿ ವ್ಯಾಧಿಗಳ ವ್ಯಾಪ್ತಿಯನ್ನು ಬಹುಮಟ್ಟಿಗೆ ನಿವಾರಿಸಬಹುದು. ಆದರೆ ಆ ಮಾರ್ಗಗಳೊಡನೆ ವೈದ್ಯಶಾಸ್ತ್ರವು ಒದಗಿಸಿಕೊಟ್ಟಿರುವ ಇನಾಕ್ಯುಲೇಷನ್, ದೇವಿಹಾಕುವುದು, ಕ್ವಿನೈನಿನಸೇವನೆ—ಇವುಗಳನ್ನೂ ಬಳಕೆಗೆ ತರಬೇಕು.

(5) ವೈದ್ಯಸಹಾಯವನ್ನು ಹೆಚ್ಚಾಗಿ ಒದಗಿಸುವುದು—ಮೈಸೂರು ಸರ್ಕಾರದವರು ಈ ವಿಷಯದಲ್ಲಿ ಎಷ್ಟೋ ಉತ್ಸಾಹವನ್ನು ಪ್ರದರ್ಶಿಸುತ್ತಿರುವರು. ಆಸ್ಪತ್ರೆಗಳ ಸಂಖ್ಯೆಗಳೂ ಸ್ವಲ್ಪಮಟ್ಟಿಗೆ ಹೆಚ್ಚುತ್ತಿವೆ; ಅವುಗಳಲ್ಲಿ ಚಿಕಿತ್ಸೆಯನ್ನು ಪಡೆಯುತ್ತಿರುವವರೂ ಹೆಚ್ಚುತ್ತಿದಾರೆ. 1934 ನೆಯ ಇಸವಿಯಲ್ಲಿ ಪ್ರಜಾಪ್ರತಿನಿಧಿಸಭೆಯ ದಸರಾ ಅಧಿವೇಶನದ ಪ್ರಾರಂಭಭಾಷಣದಲ್ಲಿ ದಿವಾನರವರು "ಎಲ್ಲ ವೈದ್ಯಸಂಸ್ಥೆಗಳಿಂದಲೂ ಸೇರಿ, ಒಟ್ಟು 41,72,435 ರೋಗಿಗಳಿಗೆ ಚಿಕಿತ್ಸೆಯು ನಡೆಯಿತು. ಹತ್ತು ವರುಷಗಳ ಹಿಂದೆ ಎಲ್ಲ ವೈದ್ಯಸಂಸ್ಥೆಗಳಿಂದಲೂ ಸೇರಿ ಒಟ್ಟು 20,44,937 ಮಂದಿ ರೋಗಿಗಳಿಗೆ ಮಾತ್ರ ಚಿಕಿತ್ಸೆನಡೆದಿದ್ದಿತು."[24] ಎಂದು ಅಪ್ಪಣೆ ಕೊಡಿಸಿದರು. ಇದೇ ರೀತಿಯಲ್ಲಿ ಮಕ್ಕಳ ಮತ್ತು ಹೆರಿಗೆಯ ಆಸ್ಪತ್ರೆಗಳಿಗಾಗಿಯೂ ಸರ್ಕಾರದವರು ಹೆಚ್ಚು ಶ್ರಮವನ್ನು ವಹಿಸುತ್ತಿದಾರೆ. ಗತಿಸಿದ

ಶ್ರೀಮಾನ್ ಸರ್ದಾರ್ ಕಾಂತರಾಜೆ ಅರಸಿನವರ ಮೇಲ್ಪಜ್ಞಿಯನ್ನನುಸರಿಸಿ ನಮ್ಮ ಸಂಸ್ಥಾದಲ್ಲಿ ಅನೇಕ ಮಂದಿ ಉದಾರಿಗಳು ಶಿಶುಸಂರಕ್ಷಣ ಮತ್ತು ಬಸುರಿ ಬಾಣಂತಿಯರ ಸಹಾಯಾರ್ಥವಾಗಿ 9-10 ಲಕ್ಷ ರೂಪಾಯಿಗಳವರೆಗೆ ದಾನಮಾಡಿರುವರು. 'ಮೆಟರ್ನಿಟಿ ಹೋಮ್' ಗಳೆಂಬ ಹೆರಿಗೆಯ ಆಸ್ಪತ್ರೆಗಳೂ, "ಚೈಲ್ಡ್ ವೆಲ್ಫೇರ್ ಸೆಂಟರು"ಗಳೆಂಬ ಶಿಶುಸಂರಕ್ಷಣಾಕೇಂದ್ರಗಳೂ, "ಬೇಬಿವೀಕ್" ಗಳೆಂಬ ಶಿಶುಸಂರಕ್ಷಣಾ ಸಪ್ತಾಹಗಳೂ ಹೇರಳವಾಗಿ ನಡೆಯುತ್ತಿವೆ. ಬ್ರಿಟಿಷ್ ಚಕ್ರಾಧಿಪತ್ಯದಲ್ಲೆಲ್ಲ ಮೈಸೂರಿಗೆ ಪ್ರಥಮಸ್ಥಾನವು ದೊರೆತು ನಮ್ಮ ಸಂಸ್ಥಾನವು ಮಾನ್ಯತೆಯನ್ನು ಪಡೆದಿರುವುದು ನಮಗೆ ಹೆಮ್ಮೆಯನ್ನುಂಟುಮಾಡತಕ್ಕದ್ದೇ ಸರಿ. ಅದೇ ರೀತಿಯಲ್ಲಿ ನಮ್ಮ ದೇಶದ ವೈದ್ಯರ ಕೀರ್ತಿಯು ದಕ್ಷಿಣ ಇಂಡಿಯದಿಂದಲೂ ಇತರ ಪ್ರಾಂತಗಳಿಂದಲೂ ರೋಗಿಗಳನ್ನು ಚಿಕಿತ್ಸೆಗಾಗಿ ನಮ್ಮದೇಶಕ್ಕೆ ಎಳೆಯುತ್ತಿರುವ ಅಂಶವು ಗಮನೀಯವಾದುದೇ.

ಆದರೆ ಈ ಸೌಲಭ್ಯಗಳು ಎಷ್ಟು ಹೆಚ್ಚಿದರೂ ಸಾಲದು; ನಮ್ಮ ಗ್ರಾಮವಾಸಿಗಳಿಗೆ ಇವು ಇನ್ನೂ ದೊರತೇ ಇಲ್ಲವೆನ್ನಬಹುದು. ಸರ್ಕಾರದವರು ಪ್ರತಿ ಹಳ್ಳಿಯಲ್ಲಿಯೂ ಆಸ್ಪತ್ರೆಗಳನ್ನಿಡಿಸುವುದು ಅಸಾಧ್ಯ ಮತ್ತು ಅನುಚಿತ; ಆದರೆ ಈಗಿರುವುದಕ್ಕಿಂತ ವೈದ್ಯಸಹಾಯವು ಹೆಚ್ಚಾಗಲೇಬೇಕಾದುದು ಆವಶ್ಯಕ. ಸರ್ಕಾರದವರು ಶಿಕ್ಷಿತರಾದ ಡಾಕ್ಟರುಗಳಿಗೆ ಹಳ್ಳಿಗಳಲ್ಲಿ ನೆಲಸುವಂತೆ ಉತ್ತೇಜನವನ್ನು ಕೊಡುತ್ತಿರುವರು. ಇದೇ ಬಗೆಯಲ್ಲಿ ಹಳ್ಳಿಯ ರೈತರೂ ತಮ್ಮ ಪರಸ್ಪರ ಸಹಾಯಕ ಸಂಘಗಳ ಮೂಲಕ ಅಥವಾ ಗ್ರಾಮಪಂಚಾಯತಿಗಳ ಮೂಲಕ ವೈದ್ಯಸಹಾಯವನ್ನು ಹೆಚ್ಚು ಮಾಡಿಕೊಳ್ಳಬಹುದು. ಇದನ್ನು ಹಿಂದೆ ಚರ್ಚಿಸಿರುವೆವು.[೨೮]

ಈ ಸಂದರ್ಭದಲ್ಲಿ ಇನ್ನೊಂದು ವಿಷಯಕ್ಕೆ ಹೆಚ್ಚು ಗಮನವು ಕೊಡಲ್ಪಡಬೇಕು. ಹಿಂದೆ ಪಶುಗಳ ರೋಗದ ವಿಷಯವನ್ನು ಚರ್ಚಿಸುತ್ತ ದೇಶೀಯ ವೈದ್ಯವಿದ್ಯೆಯ ಸಂರಕ್ಷಣೆಯು ಎಷ್ಟು ಆವಶ್ಯಕವೆಂಬು

ದನ್ನು ಸೂಚಿಸಿದ್ದೆವು. ಅದೇ ರೀತಿಯಲ್ಲಿ ಜನಗಳ ರೋಗಪರಿಹಾರಕ್ಕೆ ಆಯುರ್ವೇದ ಮತ್ತು ಯುನಾನಿ ವೈದ್ಯಮಾರ್ಗಗಳಿವೆಯಷ್ಟೆ. ಅವುಗಳ ಬೆಂಬಲವನ್ನೂ ನಾವು ಹೊಂದಿಲ್ಲ; ಅವು ಸಾವಿರಾರು ವರ್ಷಗಳ ಅನುಭವದ ಸಾರಗಳಾಗಿವೆ. ಆದುದರಿಂದಲೂ ಮತ್ತು ಪ್ರತಿಹಳ್ಳಿ ಯಲ್ಲಿಯೂ ಆಧುನಿಕ ವೈದ್ಯಸಹಾಯವನ್ನು ಒದಗಿಸುವುದು ಅಸಾಧ್ಯ ವಾದುದರಿಂದಲೂ, ನಮ್ಮ ದೇಶೀಯ ವೈದ್ಯವಿದ್ಯೆಯನ್ನು ಕ್ರಮಪಡಿಸಿ ಸುಶಿಕ್ಷಿತರಾದ ದೇಶೀಯ ವೈದ್ಯರಿಗೆ ಹೆಚ್ಚು ಪ್ರೋತ್ಸಾಹವನ್ನು ಕೊಡ ಬಹುದು.

ಒಟ್ಟಿನಲ್ಲಿ ನಮ್ಮ ಹಳ್ಳಿಗಳಲ್ಲಿ ಆರೋಗ್ಯವಿದ್ಯಾಪ್ರಚಾರ, ಮತ್ತು ವೈದ್ಯಸಹಾಯ ಎರಡೂ ಬೆಳೆಯಬೇಕೆಂಬುದು ವಿದಿತವಾಯಿತು. ಆದರೂ ಇವು ಯಾರಿಂದ ನಡೆಯಬೇಕಾದ ಕೆಲಸ? ನಾವು ಈಗಾಗಲೆ ಹೇಳಿರು ವಂತೆ ಸರ್ಕಾರದವರು ಇದಕ್ಕಾಗಿ ತಮ್ಮ ವೈದ್ಯ ಶಾಖೆಯ ಮೂಲ ಕವೂ, ಆರೋಗ್ಯ ಶಾಖೆಯ ಮೂಲಕವೂ, ಪ್ರಯೋಗಕೇಂದ್ರಗಳ ಮೂಲಕವಾಗಿಯೂ ಹೆಚ್ಚು ಕೆಲಸವನ್ನು ಮಾಡುತ್ತಿರುವರು. ಆದರೆ ಕುದುರೆಯನ್ನು ನೀರಿಗೆ ಕರೆದೊಯ್ಯಬಹುದು; ನೀರನ್ನು ಕುಡಿಸಲು ಸಾಧ್ಯವೆ? ಇದಕ್ಕಾಗಿ ಕುದುರೆಯ ಸಹಕಾರವೂ ಆವಶ್ಯಕವಲ್ಲವೆ? ಆದುದ ರಿಂದ ಈ ಗ್ರಂಥದ ಆದಿಯಿಂದ ಇಲ್ಲಿಯವರೆಗೆ ಹೆಜ್ಜೆಹೆಜ್ಜೆಗೂ ನಾವು ರೈತರಲ್ಲಿ ಆತ್ಮಾವಲಂಬನವನ್ನು ಅಭಿವೃದ್ಧಿಮಾಡಬೇಕೆಂದು ವಾದಿಸು ತ್ತಿರುವುದು. ನಮ್ಮ ಗ್ರಾಮ ಪಂಚಾಯತಿಯ ಕಾನೂನಿನ ಪ್ರಕಾರ ಆ ಸಂಸ್ಥೆಗೆ ಗ್ರಾಮನೈರ್ಮಲ್ಯದ ವಿಷಯದಲ್ಲಿ ಸಂಪೂರ್ಣವಾದ ಅಧಿಕಾರವು ದೊರೆತಿರುವುದು. ಉತ್ಸಾಹಶಾಲಿಯಾದ ನಾಯಕನೊಬ್ಬನು ದೊರೆತರೆ ಹೆಚ್ಚು ಶ್ರಮವಿಲ್ಲದೆ, ಹೆಚ್ಚು ವೆಚ್ಚವಿಲ್ಲದೆ ಗ್ರಾಮಗಳನ್ನು ನಿರ್ಮಲ ವಾಗಿಡುವುದು ಸಾಧ್ಯ. ಅದೇ ರೀತಿಯಲ್ಲಿ ರೈತರು ಪರಸ್ಪರ ಸಹಾಯಕ ಸಂಘಗಳನ್ನು ರಚಿಸಿಕೊಂಡು ತಮ್ಮ ಹಳ್ಳಿಗಳಲ್ಲಿ ವೈದ್ಯಸಹಾಯವನ್ನು

ಒದಗಿಸಿಕೊಳ್ಳಬಹುದು. ಅಂತು ರೈತರಲ್ಲಿ ಆತ್ಮಾವಲಂಬನವನ್ನು ವೃದ್ಧಿ ಗೊಳಿಸುವುದೇ ನಮ್ಮ ಪ್ರಥಮಕರ್ತವ್ಯವು.

ಈ ಸಂದರ್ಭದಲ್ಲಿ ಹಳ್ಳಿಯ ಪಾಠಶಾಲೆಗಳ ಮೇಲೆ ಹೆಚ್ಚು ಜವಾಬ್ದಾರಿಯು ಬಿದ್ದಿರುವುದು. ಪಾಶ್ಚಾತ್ಯದೇಶಗಳಲ್ಲಿ ಜನಗಳಿಗೆ ಆರೋಗ್ಯನಿಯಮಗಳು ಸ್ವಲ್ಪಮಟ್ಟಿಗೆ ತಿಳಿದಿರುವುದರಿಂದ ತಮ್ಮ ಮಕ್ಕಳಿಗೂ ಅವುಗಳನ್ನು ಬೋಧಿಸುವರು. ನಮ್ಮ ದೇಶವಲ್ಲಿ ಇದು ಸಾಧ್ಯವಿಲ್ಲ. ಆದುದರಿಂದ ಮುಂದಿನ ಜನಾಂಗದವರ ಆರೋಗ್ಯಭಾಗ್ಯವನ್ನು ಕಾಪಾಡುವ ಭಾರವು ಹಳ್ಳಿಯ ಉಪಾಧ್ಯಾಯರ ಮೇಲೆ ಬೀಳುವುದು. ಅವರು ತಮ್ಮ ಪಾಠಕ್ರಮದಿಂದಲೂ, ಉದಾಹರಣೆಯಿಂದಲೂ ಮಕ್ಕಳಲ್ಲಿ ಕ್ರಮವಾದ ಆರೋಗ್ಯಪದ್ಧತಿಯನ್ನು ಬಳಕೆಗೆ ತರಬೇಕು; ಮತ್ತು ಆಟಪಾಟಗಳ ಮೂಲಕ ಮಕ್ಕಳ ಆರೋಗ್ಯವನ್ನು ಅಭಿವೃದ್ಧಿಮಾಡಬೇಕು. ಹೀಗೆ ಮಾಡಿದರೆ ಮಕ್ಕಳ ಮೂಲಕ ಹಳ್ಳಿಯ ಹಿರಿಯರ ಆರೋಗ್ಯಸಂರಕ್ಷಣೆಯನ್ನು ಮಾಡುವುದು ಸಾಧ್ಯ. ಆದರೆ ಮಕ್ಕಳಿಗೆ ಬರಿಯ ಉಪದೇಶವನ್ನು ಮಾಡುವುದು ತಪ್ಪು. ಅದಕ್ಕೆ ಪ್ರತಿಯಾಗಿ ಪಾಶ್ಚಾತ್ಯದೇಶಗಳಲ್ಲಿ ಈಗ ಹೆಚ್ಚಾಗಿ ಬಳಕೆಗೆ ಬರುತ್ತಿರುವ ಪದ್ಧತಿಯನ್ನನುಸರಿಸಿ ಶುಚಿತ್ವವನ್ನೂ ಇತರ ಆರೋಗ್ಯನಿಯಮಗಳನ್ನೂ ಪಾಠಶಾಲೆಯಲ್ಲಿಯೇ ಅಭ್ಯಸಿಸುವಂತೆ ಮಾಡಬೇಕು. ಸಂಯುಕ್ತರಾಷ್ಟ್ರ, ಜರ್ಮನ್, ಮೊದಲಾದ ಪಾಶ್ಚಾತ್ಯದೇಶಗಳ ಪಾಠಶಾಲೆಗಳಲ್ಲಿ ಮಕ್ಕಳ ಆರೋಗ್ಯನಿಯಮಕ್ಕೆ ಕೊಡುವಷ್ಟು ಗಮನವನ್ನು ಅಕ್ಷರಾಭ್ಯಾಸಕ್ಕೆ ಕೊಡುತ್ತಾ ಇಲ್ಲ. ಉದಾಹರಣೆ: ಹಲ್ಲುಗಳ ಶುಚಿತ್ವವು ದೇಹಾರೋಗ್ಯಕ್ಕೆ ಬಹು ಮುಖ್ಯವಷ್ಟೆ. ಒಬ್ಬ ವೈದ್ಯರು ಹೇಳುವಂತೆ ನಮ್ಮ ದೇಶದಲ್ಲಿ ಶೇಕಡ 90 ಮಂದಿ ಹಲ್ಲಿನ ವ್ಯಾಧಿಯನ್ನು ಹೊಂದಿರುವರು. ಪಾಶ್ಚಾತ್ಯದೇಶಗಳಲ್ಲಿ ಮಕ್ಕಳಿಗೆ ಪಾಠಶಾಲೆಯಲ್ಲಿಯೇ ಹಲ್ಲುಜ್ಜುವುದನ್ನು ಕಲಿಸುವರು. ಪ್ರತಿಬಾಲಕ ಬಾಲಕಿಯರಿಗೂ ಪ್ರತ್ಯೇಕವಾದ ಬ್ರಷ್ಷುಗಳನ್ನು ಶುಚಿಯಾಗಿಟ್ಟು ಶಾಲೆಗೆ ಬಂದ

ಕೂಡಲೆ ಹಲ್ಲುಜ್ಜುವ ಏರ್ಪಾಡನ್ನು ಮಾಡುವರು. ನಮ್ಮ ಹಳ್ಳಿಗಳಲ್ಲಿ ಉತ್ಸಾಹಶಾಲಿಗಳಾದ ಕೆಲವು ಉಪಾಧ್ಯಾಯರು ಮಕ್ಕಳಿಗೆ ಕಿಂಡರ್ ಗಾರ್ಟನ್ ಹಾಡುಗಳಲ್ಲಿರುವ "ಹಲ್ಲನ್ನುಜ್ಜುವ ಪರಿ ಹೀಗೆ" ಎಂಬ ಹಾಡನ್ನು ಹೇಳಿಕೊಡುವರು. ಆದರೆ ಹಾಡು ಹಲ್ಲನ್ನು ಉಜ್ಜುವುದೆ? ಇದರಿಂದಲೇ ನಮ್ಮ ಉಪದೇಶಕ್ಕೆ ಪ್ರಯೋಜನವು ದೊರೆಯದಿರುವುದು. ನಾವು ಯಾವ ಆರೋಗ್ಯನಿಯಮಗಳನ್ನು ಬಾಲಕರು ಅಭ್ಯಸಿಸುವಂತೆ ಮಾಡ ಬಯಸುವೆವೋ ಅಂತಹ ನಿಯಮಗಳನ್ನು ಪಾಠಶಾಲೆಯಲ್ಲಿಯೇ ಅಭ್ಯಸಿಸು ವಂತೆ ಏರ್ಪಾಡುಮಾಡಬೇಕು. ಇದನ್ನೇ ಆಧುನಿಕ ವಿದ್ಯಾಭಿಮಾನಿಗಳು 'ಪ್ರಾಜೆಕ್ಟ್ ಮೆಥಡ್' ಎಂದು ಕರೆಯುವರು.

ಹಳ್ಳಿಯ ಉಪಾಧ್ಯಾಯರು ಬಾಲಕರ ಮೂಲಕ ಹಳ್ಳಿಯ ಹಿರಿಯರಿಗೂ ನೆರವಾಗಬಹುದೆಂಬುದನ್ನು ಸೂಚಿಸಿರುವೆವಷ್ಟೆ. ಅವರು ನೇರವಾಗಿಯೂ ರೈತರಿಗೆ ಸಹಾಯಮಾಡಬಹುದು. (1) ಆರೋಗ್ಯ ಶಾಖೆಯವರು ಪ್ರಕಟಪಡಿಸುತ್ತಿರುವ ಹಸ್ತಪತ್ರಗಳನ್ನೂ, ಗ್ರಂಥಗಳನ್ನೂ ಹಳ್ಳಿಯವರಿಗೆ ಪರಿಚಯಮಾಡಿಕೊಡಬಹುದು. (2) ಇಲಾಖೆಯವರ ಸಹಾಯದಿಂದ ಆರೋಗ್ಯನಿಯಮಗಳಿಗೆ ಸಂಬಂಧಪಟ್ಟಂತೆ ಉಪನ್ಯಾಸಗಳನ್ನು ಕೊಡಿಸಬಹುದು. (3) ತಾವು ಸ್ವಲ್ಪಮಟ್ಟಿಗೆ ಚಿಕಿತ್ಸಾಕ್ರಮವನ್ನು ಅಭ್ಯಸಿಸಿಕೊಂಡು (First Aid) ರೈತರಿಗೆ ನೆರವಾಗಬಹುದು. (4) ಬಾಲಚರ್ಮೂ ಸಂಘಗಳನ್ನು ಏರ್ಪಡಿಸಿ ಅವುಗಳ ಮೂಲಕ ಗ್ರಾಮ ನಿರ್ಮಲೀಕರಣಕಾರ್ಯದಲ್ಲಿ ತಾವೂ ಭಾಗವಹಿಸಬಹುದು.

ಒಂದು ವಿಷಯವನ್ನು ನೆನಪಿನಲ್ಲಿಡೋಣ. ಬಾಲಕರಂತೆಯೇ ರೈತರೂ ಕೂಡ ಉಪದೇಶಕ್ಕೆ ಮರುಳಾಗುವವರಲ್ಲ. ಮಹಾತ್ಮಾಗಾಂಧಿಜಿಯವರು ತಮ್ಮ ಇತ್ತೀಚಿನ ಹೇಳಿಕೆಯೊಂದರಲ್ಲಿ ಹೇಳಿರುವ "ಯಾವ ಕೆಲಸವನ್ನು ನಾನು ಮಾಡಲಾರೆನೋ ಆ ಕೆಲಸವನ್ನು ಇತರರಿಗೆ ಉಪದೇಶಮಾಡಲೊಲ್ಲೆನು." ಎಂಬುದನ್ನು ಉಪಾಧ್ಯಾಯರು ತಮ್ಮ ಜೀವನ

ಸೂತ್ರವನ್ನಾಗಿಟ್ಟುಕೊಳ್ಳಬೇಕು. "ಮೊದಲು ಮಾಡಿ ತೋರಿಸಿರಿ ಅನಂತರ ಹೇಳಿತೋರಿಸಿರಿ."

## ೧೨. ಗ್ರಾಮಪಂಚಾಯತಿಗಳು

ಈ ಗ್ರಂಥದ ಹಿಂದಿನ ಪ್ರಕರಣಗಳಲ್ಲಿ ಚಿತ್ರಿಸಿರುವ ರೈತರ ಕಷ್ಟ ಪರಂಪರೆಗಳಿಗೆ ರೈತರೇ ಬಹುಮಟ್ಟಿಗೆ ಕಾರಣರಾಗಿರುವರಷ್ಟೆ. ಅವರ ಹಿಂದಿನ ಕಾಲದಲ್ಲಿ ತಮ್ಮ ಅಭಿವೃದ್ಧಿಗೆ ಬೇಕಾದ ಎಲ್ಲ ಕೆಲಸಗಳನ್ನೂ ತಾವೇ ಮಾಡಿಕೊಳ್ಳುತ್ತಿದ್ದರೇ ವಿನಾ, ಯಾವಾಗಲೂ ಇತರರ ಆಶ್ರಯವನ್ನೇ ಬಯಸುತ್ತಾ ಆತ್ಮಾವಲಂಬನವನ್ನು ಮರೆತಿರಲಿಲ್ಲ. ಇಂದ ಅವರು ಇತರರ ನೆಳಲಿನಲ್ಲಿಯೇ ಬದುಕಬೇಕೆಂಬ ಅಭಿಪ್ರಾಯವನ್ನ ಹೆಚ್ಚಾಗಿ ಪ್ರದರ್ಶಿಸುತ್ತಿರುವರು. ಈ ಮನೋರೋಗವನ್ನು ನಿವಾರಿಸಿ ಹೊರತು ರೈತರ ಉದ್ಧಾರವಾಗಲಾರದು. ರೈತರು ತಮ್ಮ ಸ್ವಪ್ರಯತ್ನ ದಿಂದಲೇ ತಮ್ಮ ತೊಂದರೆಗಳನ್ನೆಲ್ಲ ಪರಿಹರಿಸಿಕೊಳ್ಳಬೇಕು. ಈ ತತ್ತ್ವ ವನ್ನು ಉಲ್ಲಂಘಿಸಿ ಅವರನ್ನು ನಾವು ಉದ್ಧಾರಮಾಡುವೆವೆಂದು ಯತ್ನಿಸು ಯಾವ ಸಂಸ್ಥೆಯೂ ತನ್ನ ಆಸೆಯನ್ನು ಸಫಲಗೊಳಿಸಿಕೊಳ್ಳಲಾರದು ರೈತರು ತಮ್ಮನ್ನು ತಾವೇ ಉದ್ಧಾರಮಾಡಿಕೊಳ್ಳಬೇಕು; ಇಲ್ಲವೆ ಈ ರುವಂತೆಯೇ ಕೂಪಕೂರ್ಮಗಳಾಗಿ ಉಳಿಯಬೇಕು. ಆದುದರಿಂದಲೆ ರೈತರ ಕಷ್ಟದ ಪರಿಹಾರಮಾರ್ಗಗಳನ್ನು ವಿಮರ್ಶಿಸುವಾಗ ಪರಸ್ಪ ಸಹಾಯಕ ಸಂಘಗಳಿಗೆ ನಾವು ಅಗ್ರಸ್ಥಾನವನ್ನು ಕೊಟ್ಟಿರುವುದು. ರೈತರಿ ತಮ್ಮ ಬಾಹುಬಲದಲ್ಲಿಯೂ ಬುದ್ಧಿಶಕ್ತಿಯಲ್ಲಿಯೂ ನಂಬುಗೆಯನ್ನುಂಟ ಮಾಡುವುದೇ ಪರಸ್ಪರ ಸಹಾಯಕ ಸಂಘಗಳ ಮುಖ್ಯಕರ್ತವ್ಯವು. ಈ ಪರಸ್ಪರ ಸಹಾಯಕ ಸಂಘಗಳಿಗಿಂತಲೂ ಪುರಾತನ ಸಂಸ್ಥೆಗಳಾಗಿಯೂ

ಹೆಚ್ಚುಪ್ರಭಾವಯುತಗಳಾಗಿಯೂ ಇರುವ ಗ್ರಾಮಪಂಚಾಯತಿಗಳಿಗೆ ಇನ್ನೂ ಮಾನ್ಯಸ್ಥಾನವು ದೊರೆಯುಬೇಕಾದುದು ಸಹಜ.

ನಮ್ಮ ದೇಶದ ಸ್ಥಳೀಯ ಸರ್ಕಾರಕ್ಕೆ ಅನ್ವಯವಾಗುವ ಸಂಸ್ಥೆಗಳ ಇತಿಹಾಸವನ್ನು ಪರೀಕ್ಷಿಸಿದರೆ, ಈ ಗ್ರಾಮಪಂಚಾಯತಿಗಳು ನಮ್ಮ ಸಂಸ್ಕೃತಿಯ ರಕ್ಷಣೆಗೂ ಬೆಳವಳಿಕೆಗೂ ಎಷ್ಟರಮಟ್ಟಿಗೆ ಕಾರಣವಾಗಿದ್ದು ವೆಂಬುದು ನಿಶದವಾಗುವುದು. ನಾವು ಪೀಠಿಕಾಪ್ರಕರಣದಲ್ಲಿಯೇ ಸೂಚಿಸಿರುವಂತೆ ಅಂದಿನ ಹಳ್ಳಿಗಳಿಗೆ ಬಾಹ್ಯಪ್ರಪಂಚದ ಸಂಪರ್ಕವೇ ಇರುತ್ತಿರಲಿಲ್ಲ. ಹಳ್ಳಿಯ ಆಡಳಿತ, ಹಳ್ಳಿಯ ಅಭಿವೃದ್ಧಿ—ಇವುಗಳು ಹಳ್ಳಿಯವರ ಕೈಯಲ್ಲಿಯೇ ಇದ್ದುವು. ಸರ್ ಚಾರ್ಲ್ಸ್ ಮೆಟ್ಕಾಫ್ ಎಂಬ ಪ್ರಸಿದ್ಧನಾದ **ಇಂಗ್ಲೀಷ್ ಆಡಳಿತಗಾರ**ನೊಬ್ಬನು "ಪ್ರತಿಯೊಂದು ಗ್ರಾಮಪಂಚಾಯತಿಯೂ ಒಂದೊಂದು ಸಂಪೂರ್ಣಸ್ವಾತಂತ್ರ್ಯವುಳ್ಳ ಪ್ರಜಾಪ್ರಭುತ್ವಸಂಸ್ಥೆಯಾಗಿದ್ದಿತು. ಚಕ್ರಾಧಿಪತ್ಯಗಳನಂತರ ಚಕ್ರಾಧಿಪತ್ಯಗಳು ಉರುಳಿದರೂ ಈ ಸಂಸ್ಥೆಗಳು ಅಳ್ಳಾಡಲಿಲ್ಲ; ಇವುಗಳ ಪ್ರಭಾವದಿಂದಲೇ ಭಾರತಸಂಸ್ಕೃತಿಯು ಸಾವಿರಾರು ವರ್ಷಗಳ ಘೋರಕದನಗಳಿಂದಲೂ ತಲೆತಪ್ಪಿಸಿಕೊಂಡು ಬದುಕಿರುವುದು."[1] ಎಂದು ಹೇಳಿರುವನು.

ಈತನು ನಮ್ಮ ಗ್ರಾಮಪಂಚಾಯತಿಗಳ ಪ್ರಭಾವವನ್ನು ಚಿತ್ರಿಸಿದುದು ಸುಮಾರು ನೂರು ವರ್ಷಗಳ ಹಿಂದೆ. ಅಂದಿನಿಂದೀಚೆಗೆ ಬ್ರಿಟಿಷ್ ಆಡಳಿತಗಾರರ ಉತ್ಸಾಹದ ಫಲವಾಗಿ ಅಧಿಕಾರವೆಲ್ಲವೂ ಕೇಂದ್ರೀಕೃತವಾಗಹತ್ತಿತು. ಸ್ಥಳೀಯ ಸಂಸ್ಥೆಗಳ ಪ್ರತಿಭೆಯು ಮಲಿನವಾಗುತ್ತ ಬಂದು ಕೊನೆಗೆ ಅವು ಸಂಪೂರ್ಣವಾಗಿ ಮಾಯವಾದುವು. ಭಾರತಭೂಮಿಯ ಮೂಲೆಮೂಲೆಯ ಹಳ್ಳಿಗಳೂ ಸಾಮಾನ್ಯವಾದ ಕೆಲಸಗಳಿಗೂ ಕೂಡ ಕೇಂದ್ರಸರ್ಕಾರದ ನೌಕರರ ಚರಣಗಳನ್ನೇ ಶರಣುಹೊಗಲು ತೊಡಗಿದುವು. ತತ್ಫಲವಾಗಿ ನಿರುತ್ಸಾಹ, ಅಜ್ಞಾನ, ಬಡತನ ಇವುಗಳೇ ನಮ್ಮ ಹಳ್ಳಿಗಳ ಪಾಲಿಗೆ ದೊರಕಿದ ಪ್ರಸಾದ.

ನಮ್ಮ ಹಳ್ಳಿಗಳ ಈ ರೋಗವು ಸಮಾಜನೇತೃಗಳ ದೃಷ್ಟಿಗೆ ಬಿದ್ದ ಕೂಡಲೆ ನಮ್ಮ ಗ್ರಾಮಪಂಚಾಯತಿಗಳ ಜೀರ್ಣೋದ್ಧಾರಕ್ಕೆ ಪ್ರಯತ್ನಗಳು ಪ್ರಾರಂಭವಾದುವು. ಸ್ಥಳೀಯಸಂಸ್ಥೆಗಳಿಗೆ ಅಧಿಕಾರಕೊಡುವ ವಿಷಯವನ್ನು ವಿಮರ್ಶೆಮಾಡಿದ Royal Commission on Decentralisation in India ಎಂಬ ಸಮಿತಿಯವರ ವರದಿಯು 1909 ನೆಯ ಇಸವಿಯಲ್ಲಿ ಹೊರಬಿದ್ದಿತು.[2] ಅನಂತರ ಬ್ರಿಟಿಷ್ ಇಂಡಿಯದ ಅನೇಕ ಪ್ರಾಂತಗಳಲ್ಲಿ ಗ್ರಾಮಪಂಚಾಯತಿಗಳ ಪುನರುದ್ಧಾರಕ್ಕಾಗಿ ಪ್ರಯತ್ನಗಳು ನಡೆಯತೊಡಗಿದುವು. 1919 ನೆಯ ಇಸವಿಯ ರಾಜಕೀಯ ಸುಧಾರಣೆಗಳು ಆಚರಣೆಗೆ ಬಂದಾರಭ್ಯ ಪ್ರಜೆಗಳಿಂದ ಚುನಾಯಿತರಾದ ಮಂತ್ರಿಗಳ ಅಧೀನದಲ್ಲಿ ಸ್ಥಳೀಯ ಸಂಸ್ಥೆಗಳ ಉದ್ಧಾರಕ್ಕಾಗಿ ಕೆಲಸಗಳು ನಡಿಯುತ್ತಿವೆ.

ಸ್ಥಳೀಯ ಸಂಸ್ಥೆಗಳ ಬೆಳವಳಿಕೆಯಲ್ಲಿ ಶ್ರದ್ಧೆಯನ್ನು ತೋರಿಸುತ್ತಿರುವ ಪ್ರಾಂತಗಳ ಗುಂಪಿನಲ್ಲಿ, ನಮ್ಮ ಮೈಸೂರು ಸಂಸ್ಥಾನಕ್ಕೆ ಅಗ್ರಸ್ಥಾನವನ್ನು ಕೊಡಬಹುದೆಂದು ನಾವು ಹೆಮ್ಮೆಯಿಂದ ಹೇಳಬಹುದು. ಸುಷುಪ್ತಾವಸ್ಥೆಯಲ್ಲಿರುವ ರೈತರನ್ನು ಎಚ್ಚರಗೊಳಿಸಿ, ಜವಾಬ್ದಾರಿಯನ್ನು ಹೊರಬಲ್ಲ ಪ್ರಜೆಗಳನ್ನಾಗಿ ಅವರನ್ನು ತರಪೇತು ಮಾಡಲೋಸುಗ, ನಡೆದಿರುವ ಅನೇಕ ಪ್ರಯತ್ನಗಳಲ್ಲಿ, 1914 ನೆಯ ಇಸವಿಯಲ್ಲಿ ಜಾರಿಗೆ ಬಂದ ವಿಲೇಜ್ ಇಂಪ್ರೂವ್‌ಮೆಂಟ್ ಸ್ಕೀಮನ್ನೂ, 1911 ನೆಯ ಇಸವಿಯ ಕೆರೆಗಳ ಪಂಚಾಯತಿಯ ರೆಗ್ಯುಲೇಷನನ್ನೂ, 1913 ನೆಯ ಇಸವಿಯ ವಿಲೇಜ್ ಕೋರ್ಟ್ಸ್ ರೆಗ್ಯುಲೇಷನನ್ನೂ ನಾವು ನೆನಪಿನಲ್ಲಿಡಬಹುದು. ಈ ಕಾನೂನುಗಳೆಲ್ಲವೂ ಸಮರ್ಪಕವಾಗಿ ಕೆಲಸಮಾಡದಿದ್ದುದರಿಂದ ಸರ್ಕಾರದವರು ಇವುಗಳನ್ನೆಲ್ಲ ಪುನರ್ವಿಮರ್ಶೆಮಾಡಿ 1926 ನೆಯ ಇಸವಿಯಲ್ಲಿ ನಮ್ಮ ಹಳ್ಳಿಯ ಸ್ಥಳೀಯ ಆಡಳಿತಕ್ಕಾಗಿ ಉತ್ತಮವಾದ ಶಾಸನವೊಂದನ್ನು ರಚಿಸಿರುವರು. ಸರ್ಕಾರದವರ ಧ್ಯೇಯವೂ, ತದಂಗವಾಗಿ ಅವರು ಆಚರಿ

ಸುವವಾರ್ಗಗಳೂ ಆ 1926 ನೆಯ ಇಸವಿಯ ವಿಲೇಜ್ ಪಂಚಾಯತಿ ರೆಗ್ಯುಲೇಷನ್ ಎಂಬ ಶಾಸನದಲ್ಲಿ ಕ್ರೋಢೀಕೃತವಾಗಿರುವುವು. (ಈ ಶಾಸನದಲ್ಲಿ ಈಚೆಗೆ ಒಂದೆರಡು ಸಾಮಾನ್ಯವಾದ ಬದಲಾವಣೆಗಳಾಗಿವೆ.)

**ಸರ್ಕಾರದ ಧ್ಯೇಯ**—ಈ ಕಾನೂನಿನ ಗುರಿಯನ್ನು ನಾವು ಎರಡು ಗುಂಪಾಗಿ ವಿಂಗಡಿಸಬಹುದು.

1. ಆಯಾ ಸ್ಥಳಗಳ ಸನ್ನಿವೇಶವನ್ನು ಚೆನ್ನಾಗಿ ಅರಿತವರೇ ಆಯಾ ಸ್ಥಳಗಳಿಗೆ ಮಾತ್ರ ಅನ್ವಯವಾಗುವ ಆಡಳಿತದ ಕಾರ್ಯವನ್ನು ಏರ್ಪಡಿಸಬೇಕು. ಹಾಗೆ ಮಾಡಿದರೆ ಆಡಳಿತವು ಅಗ್ಗವಾಗಿಯೂ, ಸುಲಭವಾಗಿಯೂ, ಉತ್ತಮವಾಗಿಯೂ ನಡೆಯುವುದು. ಪ್ರತಿಯೊಂದು ಹಳ್ಳಿಯ ಅಭಿವೃದ್ಧಿಯಲ್ಲಿಯೂ ಅಲ್ಲಿಯ ರೈತರಿಗಿರುವಷ್ಟು ಉತ್ಸಾಹವು ಕೇಂದ್ರಸರ್ಕಾರದ ನೌಕರರಿಗೆ ಎಂದೆಂದಿಗೂ ಇರಲಾರದು. ಆದುದರಿಂದ ಪ್ರತಿಯೊಂದು ಹಳ್ಳಿಯ ಜೀರ್ಣೋದ್ಧಾರವನ್ನೂ ಆ ಹಳ್ಳಿಯವರ ಆಡಳಿತಕ್ಕೇ ವಹಿಸಬೇಕು. ಅಂದರೆ ಗ್ರಾಮಪಂಚಾಯತಿಗಳು ಅಂತಹ ಹಳ್ಳಿಗಳ ಜೀರ್ಣೋದ್ಧಾರಕ್ಕಾಗಿ ಸ್ಪಷ್ಟವಾಗಿರುವ ಸಂಸ್ಥೆಗಳೆಂಬ ಭಾವನೆಯು ಸರ್ಕಾರದವರ ಮನಸ್ಸಿನಲ್ಲಿದೆ. ಆದುದರಿಂದಲೇ ಸರ್ಕಾರವು ಈ ಸಂಸ್ಥೆಯನ್ನು ಸೃಷ್ಟಿಸಿದುದು ಮಾತ್ರವಲ್ಲದೆ, ಅದಕ್ಕೆ ಧನ ವಸತಿಯನ್ನೂ ಕಲ್ಪಿಸಿ, ಅಧಿಕಾರವನ್ನು ಕೊಟ್ಟು, ತಾವು ಹಿಂದೆ ನಿಂತು ಅವುಗಳ ಅಭಿವೃದ್ಧಿಗೆ ಸಹಾಯಮಾಡುತ್ತಿರುವುದು.

2. ಇದಲ್ಲದೆ ಸರ್ಕಾರದವರ ಮನಸ್ಸಿನಲ್ಲಿ ಇನ್ನೊಂದು ಧ್ಯೇಯವೂ ಉಂಟು. ನಮ್ಮ ಸಂಸ್ಥಾನದ ಸರ್ಕಾರವನ್ನು ಪ್ರಜಾಸತ್ತಾತ್ಮಕವಾದ ಸರ್ಕಾರವಾಗಿ ಪರಿವರ್ತಿಸಬೇಕೆಂಬುದು ಎಲ್ಲರ ಅಭಿಪ್ರಾಯವಷ್ಟೆ. ಇದು ಆಚರಣೆಗೆ ಬರಬೇಕಾದರೆ ನಮ್ಮ ಸಂಸ್ಥಾನದ ಆಡಳಿತದ ಜವಾಬ್ದಾರಿಯನ್ನು ವಹಿಸಲು ಶಕ್ತಿಯುಳ್ಳ ಪ್ರಜೆಗಳು ಹೆಚ್ಚಬೇಕು. ಇದಕ್ಕಾಗಿ ಮೊದಮೊದಲು ಪ್ರತಿಯೊಂದು ಹಳ್ಳಿಯ ಸಮಸ್ಯೆಗಳನ್ನೂ

ಪರಿಹರಿಸುವ ಜವಾಬ್ದಾರಿಯನ್ನು ಅಲ್ಲಿಯ ಜನಗಳಿಗೆ ವಹಿಸಿದರೆ ಅವರಿಗೆ ಆಡಳಿತದ ಅನುಭವವು ಬರುವುದು. ಗ್ರಾಮಪಂಚಾಯತಿಗಳು ಆಡಳಿತದ ಕ್ರಮವನ್ನು ನಮ್ಮ ಜನಗಳಿಗೆ ಕಲಿಸುವ ಪ್ರಯೋಗಕ್ಷೇತ್ರಗಳಾಗಿರಬೇಕು. ಮೈಸೂರಿನ ಆಡಳತದಲ್ಲಿ ಕೆಲವು ಸುಧಾರಣೆಗಳನ್ನು ಜಾರಿಗೆ ತರಬೇಕೆಂಬ ಉದ್ದೇಶದಿಂದ ಸರ್ಕಾರದವರು ಸರ್ ಬ್ರಜೇಂದ್ರನಾಥಸೀಲ್‌ರವರ ಅಧ್ಯಕ್ಷತೆಯಲ್ಲಿ ನೇಮಿಸಿದ್ದ ಸಮಿತಿಯವರು ಗ್ರಾಮಪಂಚಾಯತಿಗಳ ವಿಷಯದಲ್ಲಿ ಹೇಳುವ ಮಾತನ್ನು ಕೇಳಿರಿ. "ನೇಗಿಲಿನ ಹಿಂದಿರುವ ರೈತನನ್ನು ಸುಧಾರಿಸುವವರೆಗೂ ಮೈಸೂರು ಸಂಸ್ಥಾನದಲ್ಲಿ ರಾಜಕೀಯ ಸುಧಾರಣೆಗಳು ಮುಂದುವರಿಯವು. ನೂರಾರು ಕಾನ್ಫರೆನ್ಸುಗಳಾಗಬಹುದು; ಆದರೂ ರೈತರು ತಮ್ಮ ಹಳ್ಳಿಯ ಪಂಚಾಯತಿಯ ಆಡಳಿತವನ್ನು ಸಮರ್ಪಕವಾಗಿ ನಡೆಯಿಸಬಲ್ಲರೆಂಬುದು ದೃಢವಾಗುವವರೆಗೆ ವಾಸ್ತವವಾದ ಪ್ರಜಾಸತ್ತಾತ್ಮಕವಾದ ಸರ್ಕಾರವು ಬರಲಾರದೆಂಬುದನ್ನು ಪ್ರತಿಯೊಬ್ಬರೂ ತಿಳಿಯಲಿ. ನಮ್ಮ ಪ್ರಥಮಕರ್ತವ್ಯವು ಹಳ್ಳಿಯ ಆಡಳಿತವನ್ನು ಸತ್ತ್ವವುಳ್ಳುದನ್ನಾಗಿ ಮಾಡುವುದು." [There can be no constitutional reform in Mysore without the reform of the Raiyat at the plough. Let it be burnt into the consciousness of all politicions that unless the people can be shown to be managing the Village Panchayat and Council, there can be no question of real or realised popular government, inspite of a hundred conferences and mass meetings. Our first concern then, is to make village Government real."[3]]

ನಮ್ಮ ಗ್ರಾಮಪಂಚಾಯತಿಯ ಕಾನೂನನ್ನು ತಯಾರುಮಾಡಿದವರು ಈ ಎರಡು ಉದ್ದೇಶಗಳನ್ನೂ ತಮ್ಮ ಮನದಲ್ಲಿಟ್ಟುಕೊಂಡು ಅದಕ್ಕನುಗುಣವಾದ ಕೆಲಸವನ್ನು ಮಾಡಿರುವರೆಂದು ಹೇಳಬಹುದು.

**ಗ್ರಾಮ ಪಂಚಾಯತಿಗಳ ರಚನೆ**[4]—ಮೈಸೂರು ದೇಶದ ಎಲ್ಲ ಹಳ್ಳಿಗಳಲ್ಲಿಯೂ ಗ್ರಾಮಪಂಚಾಯತಿಗಳಿರಬೇಕೆಂಬುದಾಗಿ ತೀರ್ಮಾನ ವಾಗಿದೆ. ಇಂತಹ ಪಂಚಾಯತಿಗಳನ್ನು ಮೂರು ವಿಧವಾಗಿ ವಿಂಗಡಿಸಿ ರುವರು. (1) ಒಂದೇ ಹಳ್ಳಿಗೆ ಅನ್ವಯವಾಗುವ ಪಂಚಾಯತಿ. (2) ಕೆಲವು ಹಳ್ಳಿಗಳ ಗುಂಪಿಗೆ ಅನ್ವಯವಾಗುವ ಪಂಚಾಯತಿ. (3) ಹಾಮ್ಲೆಟ್. [ಕೆಲವು ಗ್ರಾಮಗಳಲ್ಲಿ ಪಂಚಾಯತಿಯ ಸಮಿತಿಗಳನ್ನು ನಿರ್ಮಿಸದೆ ಗ್ರಾಮಸ್ಥರೆಲ್ಲರೂ ಒಟ್ಟುಗೂಡಿ ಪಂಚಾಯತಿಯ ಕೆಲಸವನ್ನು ನಿರ್ವಹಿಸುವರು. ಇಂತಹ ಪಂಚಾಯತಿಗಳಿಗೆ ಕಾನೂನಿನಲ್ಲಿ ಹಾಮ್ಲೆಟ್ ಎಂಬ ಹೆಸರನ್ನು ಕೊಟ್ಟಿರುವರು.]

ಒಂದು ಮತ್ತು ಎರಡನೆಯ ಗುಂಪಿನ ಪಂಚಾಯತಿಗಳಲ್ಲಿ ಗ್ರಾಮದ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ಏಳು ಜನಕ್ಕೆ ಕಡಿಮೆಯಿಲ್ಲದೆ ಹನ್ನೆರಡುಮಂದಿಗೆ ಮೀರದೆ ಮೆಂಬರುಗಳಿರುವ ಕಮಿಟಿಗಳಿರುವುವು. ಮೆಂಬರುಗಳನ್ನು ಚುನಾವಣೆಯ ಮೂಲಕವಾಗಿಯೂ ಮತ್ತು ನಾಮ ಕರಣದ ಮೂಲಕವಾಗಿಯೂ ಆರಿಸುವರು. ಆದರೆ ಪ್ರಜೆಗಳಿಂದ ನೇರ ವಾಗಿ ಚುನಾಯಿತರಾದ ಮೆಂಬರುಗಳು ಪಂಚಾಯತಿಯಲ್ಲಿ ಅರ್ಧಕ್ಕಿಂತ ಕಡಿಮೆಯಾಗಿರಕೂಡದು. ಇಂತಹ ಚುನಾಯಿತ ಸದಸ್ಯರನ್ನು ಆರಿಸು ವುದರಲ್ಲಿ ಪ್ರಾಪ್ತವಯಸ್ಕರಾದ ಗ್ರಾಮಸ್ಥರೆಲ್ಲರೂ ಭಾಗವಹಿಸಬಹುದು. ಆದರೆ ಹೆಂಗಸರು ಮೆಂಬರುಗಳಾಗುವ ಅಧಿಕಾರವನ್ನು ಹೊಂದಿಲ್ಲ. (ಹುಚ್ಚರು, ಶಿಕ್ಷೆಯನ್ನು ಹೊಂದಿರುವವರು, ದಿವಾಳಿಗಳು ಮೊದಲಾದವರು ಚುನಾವಣೆಯಲ್ಲಿ ಭಾಗವಹಿಸಲಾಗದು.) ಪ್ರತಿಗ್ರಾಮಪಂಚಾಯತಿಗೂ ಒಬ್ಬರು ಅಧ್ಯಕ್ಷರಿರುವರು. ಅವರನ್ನು ಆಯಾ ಡಿಸ್ಟ್ರಿಕ್ಟಿನಲ್ಲಿ ಡೆಪ್ಯುಟಿ ಕಮಿಷನರ್ ಅವರು ನೇಮಕಮಾಡುವರು. ಆದರೆ ಕೆಲವು ಗ್ರಾಮಪಂಚಾ ಯತಿಗಳಿಗೆ ತಮ್ಮ ಅಧ್ಯಕ್ಷರನ್ನು ತಾವೇ ಚುನಾಯಿಸಿಕೊಳ್ಳುವ ಅಧಿ ಕಾರವನ್ನು ಸರ್ಕಾರದವರು ಕೊಟ್ಟಿರುವರು. ಅಧ್ಯಕ್ಷರು ಅನಕ್ಷರಸ್ಥ

ರಾಗಿದ್ದು ಪಂಚಾಯುತಿಗೆ ಕಾರ್ಯದರ್ಶಿಯು ಅವಶ್ಯವಿದ್ದರೆ ಮೆಂಬರುಗಳ ಲ್ಲೊಬ್ಬರನ್ನು ಕಾರ್ಯದರ್ಶಿಯಾಗಿ ನೇಮಿಸಿಕೊಳ್ಳಬಹುದು; ಕಾರ್ಯ ದರ್ಶಿಗೆ ಸ್ವಲ್ಪವೇತನವನ್ನೂ ಕೊಡಬಹುದು.

**ಗ್ರಾಮಪಂಚಾಯತಿಗಳ ಕರ್ತವ್ಯ**—ಪಂಚಾಯುತಿಗಳ ಕರ್ತ ವ್ಯವನ್ನು ಮೂರು ಗುಂಪಾಗಿ ವಿಂಗಡಿಸಬಹುದು.

1. **ಅನಿವಾರ್ಯ ಕರ್ತವ್ಯ**—ಗ್ರಾಮದ ರಸ್ತೆಗಳನ್ನು ಸರಿಪಡಿ ಸುವುದು, ಸಣ್ಣಸಣ್ಣ ಸೇತುವೆಗಳನ್ನು ಕಟ್ಟಿಸುವುದು, ಬೀದಿಗಳನ್ನೂ ಭಾವಿಗಳನ್ನೂ ಕೆರೆಗಳನ್ನೂ ಶುಚಿಯಾಗಿಟ್ಟಿರುವುದು, ಮನೆಗಳನ್ನು ಕಟ್ಟು ವುದರಲ್ಲಿಯೂ ಸ್ಮಶಾನಗಳ ಮೇಲ್ವಿಚಾರಣೆಯನ್ನು ನೋಡುವುದರ ಲ್ಲಿಯೂ ಭಾಗವಹಿಸುವುದು, ಜನಗಳಿಗೂ ದನಗಳಿಗೂ ಒಳ್ಳೆಯ ನೀರನ್ನು ಒದಗಿಸಿ ಗ್ರಾಮದ ಆರೋಗ್ಯವನ್ನು ಕಾಪಾಡುವುದು—ಇವು ಪಂಚಾಯುತಿಗಳ ಮುಖ್ಯಕರ್ತವ್ಯಗಳು. ಬಲಾತ್ಕಾರ ವಿದ್ಯಾಭ್ಯಾಸವು ಜಾರಿಯಲ್ಲಿರುವ ಕಡೆ ಬಾಲಕರ ಪಟ್ಟಿಯನ್ನು ತಯಾರುಮಾಡುವುದೂ ಪಂಚಾಯಿತರ ಕರ್ತವ್ಯ.

2. **ಐಚ್ಛಿಕ ಕರ್ತವ್ಯಗಳು**—ಸರ್ಕಾರದವರು ಏರ್ಪಡಿಸಬಹು ದಾದ ನಿಬಂಧನೆಗಳಿಗೊಳಪಟ್ಟು ತಮ್ಮ ಕೈಯಲ್ಲಿರುವ ಹೊಬಲಗಿಗನುಗು ಣವಾಗಿ ಈ ಕೆಳಗೆ ವಿವರಿಸಿರುವ ವಿಷಯಗಳಲ್ಲಿ ಪ್ರವರ್ತಿಸಬಹುದು. ಪ್ರಯಾಣಿಕರಿಗೆ ಅನುಕೂಲಪಡಿಸುವುದು, ರೋಗಿಗಳಿಗೂ ಬಡವರಿಗೂ ಸಹಾಯಮಾಡುವುದು, ಸಾಲುಮರಗಳನ್ನೂ ತೋಪುಗಳನ್ನೂ ನೆಡಿಸು ವುದು, ವಿದ್ಯೆ, ಪರಸ್ಪರ ಸಹಾಯಕ ಸಂಘಗಳು, ಕೈಗಾರಿಕೆ, ವ್ಯಾಪಾರ— ಇವುಗಳನ್ನು ಅಭಿವೃದ್ಧಿಗೆ ತರುವುದು, ಬೀದಿಗಳಲ್ಲಿ ಬೆಳಕನ್ನು ಇಡಿಸುವುದು.

3. **ಸರ್ಕಾರದವರು ವಹಿಸಿಕೊಡಬಹುದಾದ ಕರ್ತವ್ಯಗಳು :** ಹಳ್ಳಿಯ ಹುಲ್ಲುಬನ್ನಿಗಳು, ಹಳ್ಳಿಗೆ ಸೇರಿದ ಕಾಡುಗಳು, ಸಣ್ಣ ದೇವಾ ಲಯಗಳು, ಕೆರೆಗಳು, ಹಳ್ಳಿಯಲ್ಲಿರುವ ಕೆಲವು ಸಾರ್ವಜನಿಕ ಸಂಸ್ಥೆಗಳು,

ಹಳ್ಳಿಯ ಪಾಠಶಾಲೆಗಳು — ಇವುಗಳ ಮೇಲ್ವಿಚಾರಣೆಯನ್ನು ಸರ್ಕಾರದವರು ಗ್ರಾಮಪಂಚಾಯಿತಿಗಳಿಗೆ ವಹಿಸಿಕೊಡಬಹುದು.

**ಪಂಚಾಯುತಿಗಳ ಧನಾನುಕೂಲತೆ**—ಸರ್ಕಾರದವರು ಗ್ರಾಮ ಪಂಚಾಯಿತಿಗಳಿಗೆ ಎಷ್ಟು ಪ್ರಾಮುಖ್ಯತೆಯನ್ನು ಕೊಟ್ಟಿರುವರು ನೋಡಿರಿ. ಆದರೆ ಈ ಅಗಾಧವಾದ ಭಾರವನ್ನು ಹೊರಲು ತಕ್ಕ ಧನಾನುಕೂಲತೆಯು ಇರಬೇಕಾದುದು ಆವಶ್ಯಕವಲ್ಲವೆ? ಇದಕ್ಕಾಗಿಯೇ 'ವಿಲೇಜ್ ಪಂಚಾಯತ್ ಫಂಡ್' ಎಂಬ ಹೆಸರಿನಿಂದ ತಾಲ್ಲೋಕು ಟ್ರೆಷರಿಯಲ್ಲಿ ಹಣವನ್ನಿಡುವರು. ಈ ಹಣವನ್ನು ಶೇಖರಿಸಲು ಗ್ರಾಮದಲ್ಲಿರುವ ಮನೆಗಳು, ಅಂಗಡಿಗಳು, ಹುಲ್ಲು ಹಿತ್ತಲು, ಬಂಡಿ ಮೊದಲಾದುವುಗಳ ಮೇಲೆ ತೆರಿಗೆಯನ್ನು ಹಾಕುವರು. ಸರ್ಕಾರದವರು ಅಪ್ಪಣೆಕೊಟ್ಟರೆ ಪಂಚಾಯಿತರು ಇತರವಿಧವಾದ ತೆರಿಗೆಗಳನ್ನೂ ಹಾಕಬಹುದು; ಸಾಲವನ್ನೂ ತೆಗೆಯಬಹುದು.

**ಸರ್ಕಾರದವರ ತನಿಖೆ ಮತ್ತು ಮೇಲ್ವಿಚಾರಣೆ**—ಈ ರೀತಿಯಲ್ಲಿ ಗ್ರಾಮಸ್ಥರಿಗೆ ತಮ್ಮ ಗ್ರಾಮದ ಅಭಿವೃದ್ಧಿಯಲ್ಲಿ ಭಾಗವಹಿಸಲು ಅವಕಾಶವು ಕಲ್ಪಿತವಾಗಿದೆ. ಆದರೆ ನಮ್ಮ ಗ್ರಾಮಸ್ಥರಿಗೆ ಈ ವಿಧವಾದ ಕೆಲಸದಲ್ಲಿ ಹೆಚ್ಚು ಅನುಭವವು ಇಲ್ಲದುದರಿಂದಲೂ, ನಮ್ಮ ವಿದ್ಯಾವಂತರು ನಗರಮೋಹಿಗಳಾಗಿರುವುದರಿಂದಲೂ, ಸರ್ಕಾರದವರ ಮೇಲೆ ಹೆಚ್ಚು ಜವಾಬ್ದಾರಿಯು ಬಿದ್ದಿದೆ; ಸರ್ಕಾರದವರ ಮೇಲ್ವಿಚಾರಣೆಯು ಅತ್ಯಾವಶ್ಯಕವಾಗಿದೆ. ಇದಕ್ಕಾಗಿ ಕೆಲವು ನಿಯಮಗಳಿವೆ. ಗ್ರಾಮಪಂಚಾಯತಿಯವರು ವರ್ಷಕ್ಕೊಮ್ಮೆ ತಮ್ಮ ಆಯವ್ಯಯದ ಅಂದಾಜನ್ನು ಅಮಲ್ದಾರರಿಗೆ ಕಳುಹಿಸಿಕೊಡಬೇಕು. ಅಮಲ್ದಾರರ ಮುಂಜೂರಾತಿಯನ್ನು ಪಡೆದ ಮೇಲೆ ಅಂದಾಜಿನಲ್ಲಿರುವ ಖರ್ಚುಗಳನ್ನು ಮಾಡಬಹುದು. ಅಮಲ್ದಾರರಿಂದ ಒಂದು ತಿಂಗಳೊಳಗಾಗಿ ಉತ್ತರವು ಬಾರದಿದ್ದರೆ ಅಂದಾಜು ಅಂಗೀಕಾರವಾಗಿದೆಯೆಂದು ಭಾವಿಸಿ ಕೆಲಸನಡೆಯಿಸಬಹುದು. ಹೀಗಲ್ಲದೆ

ಆಯವ್ಯಯದ ಪಟ್ಟಿಯಲ್ಲಿ ಸೇರದಿರುವ ಯಾವ ಖರ್ಚನ್ನು ಮಾಡಬೇಕಾದರೂ ಅಮಲ್ದಾರರ ಅಪ್ಪಣೆಯನ್ನು ಪೂರ್ವಭಾವಿಯಾಗಿ ಪಡೆಯಬೇಕು. ಡೆಪ್ಯುಟಿಕಮಿಷನ್ನಿನವರ ಸಾಮಾನ್ಯವಾದ ಹತೋಟಿಗೆ ಒಳಪಟ್ಟು ಅಮಲ್ದಾರರು ತಮ್ಮ ತಾಲ್ಲೋಕಿನ ಪಂಚಾಯತಿಗಳ ಮೇಲೆ ತನಿಖೆ, ಮೇಲ್ವಿಚಾರಣೆ, ಹತೋಟಿ—ಇವುಗಳಿಗೆ ಸಂಬಂಧಪಟ್ಟ ಅಧಿಕಾರವನ್ನು ಹೊಂದಿರುವರು. ಅಮಲ್ದಾರರು ಆಗಿಂದಾಗ್ಗೆ ಡೆಪ್ಯುಟಿಕಮಿಷನರಿಗೆ ವರದಿಯನ್ನು ಒಪ್ಪಿಸುತ್ತಿರಬೇಕು. ಪಂಚಾಯತಿಗಳ ಪೂರ್ತಿಯಾದ ಮೇಲ್ವಿಚಾರಣೆಯು ರೆವಿನ್ಯು ಕಮಿಷನರಿಗೆ ಸೇರಿದುದು.

ಪಂಚಾಯಿತರು ತಮಗೆ ಸಲ್ಲಬೇಕಾದ ತೆರಿಗೆಯನ್ನು ತಾವೇ ವಸೂಲ್ಮಾಡಬಹುದು. ಅವರಿಗೆ ಆಗದಿದ್ದರೆ ಸರ್ಕಾರದವರು ಆ ಗ್ರಾಮದ ಪಟೇಲ್ ಶಾನುಭೋಗರಿಗೆ ಈ ಕೆಲಸವನ್ನು ವಹಿಸಬಹುದು. ಮತ್ತು ಈ ಕೆಲಸಕ್ಕಾಗಿ ವಸೂಲಾದ ಹಣದಲ್ಲಿ ಶೇಕಡ 5 ಕ್ಕೆ ಮೀರದಂತೆ ಅವರಿಗೆ ಪೋಟಿಗೆ ಕೊಡಬಹುದು. ಪಟೇಲ ಮತ್ತು ಶಾನುಭೋಗರು ಪಂಚಾಯಿತಿಗೆ ಅಧೀನರಲ್ಲ. ಆದರೆ ವಸೂಲಿಯ ವಿವರವನ್ನು ಪಂಚಾಯಿತರಿಗೆ ಆಗಾಗ್ಗೆ ತಿಳಿಸುತ್ತಿರಬೇಕು.

**ಗ್ರಾಮಪಂಚಾಯತಿಗಳಿಗಿರುವ ಅವಕಾಶ**—ಒಟ್ಟಿನಲ್ಲಿ ಸರ್ಕಾರದವರ ಉದ್ದೇಶವು ಸ್ತೋತ್ರಾರ್ಹವಾದುದು. ಗ್ರಾಮದ ಎಲ್ಲಾ ವಿಧವಾದ ಬೆಳವಳಿಕೆಗೂ ತಮ್ಮ ಪ್ರತಿನಿಧಿಗಳ ಮೂಲಕ ಗ್ರಾಮಸ್ಥರೇ ಜವಾಬ್ದಾರರಾಗಿರಲೆಂಬುದೇ ಸರ್ಕಾರದ ಧ್ಯೇಯ. "ಇದು ನಮ್ಮ ಗ್ರಾಮ; ನಮ್ಮ ಗ್ರಾಮದ ಮೇಲ್ಮೆಯು ನಮ್ಮನ್ನೇ ಸೇರಿದುದು." ಎಂಬ ಹೆಮ್ಮೆಯು ರೈತರ ಮನದಲ್ಲಿ ಬಂದು ತಮ್ಮ ಗ್ರಾಮದ ಕುಂದುಕೊರತೆಗಳನ್ನು ಹೋಗಲಾಡಿಸಲು ಅವರೇ ಮುಂದೆ ಬರಬೇಕು. ಪೂರ್ವಕಾಲದಲ್ಲಿದ್ದಂತೆ ಇಂದೂ ಗ್ರಾಮಗಳು ಸ್ವತಂತ್ರವಾದ ಪ್ರಜಾಸತ್ತಾತ್ಮಕ ಸರ್ಕಾರಗಳಾಗಿ ಬೆಳೆಯಬೇಕು. ಇಂತಹ ಗ್ರಾಮಪಂಚಾಯತಿಗಳು ಎಷ್ಟರ ಮಟ್ಟಿಗೆ ಹಳ್ಳಿಯ

ಜೀವನವನ್ನು ಉತ್ತಮಗೊಳಿಸಬಹುದು ಎಂಬ ವಿಷಯದಲ್ಲಿ ಸರ್ ಎಮ್. ವಿಶ್ವೇಶ್ವರಯ್ಯನವರು ಹೇಳುವ ಮಾತನ್ನು ಕೇಳಿರಿ. "ರೈತರ ಉತ್ಸಾಹ, ಶಕ್ತಿ, ಬುದ್ಧಿವಂತಿಕೆ, ಪರಸ್ಪರ ಸಹಕಾರಬುದ್ಧಿ—ಇವು ಎಷ್ಟು ಹೆಚ್ಚಾಗಿ ವೆಯೋ ಅಷ್ಟು ಚೆನ್ನಾಗಿ ಪಂಚಾಯತಿಗಳು ಕೆಲಸಮಾಡಬಲ್ಲವು." (The field for improvement is limited only by the energy, intelligence, and activity of the people and their capacity for co-operative effort.[5])

## ಮೈಸೂರು ದೇಶದಲ್ಲಿ ಗ್ರಾಮಪಂಚಾಯತಿಗಳು ಮಾಡಿರುವ ಕೆಲಸ.

ಈ ಸಂದರ್ಭದಲ್ಲಿ ಮೈಸೂರು ಪ್ರಜಾಪ್ರತಿನಿಧಿಸಭೆಯ ಅಧಿವೇಶನ ವೊಂದರಲ್ಲಿ ನಮ್ಮ ಸಂಸ್ಥಾನದ ದಿವಾನರಾದ ಸರ್ ಮಿರ್ಜಾ ಇಸ್ಮೇಯಿಲ್ ಅವರು ಮಾಡಿದ ವಿಮರ್ಶೆಯು ನಮಗೆ ಉಪಕಾರಕವಾಗಿದೆ. "ಗ್ರಾಮ ಪಂಚಾಯತಿ ರೆಗ್ಯುಲೇಷನ್ ಜಾರಿಗೆ ಬಂದು ಈಗ ಎಂಟುವರ್ಷಗಳು ಮಾತ್ರವೇ ಆಗಿವೆ. ಆದಾಗ್ಯೂ, ಈ ಎಂಟುವರ್ಷಗಳ ಅವಧಿಯಲ್ಲಿ ಗ್ರಾಮಪಂಚಾಯತಿಗಳ ಸಂಖ್ಯೆಯು 8,863 ರಿಂದ 11,390 ಕ್ಕೆ ಏರಿದೆ. ಗ್ರಾಮಪಂಚಾಯತಿ ಪ್ರದೇಶಗಳಲ್ಲಿ ವಸೂಲಾದ ಹುಟ್ಟುವಳಿಯ ಮೊಬಲಗು 75 ಲಕ್ಷ ರೂಪಾಯಿಗಳಿಗಿಂತಲೂ ಹೆಚ್ಚಾಗಿದೆ. ಗ್ರಾಮಪಂಚಾಯತಿಗಳು ಈಗಾಗಲೇ 45 ಲಕ್ಷ ರೂಪಾಯಿಗಳಿಗಿಂತ ಹೆಚ್ಚು ಮೊಬಲಗನ್ನು ವೆಚ್ಚ ಮಾಡಿವೆ. ಈ ರೀತಿ ಹಣವನ್ನು ವಸೂಲ್ಮಾಡಿ ವೆಚ್ಚಮಾಡಿರುವುದಷ್ಟೇ ಮುಖ್ಯವೆಂಬುದಲ್ಲ, ನಮ್ಮ ಆಶಯ. **ಗ್ರಾಮಗಳ ಆಡಳಿತವನ್ನು ಗ್ರಾಮಸ್ಥರೇ ಬಹುಮಟ್ಟಿಗೆ ನಿರ್ವಹಿಸಿಕೊಳ್ಳುವ ಸ್ಥಳೀಯ ಪ್ರಜಾಧಿಕಾರದ ಚಲಾವಣೆಗೆ ಇದು ಸಾಧಕವಾಗಿರುವುದೇ ಮುಖ್ಯ ವಿಚಾರ.** ಮೈಸೂರು ಸಂಸ್ಥಾನದಲ್ಲಿ ಗ್ರಾಮಪಂಚಾಯತಿಗಳು ಎರಡು ವಿಧಗಳಲ್ಲಿ ತಮ್ಮ ಸಾರ್ಥಕ್ಯವನ್ನು ತೋರ್ಪಡಿಸಿಕೊಂಡಿವೆ. ಮೊದಲನೆ

ಯದಾಗಿ, ಅವು ನೆರವೇರಿಸಿರುವ ಗ್ರಾಮಾಭಿವೃದ್ಧಿ ಕಾರ್ಯಗಳಿಂದ ಅವು ತಮ್ಮ ಸಾರ್ಥಕ್ಯವನ್ನು ತೋರ್ಪಡಿಸಿಕೊಂಡಿವೆ. ಅವು ಅನೇಕ ಕಾಮಗಾರಿಗಳನ್ನು ಕೈಕೊಂಡಿವೆ; ಅನೇಕ ರಸ್ತೆಗಳನ್ನು ಮಾಡಿಸಿವೆ; ಗ್ರಾಮೋದ್ಯಾನಗಳನ್ನು ಏರ್ಪಡಿಸಿಕೊಂಡಿವೆ; ಗ್ರಾಮಸ್ಥರಿಗೆ ವೈದ್ಯಸಹಾಯವನ್ನೂ ವಿದ್ಯಾಭ್ಯಾಸ ಸೌಕರ್ಯಗಳನ್ನೂ ದೊರಕಿಸಿಕೊಟ್ಟಿವೆ. ಎರಡನೆಯದಾಗಿ ಗ್ರಾಮಪಂಚಾಯತಿಗಳು ಪ್ರಜೆಗಳ ಹೃದಯದಲ್ಲಿ ಪರೋಪಕಾರ ಬುದ್ಧಿಯೂ ತಮ್ಮ ಗ್ರಾಮಗಳ ಮೇಲಣ ಹೆಮ್ಮೆಯೂ ಹುಟ್ಟುವಂತೆ ಮಾಡಿ, ತಮ್ಮ ಸಾರ್ಥಕ್ಯವನ್ನು ತೋರ್ಪಡಿಸಿಕೊಂಡಿವೆ. ಗ್ರಾಮಪಂಚಾಯತಿಗಳ ಕೃಷಿಯ ಫಲವಾಗಿ, ಅಸಂಖ್ಯಾತ ಗ್ರಾಮಸ್ಥರು "ಇದು ನಮ್ಮ ಗ್ರಾಮದ ಕೆಲಸ; ಇದು ನಮ್ಮ ಗ್ರಾಮದ ಸೌಕರ್ಯಕ್ಕೆ ದಾರಿ." ಎಂಬ ಹೆಮ್ಮೆಯಿಂದಲೂ ಉತ್ಸಾಹದಿಂದಲೂ ವಾರಕ್ಕೊಂದು ದಿನ ಉಚಿತವಾಗಿ ದುಡಿದು, ಗ್ರಾಮಾಭಿವೃದ್ಧಿಕಾರ್ಯಗಳಿಗೆ ಸಹಾಯಮಾಡುವಂತಾಗಿದೆ. ಕೂಲಿಯನ್ನು ಕೊಟ್ಟು ಮಾಡಿಸಿದ್ದರೆ ಸುಮಾರು 10 ಲಕ್ಷ ರೂಪಾಯಿಗಳನ್ನು ಕೊಡಬೇಕಾಗುತ್ತಿದ್ದಷ್ಟು ಕೆಲಸವು ಈ ಮಾರ್ಗದಿಂದ ನಡೆದಿದೆ. ಕಾರ್ಯರೂಪದಿಂದ ಇನ್ನೂ ಅನೇಕ ವಿಧವಾಗಿ ಗ್ರಾಮಪಂಚಾಯತಿಗಳು ಸಹಾಯಮಾಡಿವೆ.[6] "

ಸರ್ಕಾರದವರ ಪರವಾಗಿ ದಿವಾನರವರು ಮಾಡಿರುವ ಈ ವರ್ಣನೆಯಿಂದ ಪ್ರತಿಯೊಬ್ಬ ಗ್ರಾಮಪ್ರೇಮಿಗೂ ಆನಂದವಾಗದಿರದು. ಪ್ರಾರಂಭವಾದ ಎಂಟು ಹತ್ತು ವರ್ಷಗಳೊಳಗೆ ನಮ್ಮ ಗ್ರಾಮಾಭ್ಯುದಯ ಸಂಸ್ಥೆಗಳು ಇಷ್ಟು ಫಲಕಾರಿಗಳಾಗಿರುವುದು ಅಭಿನಂದನೀಯವಾದ ಸಂಗತಿಯೇ. ಆದರೆ ಇಂತಹ ಸಂಸ್ಥೆಗಳ ಮುಂದಿರುವ ಅಗಾಧವಾದ ಸಮಸ್ಯೆಗಳ ಸ್ವರೂಪವನ್ನು ನಾವು ಮನದಲ್ಲಿಟ್ಟುಕೊಂಡರೆ, ಈ ಸಂಸ್ಥೆಗಳು ಸಮಸ್ಯೆಗಳ ಅಂಚಿನಲ್ಲಿ ಒಂದು ಭಾಗವನ್ನೂಕೂಡ ಮುಟ್ಟಿಲ್ಲವೆಂಬುದು ವಿದಿತವಾಗುವುದು. ನಮ್ಮ ಗ್ರಾಮಗಳ ಉದ್ಧಾರಕ್ಕೆ ಗ್ರಾಮಪಂಚಾಯತಿಗಳೂ,

ಗ್ರಾಮದ ಪರಸ್ಪರ ಸಹಾಯಕ ಸಂಘಗಳೂ, ಗ್ರಾಮಪಾಠಶಾಲೆಗಳೂ ಒಟ್ಟಿಗೆ ಬೆರೆತು ಒಮ್ಮುಖವಾಗಿ ಕೆಲಸಮಾಡಬೇಕೆಂಬ ಆಸೆಯು ನಮ್ಮೆಲ್ಲರ ಧ್ಯೇಯವಲ್ಲವೆ ? ಆದರೆ ನಮ್ಮ ಪಂಚಾಯತಿಗಳು ಇನ್ನೂ ಎಷ್ಟರಮಟ್ಟಿಗೆ ಕ್ರಮಪಡಬೇಕೆಂಬುದನ್ನು ತೋರಿಸಲೋಸುಗ 1934-35 ನೆಯ ಇಸವಿಯ ಸರ್ಕಾರಿ ವರದಿಯಿಂದ ಆರಿಸಿರುವ ಕೆಲವು ಅಂಕಿಗಳನ್ನು ನೋಡಿರಿ. ನಾವು ಈ ಮೊದಲೇ ಹೇಳಿರುವಂತೆ ನಮ್ಮ ಗ್ರಾಮಪಂಚಾಯತಿಗಳ ಧ್ಯೇಯದಲ್ಲಿ ರೈತರಿಗೆ ರಾಜಕೀಯ ವಿದ್ಯಾಭ್ಯಾಸವನ್ನು ಕೊಡುವುದೂ ಒಂದಲ್ಲವೆ? ನಮ್ಮ ಜನಗಳ ರಾಜಕೀಯಜ್ಞಾನದ ಆಳವನ್ನು ಅವರು ಪಂಚಾಯತಿಯ ಕಾರ್ಯಕಲಾಪಗಳಲ್ಲಿ ಪ್ರದರ್ಶಿಸುವ ಉತ್ಸಾಹದಿಂದ ಅಳೆಯಬಹುದು. ಸರ್ಕಾರದ ವರದಿಯ ಪ್ರಕಾರ ನಮ್ಮ ಪಂಚಾಯತಿಗಳು ಕ್ರಮವಾಗಿ ಮೀಟಿಂಗುಗಳನ್ನು ನಡೆಸುತ್ತಾ ಇಲ್ಲವಂತೆ. ಶೇಕಡ 25 ಪಂಚಾಯತಿಗಳು ಕ್ರಮವಾಗಿ ಮೀಟಿಂಗುಗಳನ್ನು ನಡೆಯಿಸಿದುವಂತೆ. ಪಂಚಾಯತಿಗಳ ಕಾರ್ಯದಕ್ಷತೆಯು ತೆರಿಗೆಯನ್ನು ವಸೂಲು ಮಾಡುವುದರಲ್ಲಿಯಾದರೂ ಇರಬೇಕಲ್ಲವೆ? 1934-35 ನೆಯ ಇಸವಿಯಲ್ಲಿ ಬಾಕಿ ನಿಂತಿದ್ದ ಮೊಬಲಗು 50,17,279 ರೂಪಾಯಿಗಳು. ಇದರಲ್ಲಿ ವಸೂಲಾದುದು 10,13,639 ರೂಪಾಯಿಗಳಂತೆ. ಇದರಲ್ಲಿ ಸರ್ಕಾರದವರು ಕೊಟ್ಟಿರುವ ರೆಮಿಷನ್ನೂ ಸೇರಿದೆ. ಕಾಲಕಾಲಕ್ಕೆ ಹಣವನ್ನು ವಸೂಲ್ಮಾಡುತ್ತಿಲ್ಲವೆಂಬುದು ಪಂಚಾಯತಿಗಳ ಕರ್ತವ್ಯನಿಷ್ಠೆಗೆ ಒಂದು ಉದಾಹರಣೆಯಲ್ಲವೆ! ಹಣವನ್ನು ವೆಚ್ಚಮಾಡುವುದರಲ್ಲಿಯೂ ಇದೇ ವಿಧವಾದ ಉಪೇಕ್ಷೆ ಕಂಡುಬರುತ್ತದೆ. 1934-35 ರ ಅಂತ್ಯದಲ್ಲಿ ವಿಲೇಜ್ ಪಂಚಾಯತಿ ಫಂಡಿಗೆ ಸೇರಿದ 30,06,916 ರೂಪಾಯಿಗಳು ಸರ್ಕಾರದ ಟ್ರೆಷರಿಯಲ್ಲಿ ಉಳಿದಿದ್ದುವು. ಅದೇ ಕಾಲದಲ್ಲಿ ಎಷ್ಟೋ ಹಳ್ಳಿಗಳಲ್ಲಿ ಕುಡಿಯುವ ನೀರಿಗೂ ದುರ್ಭಿಕ್ಷವಾಗಿರಬಹುದು. ಪಂಚಾಯತಿಗಳ ಅನಿವಾರ್ಯಕರ್ತವ್ಯಗಳಲ್ಲಿ ಅಡಕವಾಗಿರುವ ಎಷ್ಟೋ ಕೆಲಸಗಳನ್ನು ಅವು ಮಾಡಿಸಬಹುದಾಗಿದ್ದಿತು.

ಕೆಲವು ಹಳ್ಳಿಗಳಲ್ಲಿ ಕೆಲಸವನ್ನು ಮಾಡಿಸುತ್ತೇವೆಂದು ಪ್ರಯತ್ನಮಾಡಿ ಸಮರ್ಪಕವಾದ ಸಲಹೆಗಾರರಿಲ್ಲದಿದ್ದುದರಿಂದಲೋ ನಿಸ್ಪೃಹರಾದ ಅಧ್ಯಕ್ಷರು ದೊರೆಯದಿದ್ದುದರಿಂದಲೋ ಹಣವು ವ್ಯರ್ಥವಾಗಿ ಉಳಿದಿರುವುದೇ ವಿನಾ ಗ್ರಾಮಗಳು ಉತ್ತಮವಾಗಿರುವುದರಿಂದಲ್ಲ. ಈ ಅಂಶಗಳನ್ನೆಲ್ಲ ಮನದಲ್ಲಿಟ್ಟುಕೊಂಡೇ ಸರಕಾರದವರು 11,257 ಪಂಚಾಯಿತಿಗಳ ಮಧ್ಯದಲ್ಲಿ 3000 ಪಂಚಾಯತಿಗಳನ್ನು ಮಾತ್ರ ಉತ್ತಮವಾಗಿ ಕೆಲಸಮಾಡುತ್ತಿವೆಯೆಂದು ಹೇಳುವರು.[7]

ಗ್ರಾಮಪಂಚಾಯತಿಗಳು ಸಮರ್ಪಕವಾಗಿ ಕೆಲಸಮಾಡದಿರಲು ಕಾರಣಗಳಾವುವು? ಮತ್ತು ಪರಿಹಾರಗಳಾವುವು?

(1) ಕಳೆದ ಒಂದು ಶತಮಾನದಿಂದಲೂ ಪ್ರತಿಯೊಬ್ಬ ರೈತನ ದೃಷ್ಟಿಯೂ ಕೇಂದ್ರಸರ್ಕಾರದ ಮೇಲೆಯೇ ಬೀಳುತ್ತಿರುವುದರಿಂದ ತನ್ನ ಗ್ರಾಮದ ಮೇಲಣ ವ್ಯಾಮೋಹವು ಕಡಿಮೆಯಾಗುತ್ತಿದೆ. ಬಾಹ್ಯಪ್ರಪಂಚದೊಡನೆ ರೈತನ ಸಂಪರ್ಕವು ಬೆಳೆದಂತೆಲ್ಲ ತನ್ನ ಹಳ್ಳಿಯ ಜೀವನದಲ್ಲಿ ಆಸಕ್ತಿಯು ಹೋಗಿ, ದೃಷ್ಟಿಯೆಲ್ಲ ನಗರಗಳ ಮೇಲೆಯೇ ಬೀಳುತ್ತಿರುವುದರಿಂದ, ಪೂರ್ವದಲ್ಲಿದ್ದಂತೆ ತನ್ನ ಹಳ್ಳಿಯ ಮೇಲೆ ಪ್ರೀತಿಯಿರುವುದಿಲ್ಲ. ಈ ಕಾರಣದಿಂದಲೇ ಊರೊಟ್ಟಿನ ಕೆಲಸಗಳಲ್ಲಿ ಉಪೇಕ್ಷೆಯು ಹರಡುತ್ತಿದೆ. ಈ ಉಪೇಕ್ಷೆಯನ್ನು ತೊಲಗಿಸಿ ಪ್ರತಿಯೊಬ್ಬ ವ್ಯಕ್ತಿಯೂ ಸಮಾಜ ಹಿತಕ್ಕಾಗಿ ಕೆಲಸಮಾಡುವಂತೆ ಏರ್ಪಡಿಸಬೇಕು. ಕೌಟಿಲ್ಯನ ಕಾಲದಲ್ಲಿ ಊರೊಟ್ಟಿನ ಕೆಲಸಗಳಿಗೆ ಬಾರದೆ ನಿಂತವರು ಪ್ರತ್ಯೇಕವಾದ ತೆರಿಗೆಯನ್ನು ತೆರಬೇಕಾಗಿದ್ದುದಲ್ಲದೆ ಅಂತಹ ಕೆಲಸದ ಪ್ರತಿಫಲದಲ್ಲಿ ಭಾಗವನ್ನು ಪಡೆಯಲಾಗದೆಂಬ ನಿಯಮವಿದ್ದಿತಂತೆ.[8] ನಮ್ಮ ಹಳ್ಳಿಗಳಲ್ಲಿಯೂ ಹತ್ತು ಲಕ್ಷ ರೂಪಾಯಿ ಬೆಲೆಬಾಳುವ ಕೆಲಸವನ್ನು ಊರಿನವರೇ ಮಾಡಿಕೊಂಡಿರುವುದು ನಿಜ. ಆದರೂ ಸಮಾಜದ ಹಿತಕ್ಕಾಗಿ ಪ್ರತಿಯೊಬ್ಬ ವ್ಯಕ್ತಿಯೂ ಕೆಲಸಮಾಡಬೇಕೆಂಬ ಹುರುಪು ನಮ್ಮ ಹಳ್ಳಿಗಳಲ್ಲಿ ಹುಟ್ಟುವ

ವರೆಗೂ ನಮ್ಮ ಪಂಚಾಯತಿಗಳು ಸಮರ್ಪಕವಾಗಿ ಕೆಲಸಮಾಡಲಾರವು. ಇದನ್ನರಿತೇ ನಮ್ಮ ದಿವಾನ್ ಸಾಹೇಬರವರು ತಮ್ಮ ಅಧಿಕಾರವಾಣಿಯಿಂದ ಈ ಬಗೆಯಲ್ಲಿ ಹೇಳಿರುವುದು. "ನಮ್ಮ ಹಳ್ಳಿಗಳನ್ನು ನಿಜವಾಗಿಯೂ, ತ್ವರಿತವಾಗಿಯೂ ಉತ್ತಮಪಡಿಸಬೇಕಾದರೆ ಒಂದೇ ಮಾರ್ಗ—ಹಳ್ಳಿಯವರು ಊರೊಟ್ಟಿನ ಕೆಲಸಗಳಿಗಾಗಿ ವಾರಕ್ಕೊಂದುಸಲವಾದರೂ ದುಡಿಯುವುದೇ ಆ ಮಾರ್ಗ. ಹಣವನ್ನು ಕೊಡಲಾರದ ಬಡರೈತರು ತಮ್ಮ ಬಾಹುಬಲವನ್ನಾದರೂ ಊರಿನ ಅಭಿವೃದ್ಧಿಗಾಗಿ, ಊರಿನ ಹಿತಕ್ಕಾಗಿ, ಊರಿನ ಸಂತೋಷಕ್ಕಾಗಿ ಧಾರೆಯೆರೆಯುವಂತೆ ಪ್ರತಿಯೊಬ್ಬ ಸರಕಾರೀ ನೌಕರನೂ, ಪ್ರತಿಯೊಬ್ಬ ಖಾಸಗೀ ದೊಡ್ಡಮನುಷ್ಯನೂ ಸತತವೂ ಪ್ರೋತ್ಸಾಹಿಸಬೇಕು." (I feel sure that this communal labour is the only way of improving our villagers rapidly and satisfactorily and I feel that officials and non-officials alike should encourage the villagers who are unable to contribute in money, to contribute in kind, that is, in the shape of labour towards making their villages as clean, as happy and as healthy as possible[9]")

2. ಎರಡನೆಯ ಕಷ್ಟವು ಉತ್ತಮರಾದ ನಾಯಕರಿಲ್ಲದಿರುವುದು. ವಿದ್ಯಾವಂತರಾಗಿಯೂ, ನಿಸ್ಪೃಹರಾಗಿಯೂ ಇರುವವರು ಹಳ್ಳಿಗಳಲ್ಲಿ ವಿರಳ. ಸ್ವಾರ್ಥಪರರು ಎಂದೂ ಯಾವ ಸಂಸ್ಥೆಯನ್ನೂ ಉದ್ಧಾರವಾಗಗೊಡಿಸರು. ಹೆಚ್ಚು ಮಂದಿ ವಿದ್ಯಾವಂತರು ಹಳ್ಳಿಗಳಲ್ಲಿ ನೆಲಸಬೇಕು. ಸ್ವಾರ್ಥತ್ಯಾಗಿಗಳಾಗಿಯೂ, ಶಕ್ತಿಯುತರಾಗಿಯೂ ಇರುವ ನಾಯಕರನ್ನು ಒದಗಿಸಿಕೊಟ್ಟ ಮರುದಿನವೇ ನಮ್ಮ ಹಳ್ಳಿಗಳು ಉತ್ತಮಗೊಳ್ಳುವುದರಲ್ಲಿ ಸಂಶಯವಿಲ್ಲ.

3. ಅಂತಹ ನಾಯಕರು ದೊರೆಯುವವರೆಗೂ ಗ್ರಾಮಪುನರುದ್ಧಾರದ ಭಾರವು ಸರ್ಕಾರಿ ನೌಕರರಮೇಲೆಯೇ ಬೀಳುವುದು. ಇಂತಹ ನೌಕರರಲ್ಲಿ

ನಮ್ಮ ರೈತರಿಗೆ ವಿಶೇಷವಾಗಿ ಪರಿಚಯವಿರುವವರು ರೆವಿನ್ಯೂ ಇಲಾಖೆಯವರು. ರೈತರಿಗೆ ಅವರಲ್ಲಿರುವ ಗೌರವವು ಇತರರಲ್ಲಿ ಇಲ್ಲ. ಆದುದರಿಂದ ರೆವಿನ್ಯೂ ಇಲಾಖೆಯ ಆಫೀಸರುಗಳು ಹಳ್ಳಿಗಳ ಸಂಪರ್ಕವನ್ನು ಇನ್ನೂ ಹೆಚ್ಚುಮಾಡಿಕೊಳ್ಳಬೇಕು. "ಸರ್ಕಾರದವರ ಕರ್ತವ್ಯವು ಕಂದಾಯದ ವಸೂಲಿ ಮಾತ್ರವಲ್ಲ. ರೈತರ ಉದ್ಧಾರಕ್ಕಾಗಿಯೇ ಸರ್ಕಾರವಿರುವುದು" ಎಂಬ ಅಭಿಪ್ರಾಯವು ರೈತರ ಮನದಲ್ಲಿ ನಾಟಬೇಕು. ಪಾದ್ರಿಗಳಿಗೆ ತಮ್ಮ ಮತಪ್ರಚಾರದ ವಿಷಯದಲ್ಲಿ ಯಾವ ವಿಧವಾದ ಉತ್ಸಾಹವಿದೆಯೋ ಆ ವಿಧವಾದ ಉತ್ಸಾಹವನ್ನು ನಮ್ಮ ರೆವಿನ್ಯು ಮತ್ತು ಇತರ ಇಲಾಖೆಯ ನೌಕರರು ಪ್ರದರ್ಶಿಸಿದರೆ ರೈತರನ್ನು ಉದ್ಧಾರಮಾಡುವುದು ಕಷ್ಟವಲ್ಲ. ನಮ್ಮ ಗ್ರಾಮಪಂಚಾಯತಿಗಳನ್ನು ಎಚ್ಚರಿಸುವುದು ತಾಲ್ಲೂಕು ಅಮಲ್ದಾರರ ವಶದಲ್ಲಿದೆಯೆಂದು ಹೇಳಬಹುದು.

3. ಆಗಿಂದಾಗ್ಗೆ ಪಂಚಾಯತಿಗಳಿಗೆ ಪೈಪೋಟಿಯನ್ನು ಏರ್ಪಡಿಸಿ ಉತ್ತಮವಾಗಿ ಕೆಲಸಮಾಡುವ ಪಂಚಾಯತಿಗಳಿಗೆ ಸರ್ಕಾರದವರು ಪ್ರಶಸ್ತಿಯನ್ನು ಕೊಡುವುದರಿಂದ, ಅವುಗಳಿಗೆ ಉತ್ತೇಜನವನ್ನು ಕೊಟ್ಟಂತಾಗುವುದು.

4. ಪಂಚಾಯತಿಯ ಹಣವನ್ನು ವಸೂಲ್ಮಾಡುವುದರಲ್ಲಿಯೂ, ಅದಕ್ಕಿಂತಲೂ ಮುಖ್ಯವಾಗಿ ವೆಚ್ಚಮಾಡುವುದರಲ್ಲಿಯೂ ಅಜ್ಞರಾದ ಗ್ರಾಮಸ್ಥರಿಗೆ ಸರಿಯಾಗಿ ಸಹಾಯವು ದೊರೆಯಬೇಕು.

ಒಟ್ಟಿನಲ್ಲಿ ಗ್ರಾಮಪಂಚಾಯತಿಗಳ ಮೂಲಕ ನಮ್ಮ ಗ್ರಾಮಾಂತರಗಳಲ್ಲಿ ಹೊಸ ಶಿಸ್ತನ್ನೂ ಹೊಸ ಹುರುಪನ್ನೂ ಉಂಟುಮಾಡುವುದು ಅತ್ಯಾವಶ್ಯಕ.[10] ಲಿಂಲಿತ್ಗೊ ಕಮಿಷನ್ನಿನವರು ಪರಸ್ಪರ ಸಹಾಯಕ ಸಂಘಗಳ ವಿಷಯದಲ್ಲಿ ಹೇಳುವಂತೆ ನಾವು ಗ್ರಾಮಪಂಚಾಯತಿಗಳ ವಿಷಯದಲ್ಲಿಯೂ ಹೇಳಬಹುದು. "ರೈತರ ಉದ್ಧಾರವು ಗ್ರಾಮಪಂಚಾಯತಿಗಳ ಮೂಲಕ ಸಾಧ್ಯವಾಗದಿದ್ದರೆ ಇನ್ನಾವ ವಿಧದಲ್ಲಿಯೂ ಆಗುವುದೇ ಇಲ್ಲ."



# ೧೩. ಸಮಾಜ ಮತ್ತು ಜನಜೀವನ

[ನಮ್ಮ ಸಾಮಾಜಿಕ ಸಂಸ್ಥೆಗಳು ಜನಜೀವನದ ಮೇಲೆ ಯಾವಬಗೆಯ ಪರಿಣಾಮವನ್ನು ಉಂಟುಮಾಡಿವೆ ಎಂಬುದನ್ನು ಈ ಪ್ರಕರಣದಲ್ಲಿ ವಿಮರ್ಶಿಸೋಣ.]

ಮನುಷ್ಯನು ಸಂಘಜೀವಿ. ಸಂಘಜೀವನವು ಬೆಳವಳಿಕೆಯ ಮುಖ್ಯ ಸೋಪಾನ. ಮನುಷ್ಯನಂತೆಯೇ ಸಕಲ ಪ್ರಾಣಿವರ್ಗಗಳೂ ಸಂಘದಲ್ಲಿಯೇ ವಾಸಮಾಡುವುವು. ಪ್ರಾಣಿಗಳ ಬೆಳವಳಿಕೆಯ ಇತಿಹಾಸವನ್ನು ಶೋಧಿಸಿ ನೋಡಿದರೆ ಯಾವ ಯಾವ ಪ್ರಾಣಿಗಳು ಒಂಟೊಂಟಿಯಾಗಿ ವಾಸಮಾಡುತ್ತಿದ್ದುವೋ ಅಂತಹ ಪ್ರಾಣಿಗಳ ವರ್ಗವು ಇಂದು ನಾಶವಾಗಿರುವುದು ನಮಗೆ ಗೋಚರವಾಗುವುದು. ಆದುದರಿಂದ ಮನುಷ್ಯನಿಗಾಗಲಿ ಪ್ರಾಣಿಗಳಿಗಾಗಲಿ ಇತರ ಮನುಷ್ಯರ ಅಥವಾ ಪ್ರಾಣಿಗಳ ಸಂಘವು ಅತ್ಯಾವಶ್ಯಕ.

ಸಂಘದಲ್ಲಿ ಜೀವನಮಾಡಲುಪಕ್ರಮಿಸಿದ ಕೂಡಲೇ ಪರಸ್ಪರ ಸಂಬಂಧವು ಯಾವರೀತಿ ಇರಬೇಕು, ಯಾವ ಯಾವ ಸಾಮಾಜಿಕ ಸಂಸ್ಥೆಗಳೂ, ನಿಯಮಗಳೂ, ಪದ್ಧತಿಗಳೂ ಬೇಕು ಎನ್ನುವ ಪ್ರಶ್ನೆಗಳು ಸಾಮಾಜಿಕರ ಮುಂದೆ ಎದ್ದು ನಿಂತೇ ನಿಲ್ಲುವುವು. ಇಂತಹ ಸಂಸ್ಥೆಗಳೂ ಪದ್ಧತಿಗಳೂ ಕ್ರಮಕ್ರಮವಾಗಿ ಬೆಳೆಯುತ್ತ ಬರುವುವು. ಮೊದಮೊದಲು ಮನುಷ್ಯನ ಅವಲಂಬನವೂ, ಸನ್ನಿವೇಶವೂ, ಸಾಮಾಜಿಕ ಸಂಸ್ಥೆಗಳ ಮತ್ತು ಪದ್ಧತಿಗಳ ರೂಪವನ್ನು ನಿರ್ಣಯ ಮಾಡುವುವು. ಆದರೆ ಅಂತಹ ಸಂಸ್ಥೆಗಳು ಬೇರೂರಿದ ಕೂಡಲೆ ಅವು ಆರ್ಥಿಕಜೀವನದ ಮೇಲೆ ತಮ್ಮ ಪ್ರತಿಭೆಯನ್ನು ಬೀರಲಾರಂಭಿಸುವುವು. ಜನಜೀವನವೆಂಬ ವೃಕ್ಷದಲ್ಲಿ ಆರ್ಥಿಕ ಸಂಸ್ಥೆಗಳೂ ಮತ, ನೀತಿ, ರಾಜಕೀಯ—ಇವುಗಳಿಗೆ ಸಂಬಂಧಪಟ್ಟ ಸಾಮಾಜಿಕ ಸಂಸ್ಥೆಗಳೂ ಬೇರೆಬೇರೆ ಶಾಖೆಗಳಂತೆ ಇದ್ದು ಮನುಷ್ಯನ ದೇಹದಲ್ಲಿರುವ ಬೇರೆಬೇರೆ ಅಂಗಗಳು ಪರಸ್ಪರ ಒತ್ತಾಸೆಯನ್ನೀಯುವಂತೆ ಈ

ಸಂಸ್ಥೆಗಳೂ ಕೂಡ ಪರಸ್ಪರ ಸಂಬಂಧವನ್ನು ತಾಳಿ ಹಾಸುಹೊಕ್ಕಾಗಿ ಹೆಣೆದುಕೊಂಡಿರುವುವು.

ಪಾಶ್ಚಾತ್ಯದೇಶಗಳಲ್ಲಿಯೂ ನಮ್ಮಂತೆಯೇ ಆರ್ಥಿಕಜೀವನವು ಸಾಮಾಜಿಕಸಂಸ್ಥೆಗಳ ಮತ್ತು ಪದ್ಧತಿಗಳ ಕಟ್ಟುಪಾಡಿಗೆ ಸಿಕ್ಕಿರುವುವು. ಆದರೆ ವಿಜ್ಞಾನಶಾಸ್ತ್ರದ ಪ್ರತಿಭೆಯಿಂದ ಎಂದು ವಸ್ತುರಚನಾಕ್ರಿಯೆಯಲ್ಲಿ ಮಹಾಕ್ರಾಂತಿ (Industrial Revolution) ಯಾಯಿತೋ ಅಂದಿನಿಂದ, ಯುಗಯುಗಾಂತರದಿಂದ ಬಂದಿದ್ದ ಸಾಮಾಜಿಕ ಸಂಸ್ಥೆಗಳು ಬದಲಾವಣೆಯನ್ನು ಹೊಂದಿ, ಹೊಸ ಸಂಸ್ಥೆಗಳು ಉದ್ಭವವಾಗಲು ಉಪಕ್ರಮಿಸಿದುವು. ಈ ಸಂದಿಗ್ಧಸಮಯದಲ್ಲಿ ಆರ್ಥಿಕಜೀವನವು ಸಮಾಜದ ಕಟ್ಟುಪಾಡುಗಳಿಂದ ಬಿಡುಗಡೆಯನ್ನು ಹೊಂದಿ ಸ್ವತಂತ್ರವಾಗಿ ಹಾರಾಡುತ್ತಿದೆಯೋ ಎಂಬ ಸಂದೇಹಕ್ಕೆ ಎಡೆಗೊಟ್ಟಿತು.

ನಮ್ಮ ನಾಡಿನಲ್ಲಿ ಬಹುಕಾಲದಿಂದಲೂ ಬೆಳೆದು ಬಂದಿರುವ ಸಾಮಾಜಿಕಸಂಸ್ಥೆಗಳು ಜನಜೀವನದ ಮೇಲೆ ಹೆಚ್ಚು ಪರಿಣಾಮವನ್ನುಂಟುಮಾಡಿವೆ. ಗ್ರಾಮಗಳ ರಚನೆ, ರೈತರ ಕೃಷಿಯ ಮಾರ್ಗ, ರೈತರ ಊಟಉಪಚಾರಗಳು, ಉಪವೃತ್ತಿಗಳು, ವ್ಯಾಪಾರ ಮೊದಲಾದ ಆರ್ಥಿಕಜೀವನದ ಪ್ರತಿಯೊಂದು ಶಾಖೆಯಲ್ಲಿಯೂ ಸಂಪ್ರದಾಯಬದ್ಧವಾದ ನಿಯಮಗಳು ಇಂದೂ ಆಚರಣೆಯಲ್ಲಿವೆ. ಹಳ್ಳಿಯ ಅನೇಕ ಕಸಬುಗಳು, ಅಸ್ಪೃಶ್ಯತೆ, ಬಾಲ್ಯವಿವಾಹ, ಜಾತಿಪದ್ಧತಿ, ಅವಿಭಕ್ತಕುಟುಂಬ ಮೊದಲಾದ ಸಂಸ್ಥೆಗಳೂ, ಕರ್ಮ, ದೈವಲೀಲೆ, ವೈರಾಗ್ಯ ಮೊದಲಾದ ನಂಬುಗೆಗಳೂ ನಮ್ಮ ಆರ್ಥಿಕವ್ಯವಹಾರದಲ್ಲಿ ಪದೇಪದೇ ಬೆರೆಯುತ್ತಿವೆ. ಒಂದು ವಿಧದಲ್ಲಿ ನೋಡಿದರೆ ಇವುಗಳೆಲ್ಲ ನಮ್ಮ ಬೆಳವಳಿಕೆಗೆ ಅಡ್ಡಿಬರುವ ಸಂಕೋಲೆಗಳಂತಿವೆ. ನಮ್ಮ ಬಡತನಕ್ಕೆ ಆರ್ಥಿಕಕಾರಣಗಳಿಗಿಂತ ಈ ಸಾಮಾಜಿಕ ಸಂಸ್ಥೆಗಳೇ ಹೆಚ್ಚು ಆಧಾರಭೂತಗಳೆಂದು ವೆರಾ ಆನ್ಸ್ಟೆ ಅವರು ಬರೆಯುತ್ತಾರೆ.[1] ಗ್ರಾಮಜೀವನದ ಅಭಿವೃದ್ಧಿಯನ್ನು ಬಯಸುವವರೆಲ್ಲರೂ

ಈ ಸಂಸ್ಥೆಗಳ ಮತ್ತು ಸಂಪ್ರದಾಯಗಳ ಗುಣದೋಷಗಳನ್ನು ಕೂಲಂಕ ಷವಾಗಿ ವಿಮರ್ಶಿಸಬೇಕು. ಈ ಸಂಸ್ಥೆಗಳಿಂದ ಅನುಕೂಲವೆ, ಅನನು ಕೂಲವೆ ಎಂಬುದನ್ನು ಅರಿಯಬೇಕು; ಅರಿತು ಅನನುಕೂಲಗಳನ್ನು ಹೋಗಲಾಡಿಸಲು ಸರಿಯಾದ ಮಾರ್ಗವನ್ನು ಹುಡುಕಬೇಕು. ಈ ದೃಷ್ಟಿಯಿಂದ ನಮ್ಮ ಸಾಮಾಜಿಕ ಸಂಸ್ಥೆಗಳಲ್ಲಿ ಕೆಲವನ್ನು ಪರೀಕ್ಷಿಸಲು ಪ್ರಯತ್ನಿಸಿದೆ.

## ಜಾತಿಪದ್ಧತಿ.

ನಮ್ಮ ಸಾಮಾಜಿಕ ಸಂಸ್ಥೆಗಳಲ್ಲಿ ಬಹುಮುಖ್ಯವಾದುದು ಜಾತಿ ಪದ್ಧತಿ. ನಮ್ಮ ನಾಡಿನಲ್ಲಿರುವ 35 ಕೋಟಿ ಪ್ರಜೆಗಳಲ್ಲಿ 25 ಕೋಟಿ ಪ್ರಜೆಗಳ ದಿನಚರಿಯ ಕೆಲಸಗಳಲ್ಲಿ ಈ ಜಾತಿಪದ್ಧತಿಯು ವಿಶೇಷ ವಾಗಿ ಪ್ರವಹಿಸುವುದು. ಮಹಮ್ಮದೀಯರಲ್ಲಿ ಜಾತಿಪದ್ಧತಿಯಿಲ್ಲದಿದ್ದರೂ ಹಿಂದುಗಳ ಜೊತೆಯಲ್ಲಿಯೇ ಬೆಳೆದಿರುವ ಅನೇಕ ಮಹಮ್ಮದೀಯರು, ಅದರಲ್ಲೂ ಹಳ್ಳಿಯವರು, ವಿಶೇಷವಾಗಿ ಹಿಂದುಗಳ ಪದ್ಧತಿಯನ್ನೇ ಅನುಸರಿಸುತ್ತಿರುವರು. ಆದುದರಿಂದ ನಮ್ಮ ದೇಶದ ಜನಜೀವನ ದಲ್ಲಿಯೇ ಜಾತಿಪದ್ಧತಿಗೆ ಹೆಚ್ಚು ಪ್ರಧಾನತೆಯುಂಟೆಂದರೆ ಅತಿಶಯೋ ಕ್ತಿಯಾಗಲಾರದು. ಈ ಜಾತಿಪದ್ಧತಿಯಿಂದ ನಮ್ಮ ಸಮಾಜವು ಸುಮಾರು ಮೂರು ಸಾವಿರಕ್ಕಿಂತ ಮಿಗಿಲಾದ ಸಣ್ಣ ಸಣ್ಣ ಪಂಗಡಗಳಾಗಿ ವಿಭಾಗ ವಾಗಿದೆ. ಒಂದು ಪಂಗಡದವರು ಇನ್ನೊಂದು ಪಂಗಡದವರೊಡನೆ ಊಟಉಪಚಾರವನ್ನಾಗಲೀ, ಹೆಣ್ಣು ಕೊಟ್ಟು ತರುವುದನ್ನಾಗಲೀ ಮಾಡು ವುದಿಲ್ಲ. ಪ್ರತಿಯೊಂದು ಪಂಗಡದವರ ನಡೆನುಡಿಗಳ ವಿಷಯದಲ್ಲಿಯೂ ಪ್ರತಿಯೊಬ್ಬ ವ್ಯಕ್ತಿಯ ಕಸುಬಿನ ವಿಷಯದಲ್ಲಿಯೂ ಅತಿಸೂಕ್ಷ್ಮವಾದ ನಿಯಮಗಳು ಆಚರಣೆಯಲ್ಲಿವೆ. ಜಾತಿನಿಯಮಗಳು ಪ್ರಕೃತಿನಿಯಮ ಕ್ಕಿಂತಲೂ, ಸರ್ಕಾರದವರ ಕಾನೂನಿಗಿಂತಲೂ ಹೆಚ್ಚು ಬೆಲೆಯುಳ್ಳವು. ಅವುಗಳನ್ನು ಮೀರಿನಡೆದವರಿಗೆ ತೀವ್ರವಾದ ಶಿಕ್ಷೆಯುಂಟು. ಆಯಾ ಪಂಗಡ

ಗಳ ಮುಖ್ಯಸ್ಥರು ಇಂತಹ ತಪ್ಪುಗಳನ್ನು ವಿಚಾರಿಸಿ ಶಿಕ್ಷೆಯನ್ನು ನಿಯ ಮಿಸುವರು. ಮರಣದಂಡನೆಗಿಂತಲೂ ಬಹಿಷ್ಕಾರಕ್ಕೆ ಹಿಂದೂಜನರು ಹೆಚ್ಚಾಗಿ ಹೆದರುವರೆಂದು ವಿಶದವಾಗಿರುವಾಗ, ಜಾತಿನಿಯಮಗಳಿಗೆ ಎಂತಹ ಮಹತ್ವದ ಸ್ಥಾನವು ದೊರಕಿದೆಯೆಂಬುದು ವಿದಿತವಾಗುವುದು.

ಜಾತಿಪದ್ಧತಿಯ ಮೂಲವಾವುದು, ಎಂಬ ಪ್ರಶ್ನೆಯು ಪಾಶ್ಚಾತ್ಯ ಮತ್ತು ಪೌರಸ್ತ್ಯ ಸಾಮಾಜಿಕ ಶಾಸ್ತ್ರಜ್ಞರಿಗೆ ಅತ್ಯಾಶ್ಚರ್ಯವನ್ನೂ ಕಷ್ಟ ವನ್ನೂ ಕೊಟ್ಟಿದೆ. ನೂರಾರು ವರ್ಷಗಳಿಂದ ಈ ವಿಷಯದಲ್ಲಿ ಚರ್ಚೆ ನಡೆದಿದ್ದರೂ ಸರ್ವಸಮರ್ಪಕವಾದ ಉತ್ತರವು ದೊರೆತಿಲ್ಲ. ವೈದಿಕ ವಿದ್ವಾಂಸರನ್ನು ಕೇಳಿದರೆ "ಅದು ಅನಾದಿ, ದೈವಿಕ." ಎಂದು ಮಾತ್ರ ಹೇಳುತ್ತಾರೆ. ಇದರ ಅರ್ಥವೇನೆಂದರೆ "ಜಾತಿಯು ಎಂದು ಹುಟ್ಟಿತೆಂಬು ದನ್ನು ನಾವು ಹೇಳಲಾರೆವು." ಎಂಬುದು ಮಾತ್ರ. ಆರ್ಯರು ನಮ್ಮ ದೇಶಕ್ಕೆ ಬರುವಾಗ ಎಂದರೆ ಸುಮಾರು ಮೂರು ಸಾವಿರ ವರ್ಷಗಳ ಹಿಂದೆ ಅವರ ಸಮಾಜದಲ್ಲಿ ಈ ಪದ್ಧತಿಯೂ, ಈ ವಿಭಜನೆಯೂ ಇದ್ದಿರಲಾರದು. ಅವರು ಹಿಂದೂಸ್ಥಾನಕ್ಕೆ ಬಂದ ಮೇಲೆ ಇಲ್ಲಿಯ ಸನ್ನಿವೇಶ, ಅವರಿಗೂ ಇಲ್ಲಿಯ ಪೂರ್ವನಿವಾಸಿಗಳಿಗೂ ನಡೆಯುತ್ತಿದ್ದ ಕೊನೆಗಾಣದ ಯುದ್ಧ ಮೊದಲಾದ ಕಾರಣಗಳಿಂದ ಈ ವಿಧವಾದ ವಿಭಜನೆಯು ಪ್ರಾರಂಭ ವಾಯಿತು. ಮೊದಮೊದಲು ಏರ್ಪಟ್ಟ ಬ್ರಹ್ಮಕ್ಷತ್ರಿಯವೈಶ್ಯರೆಂಬ ಮೊದಲನೆಯ ಮೂರು ಜಾತಿಗಳಿಗೆ ಪರಸ್ಪರ ಸಾಮಾಜಿಕ ಸಂಬಂಧವು ಸುಲಲಿತವಾಗಿದ್ದಿತು. ನಾಲ್ಕನೆಯ ವರ್ಗದವರಾದ ಶೂದ್ರರು ಮಾತ್ರ ಆಗಲೇ ದೂರಮಾಡಲ್ಪಟ್ಟಿದ್ದರು ಎಂದು ಕೆಲವರು ಅಭಿಪ್ರಾಯಪಟ್ಟಿದ್ದಾರೆ. ಆದರೆ ಆರಂಭದಲ್ಲಿ ವಿಭಜನೆಯು ಕಠಿಣವಾಗಿರಲಿಲ್ಲ. ಅಲ್ಲದೆ ಅವರವರ ಅವಲಂಬನಾನುಸಾರವಾಗಿ ವಿಭಜನೆಯು ನಡೆದಿದ್ದರೂ ತಪಸ್ಸುಮಾಡು ತ್ತಿದ್ದ ಕ್ಷತ್ರಿಯರೂ ಯೋಧರಾದ ಬ್ರಾಹ್ಮಣರೂ ರಾಜ್ಯವಾಳುತ್ತಿದ್ದ ವೈಶ್ಯರೂ ಇಲ್ಲದಿರಲಿಲ್ಲ. ಉಪಜಾತಿಗಳು ಹೆಚ್ಚಾಗಿಲ್ಲದಿದ್ದುದರಿಂದ ಪರ

ಸ್ಪರ ಮೈತ್ರಿಯಿದ್ದಿತೇ ವಿನಾ ನಾನು ಹೆಚ್ಚು, ತಾನು ಹೆಚ್ಚು ಎಂಬ ದುರಭಿಮಾನವಿರಲಿಲ್ಲ. ಶರೀರದ ಎಲ್ಲಾ ಅವಯವಗಳೂ ಪರಸ್ಪರ ಮೈತ್ರಿ ಯಿಂದ ಕೆಲಸಮಾಡಿ ಶರೀರದ ಒಟ್ಟು ಬೆಳವಳಿಕೆಗೆ ಹೇಗೆ ಒತ್ತಾಸೆ ಮಾಡುವುವೋ ಹಾಗೆಯೇ ಸಮಾಜದ ಬೆಳವಳಿಕೆಗಾಗಿ ಪ್ರತಿಯೊಬ್ಬರೂ ತಮ್ಮ ತಮ್ಮ ಕಸುಬನ್ನು ಉತ್ತಮರೀತಿಯಲ್ಲಿ ಪರಿಪಾಲಿಸಿ ಸಮಾಜದ ಉನ್ನತಿಗೆ ಒತ್ತಾಸೆಮಾಡುತ್ತಿದ್ದರು. ಅಂದಿನ ಜನಗಳ ಧ್ಯೇಯದಲ್ಲಿ ಇಡೀ ಸಮಾಜದ ಹಿತಕ್ಕೆ ಪ್ರಾಧಾನ್ಯವಿತ್ತೇ ವಿನಾ ವ್ಯಕ್ತಿಯ ಹಿತಕ್ಕಿರಲಿಲ್ಲ.

ಕಾಲಕ್ರಮದಲ್ಲಿ ಈ ಜಾತಿಗಳು ಹೆಚ್ಚುತ್ತ ಬಂದುವು. ಆರ್ಥಿಕ ಜೀವನವು ಬೆಳೆದಂತೆಲ್ಲ ಆಯಾಯ ಕಸುಬಿನವರೇ ಬೇರೆ ಬೇರೆ ಉಪ ಪಂಗಡಗಳನ್ನು ಮಾಡಿಕೊಂಡರು. ಹೊಸ ಹೊಸ ನಿಯಮಗಳನ್ನು ಬೆಳೆ ಯಿಸಿದರು. ತತ್ಪರಿಣಾಮವಾಗಿ ಜಾತಿವಿಭಜನೆಯು ಈಗಿರುವ ಉಗ್ರರೂಪ ವನ್ನು ತಾಳಿತು.

ಇದಲ್ಲದೆ ಇಲ್ಲಿನ ಪೂರ್ವನಿವಾಸಿಗಳಲ್ಲನೇಕರು ಆರ್ಯರ ಕಟ್ಟು ಪಾಡಿಗೆ ಸಿಕ್ಕಿಬೀಳದಿದ್ದುದರಿಂದ ಅವರನ್ನೆಲ್ಲ ಜಾತಿಬಾಹಿರರೆಂದೂ, ಆದುದ ರಿಂದ ಸಮಾಜದಲ್ಲಿ ಬೆರೆಯಲು ಅರ್ಹರಲ್ಲವೆಂದೂ ನಿರ್ಣಯವಾಗಹತ್ತಿ, ಇಂದಿ ನ ಅಸ್ಪೃಶ್ಯತಾಪ್ರಶ್ನೆಯು ಇಷ್ಟು ಕಠಿಣರೂಪವನ್ನು ತಾಳಲನುವಾಯಿತು.

ಆರ್ಯರು ನಮ್ಮ ದೇಶಕ್ಕೆ ಮೊದಲು ಬಂದಾಗ ಅವರಿಗೆ ಎರಡು ವಿಧವಾದ ಕಷ್ಟವಿದ್ದಿತು. ತಮ್ಮ ಗುಂಪಿನ ಶುಚಿತ್ವವನ್ನೂ ನಾಗರೀಕತೆ ಯನ್ನೂ ಇಲ್ಲಿಯ ಅನಾಗರಿಕರು ಹಾಳುಮಾಡದಂತೆ ಕಾಪಾಡುವುದೊಂದು; ಮತ್ತು ಆರ್ಥಿಕ ಜೀವನವು ಸುಲಲಿತವಾಗಿ ಒಂದು ನಿರ್ಣಯವನ್ನ ನುಸರಿಸಿ ನಡೆಯುವಂತೆ ಏರ್ಪಾಡು ಮಾಡುವುದೊಂದು. ಈ ಕಷ್ಟಗಳ ನಿವಾರಣೆಗಾಗಿಯೇ ಜಾತಿಪದ್ಧತಿಯನ್ನು ಜಾರಿಗೆ ತಂದರೆನ್ನಬಹುದು.

ಸುಧಾರಕರ ಹೊಡೆತಕ್ಕೆ ಸಿಕ್ಕಿರುವ ಸಾಮಾಜಿಕ ಸಂಸ್ಥೆಗಳಲ್ಲಿ ಜಾತಿಪದ್ಧತಿಗಿಂತಲೂ ಮುಖ್ಯವಾದುದು ಯಾವುದೂ ಇಲ್ಲ. ನಮ್ಮ ಬಡ

ತನಕ್ಕೆ ಜಾತಿಪದ್ಧತಿಯೇ ಕಾರಣವೆಂದು ಅರ್ಥಶಾಸ್ತ್ರಜ್ಞರು ಹೇಳುವರು; ನಮ್ಮ ಗುಲಾಮಗಿರಿಗೆ ಜಾತಿಪದ್ಧತಿಯೇ ಕಾರಣವೆಂದು ರಾಜ್ಯಶಾಸ್ತ್ರನಿಪುಣರು ಹೇಳುವರು; ನಮ್ಮ ನಿರುತ್ಸಾಹಕ್ಕೆ ಜಾತಿನಿಯಮಗಳೇ ಕಾರಣವೆಂದು ಸಮಾಜಶಾಸ್ತ್ರಜ್ಞರು ಹೇಳುವರು. ಜಾತಿಪದ್ಧತಿಯನ್ನು ತೊಡೆದು ಹಾಕಬೇಕೆಂದು ಸತತ ಪ್ರಯತ್ನವೂ ನಡೆಯುತ್ತಿದೆ. ಪುರಾತನ ಕಾಲದಿಂದಲೂ ಈ ಜಾತಿವಿಭಜನೆಯನ್ನು ಅಳಿಸುವ ಉದ್ದೇಶದಿಂದಲೇ ಅನೇಕ ಹೊಸಮತಗಳು ಆವಿರ್ಭವಿಸಿದುವು. ಇಂದಿನ ಆರ್ಯಸಮಾಜ, ರಾಮಕೃಷ್ಣಾಶ್ರಮ, ಹಿಂದಿನ ಬೌದ್ಧಮತ, ಸಿಕ್ಕರಮತ, ಮುಂತಾದ ಚಳುವಳಿಗಳು ಹಿಂದೂಧರ್ಮದ ಅಡಿಗಲ್ಲಿನಂತಿರುವ ಈ ಸಂಸ್ಥೆಯನ್ನು ವಿರೋಧಿಸಿದುವು. ಇಂದಿನ ಹಿಂದೂಸಮಾಜದ ಶತ್ರುಗಳು ಈ ಜಾತಿಪದ್ಧತಿಯಲ್ಲಿರುವ ದೋಷಗಳಿಂದ ತಾವು ಹೆಚ್ಚು ಪ್ರಯೋಜನವನ್ನು ಪಡೆಯಲು ಆತುರರಾಗಿರುವರು. ಈ ಪದ್ಧತಿಯಿಂದ ಬಹುವಾಗಿ ಕಷ್ಟಕ್ಕೊಳಗಾಗಿರುವ ಅಸ್ಪೃಶ್ಯರೂ, ಹಿಂದುಳಿದ ಪಂಗಡದವರೂ, ಆತ್ಮಗೌರವವನ್ನು ಕಾಪಾಡಿಕೊಳ್ಳುವ ಉದ್ದೇಶದಿಂದ ಈ ಪದ್ಧತಿಯನ್ನು ನಿರ್ಮೂಲವಮಾಡಲು ಟೊಂಕ ಕಟ್ಟಿ ನಿಂತಿರುವರು. ಪಾಶ್ಚಾತ್ಯಸಂಪರ್ಕದಿಂದಲೂ, ಸಂಚಾರಮಾರ್ಗಗಳ ಪರಿಣಾಮದಿಂದಲೂ, ಆಧುನಿಕ ವಿಜ್ಞಾನಗಳ ಪ್ರಚಾರದಿಂದಲೂ, ಎಲ್ಲಕ್ಕಿಂತಲೂ ಮಿಗಿಲಾಗಿ ಆರ್ಥಿಕಜೀವನದ ಹೊಡೆತದಿಂದಲೂ ಜಾತಿಪದ್ಧತಿಗಳ ಕಾಠಿಣ್ಯವು ಸಡಿಲವಾಗುತ್ತಿದೆ. ಆದರೂ ಇಂತಹ ಚಳುವಳಿಗಳನ್ನು ಸಾವಿರಾರು ವರ್ಷಗಳಿಂದಲೂ ಸಹಿಸಿಕೊಂಡು ಬಂದಿರುವ ಈ ಹಿಂದೂಪದ್ಧತಿಯು ಇನ್ನೂ ಬಹುಕಾಲದವರೆಗೂ ಸಜೀವವಾಗಿಯೇ ಇದ್ದು, ನಮ್ಮ ಜನಜೀವನದಲ್ಲಿ ಹಾಸುಹೊಕ್ಕಿನಂತೆ ಪ್ರವಹಿಸಿ, ಜೀವನವನ್ನು ಯಾವುದೋ ಒಂದು ನಿರ್ದಿಷ್ಟಮಾರ್ಗದಲ್ಲಿ ಸೆಳೆದೊಯ್ಯುವುದು ಎಂಬುದನ್ನು ನಾವು ದೃಢವಾಗಿ ನಂಬಬಹುದು. ಆದುದರಿಂದ ಗ್ರಾಮಜೀವನವನ್ನು ಉತ್ತಮಗೊಳಿಸಬೇಕೆಂಬ ಆಸೆಯುಳ್ಳವರು ಈ ಸಂಸ್ಥೆಯ

ಗುಣಾವಗುಣಗಳನ್ನು ವಿಮರ್ಶಿಸಬೇಕು. ಹಿಂದೆ ಸಮಾಜದ ಕಠಿಣ ಸಮಸ್ಯೆಗಳನ್ನು ಸುಲಭವಾಗಿ ಪರಿಹರಿಸಿಕೊಳ್ಳುತ್ತಿದ್ದ ಈ ಸಂಸ್ಥೆಯು ಇಂದು ದಿನದಿನವೂ ಬದಲಾವಣೆಯನ್ನೂ ಹೆಚ್ಚು ತೊಡಕನ್ನೂ ಹೊಂದುತ್ತಿರುವ ಸಮಸ್ಯೆಗಳ ಪರಿಹಾರದಲ್ಲಿ ಎಷ್ಟರಮಟ್ಟಿಗೆ ನೆರವಾಗಬಹುದೆಂಬುದನ್ನು ನಿರ್ಣಯಿಸಬೇಕು. ಆ ಮೇಲೆ ಆವಶ್ಯಕವಾದ ಬದಲಾವಣೆಗಳನ್ನು ಮಾಡಲು ಪ್ರಯತ್ನ ಮಾಡಬೇಕು.

ಹಿಂದೆ ಜಾತಿಪದ್ಧತಿಯಿಂದ ಪಡೆಯುತ್ತಿದ್ದ ಉಪಯೋಗವನ್ನು ಮೊದಲು ವಿಮರ್ಶಿಸೋಣ. ಜಾತಿಪದ್ಧತಿಯಿರುವುದರಿಂದ ನಮ್ಮ ದೇಶದಲ್ಲಿ ಹುಟ್ಟಿದ ಪ್ರತಿಯೊಬ್ಬ ವ್ಯಕ್ತಿಗೂ ಒಂದು ನಿರ್ದಿಷ್ಟವಾದ ಕಸಬು ದೊರೆತಂತಾಗುವುದು; ಪ್ರತಿಯೊಂದು ಕಸಬೂ ವಂಶಪಾರಂಪರ್ಯವಾಗಿ ನಡೆಯುವುದರಿಂದ ಆರ್ಜಿತವಾದ ಚತುರತೆಯು ಪ್ರತಿಯೊಬ್ಬ ಕಸುಬುದಾರನಿಗೂ ಇರುವುದು. ಕಸುಬನ್ನು ಕಲಿಸುವುದು ಸುಲಭ; ತಾಯಿತಂದೆಗಳಿಂದ ಮಕ್ಕಳು ವಿದ್ಯೆಯನ್ನು ಕಲಿಯುವುದಕ್ಕಿಂತ ಸುಲಭವಾಗಿ ಇನ್ನಾರಿಂದಲೂ ಕಲಿಯಲಾಗುವುದಿಲ್ಲ. ತಂದೆಯು ಕಸುಬಿನ ಗುಟ್ಟನ್ನು ಮಗನಿಗೆ ಕಲಿಸಿಕೊಡುವಂತೆ ಇತರರು ಕಲಿಸಿಕೊಡಲಾರರು. ಕೆಲವು ಶತಮಾನಗಳ ಹಿಂದೆ ಯೂರೋಪಿನಲ್ಲಿ ಪ್ರಚಾರದಲ್ಲಿದ್ದ 'ಟ್ರೇಡ್ ಗಿಲ್ಡ್ಸ್' (Trade guilds) ಎಂಬ ಸಂಸ್ಥೆಗಳಂತೆ ಜಾತಿಪದ್ಧತಿಯಿರುವುದರಿಂದ ಪ್ರತಿಯೊಂದು ಪಂಗಡದಲ್ಲೂ ಕಷ್ಟಕ್ಕೊಳಗಾದವರಿಗೆ ಪರಸ್ಪರ ಸಹಾಯವು ದೊರೆಯುವುದು. ಪ್ರತಿಯೊಂದು ಜಾತಿಯೂ ಒಂದು ಪರಸ್ಪರ ಸಹಾಯಕ ಸಂಘದಂತಿರುವುದು. ಯುವಕರಿಗೆ ಶಿಕ್ಷಣಕೊಡುವುದು, ಜಗಳಗಳನ್ನು ಪಂಚಾಯಿತಿಗಳ ಮೂಲಕ ತೀರ್ಮಾನಮಾಡುವುದು, ವೇತನಲಾಭನಷ್ಟಗಳನ್ನು ನಿರ್ಣಯಿಸುವುದು ಮುಂತಾದ ಕೆಲಸಗಳನ್ನೆಲ್ಲ ಜಾತಿಸಂಸ್ಥೆಗಳು ಮಾಡುತ್ತಿದ್ದುವು. ಭೋಜನದ ಮತ್ತು ಮದುವೆಯ ವಿಷಯದಲ್ಲಿ ಇದ್ದ ನಿಯಮಗಳ ಫಲವಾಗಿ ಉತ್ತಮಕುಲಗಳ ಶ್ರೇಷ್ಠತೆಯು ಕೆಡದಂತಿದ್ದಿತು.

ಸಮಾಜಜೀವನಕ್ಕೆ—ಸಮಾಜಸೌಂದರ್ಯಕ್ಕೆ ಅತ್ಯಾವಶ್ಯಕವಾದ ಪ್ರತಿಯೊಂದು ಕಸುಬಿನ ಅಭಿವೃದ್ಧಿಗೂ ಅತ್ಯುತ್ತಮವಾದ ನಿರ್ಣಯಗಳು ಇದ್ದುದರಿಂದ ಆರ್ಥಿಕಜೀವನವು ಒಂದು ನಿರ್ದಿಷ್ಟಮಾರ್ಗವನ್ನು ಅನುಸರಿಸುತ್ತಿದ್ದಿತು. ಇಂದಿನಂತೆ ಆರ್ಥಿಕಪ್ರಗತಿಯಲ್ಲಿ ಅನಾಯಕತ್ವವಿಲ್ಲದೆ, ವಿಷಮವಾದ ಬೆಳವಳಿಕೆಯಿಲ್ಲದೆ ಸಮಾಜವು ಸರ್ವಮುಖದಲ್ಲಿಯೂ ಸಮಾನವಾದ ಬೆಳವಳಿಕೆಯನ್ನು ಹೊಂದಲು ಅವಕಾಶವಿದ್ದಿತು. ಕಳೆದ ಹಲವು ವರ್ಷಗಳಿಂದ ನಮ್ಮ ವ್ಯವಹಾರದಲ್ಲಿ ಹೆಚ್ಚು ಬಳಕೆಗೆ ಬರುತ್ತಿರುವ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಆರ್ಥಿಕನಿರ್ಣಯದ ಚಳುವಳಿಯನ್ನು ನಾವು ಈ ಸಂದರ್ಭದಲ್ಲಿ ಸ್ವಲ್ಪ ನೆನಪಿಗೆ ತಂದುಕೊಳ್ಳಬಹುದು. ಇಟಲಿ ದೇಶದಲ್ಲಿ ಆಯಾ ಕಸಬುಗಳಲ್ಲಿ ಉದ್ಯುಕ್ತರಾಗಿರುವವರೆಲ್ಲಾ ಒಂದೊಂದು ಪಂಗಡದಲ್ಲಿರುವ ಪದ್ಧತಿಯನ್ನು ಆಚರಣೆಗೆ ತಂದಿದಾರೆ. ಇದನ್ನೇ "ಕಾರ್ಪೊರೇಟ್ ಸ್ಟೇಟ್" ಎಂಬ ಹೆಸರಿನಿಂದ ಮುಸೊಲಿನಿಯವರು ಆದರ್ಶವಾಗಿಟ್ಟುಕೊಂಡಿರುವರು. ಇದರೊಡನೆ ಹಿಂದೂಸಮಾಜವನ್ನು ಹೋಲಿಸಿ ನೋಡಿದರೆ ನಮ್ಮ ಸಮಾಜವು ಒಂದು "ಕಾರ್ಪೋರೇಟ್ ಸ್ಟೇಟ್" ಆಗಿತ್ತೆಂದು ಹೇಳಬಹುದು. ಪಾಶ್ಚಾತ್ಯ ದೇಶಗಳಲ್ಲಿ ಆರ್ಥಿಕ ಸಂಬಂಧವಾದ ಆಂದೋಲನವನ್ನುಂಟುಮಾಡುತ್ತಿರುವ ಸಂಘವಾದಿಗಳ ಹೊಡೆತಕ್ಕೆ ಭಾರತಭೂಮಿಯು ಸಿಕ್ಕದಿರುವುದಕ್ಕೆ ನಮ್ಮಲ್ಲಿರುವ ಈ ವಿಧವಾದ ವ್ಯವಸ್ಥೆಯೇ ಕಾರಣವೆಂದು ಕೆಲವರು ಅಭಿಪ್ರಾಯಪಡುತ್ತಾರೆ.

ಜಾತಿಪದ್ಧತಿಯು ನಮ್ಮ ಸಮಾಜದಲ್ಲಿ ಮಹೋಪಕಾರವನ್ನು ಮಾಡುತ್ತಿದ್ದ ಸಂಸ್ಥೆ. ಅದನ್ನು ನಾವು ಮರೆಯಬಾರದು. ಆದರೆ ಜಾತಿಗಳು ಹೆಚ್ಚಾದಷ್ಟೂ, ಉಪಜಾತಿಗಳು ಹಬ್ಬಿದಷ್ಟೂ, ಒಂದು ಶಾಖೆಗೂ ಇನ್ನೊಂದು ಶಾಖೆಗೂ ಸಂಬಂಧವು ತಪ್ಪಿದಷ್ಟೂ ನಮ್ಮ ಸಮಾಜದಲ್ಲಿ ಐಕಮತ್ಯವು ಮಾಯವಾಗಲು ಅವಕಾಶವು ಹೆಚ್ಚಿತು. ಇಡೀ ಸಮಾಜದ

ಹಿತಕ್ಕಾಗಿ ಸೃಷ್ಟಿಸಲ್ಪಟ್ಟ ಸಂಸ್ಥೆಯು ಇಂದು ಸಮಾಜದ ಅವನತಿಗೆ ಕಾರಣವಾಗಬೇಕಾಗಿದೆ. ಇತಿಹಾಸ ಶೋಧಕರು ನಮ್ಮ ನಾಡಿನ ಅನೇಕ ರಾಜ್ಯಗಳು, ಆದರಲ್ಲೂ ಮರಾಠರ ಸಾರ್ವಭೌಮತ್ವವು ನಶಿಸಿದುದಕ್ಕೆ ಜಾತಿಪದ್ಧತಿ, ಜಾತಿವೈಷಮ್ಯ—ಇವೇ ಕಾರಣವೆಂದು ಹೇಳುತ್ತಾರೆ. ಗ್ರಾಮಜೀವನದ ವಾಸನೆಯು ಸ್ವಲ್ಪವಾದರೂ ಇರುವ ಯಾವ ವಿವೇಕಿಗಾದರೂ, ನಮ್ಮ ಗ್ರಾಮಾಂತರಗಳಲ್ಲಿ ಈಗ ಜಾತಿವೈಷಮ್ಯವು ಎಷ್ಟರ ಮಟ್ಟಿಗೆ ಹರಡುತ್ತಿದೆ ಎಂಬುದು ತಿಳಿಯದಿರದು. ಹೀಗೆ ನಮ್ಮಲ್ಲಿ ಒಗ್ಗಟ್ಟಿಲ್ಲದುದರಿಂದಲೇ ನಾವು ಗುಲಾಮರಾಗಿರುವುದು. "ಗುಲಾಮಗಿರಿಯೇ ಜಾತಿಪದ್ಧತಿಯ ಕಟ್ಟಳೆಗಳಿಂದ ಬಿಗಿಯಲ್ಪಟ್ಟ ಸಮಾಜದ ಹೆಗ್ಗುರುತು." ಎಂದು ಇಬ್ಬರು ಅರ್ಥಶಾಸ್ತ್ರಜ್ಞರು ಹೇಳಿರುವರು.[2]

ಯಾವ ಸಮಾಜದಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ವಂಶಪಾರಂಪರ್ಯವಾಗಿ ಬಂದ ಉದ್ಯೋಗವನ್ನೇ ಅವಲಂಬಿಸಬೇಕೋ ಅಂತಹ ಸಮಾಜದಲ್ಲಿ ವ್ಯಕ್ತಿಯ ಬೆಳವಳಿಕೆಗೆ ಅವಕಾಶವಿರುವುದಿಲ್ಲ. ಅವಲಂಬನಕ್ಕೂ ವ್ಯಕ್ತಿಯ ಶಕ್ತಿಗೂ ಸಂಬಂಧವಿರುವುದಿಲ್ಲ; ಇಷ್ಟವಿರಲಿ, ಇಲ್ಲದಿರಲಿ; ಶಕ್ತಿಯಿರಲಿ, ಇಲ್ಲದಿರಲಿ; ಆ ವ್ಯಕ್ತಿಯು ತನ್ನ ಆರ್ಜಿತವಾದ ಕಸುಬನ್ನು ಬಿಡಲವಕಾಶವಿಲ್ಲ. ಆದುದರಿಂದ ನಮ್ಮ ಆರ್ಥಿಕ ಜೀವನದಲ್ಲಿ ಎಷ್ಟು ದುಷ್ಪರಿಣಾಮವುಂಟಾಗಬಹುದೆಂಬುದನ್ನು ಯೋಚಿಸಿರಿ. ಕಾರಣಾಂತರಗಳಿಂದ ಕೆಲವು ಕಸುಬುಗಳು ಇಂದು ಅನಾವಶ್ಯಕವಾಗಿರಬಹುದು; ಆರ್ಥಿಕ ಜೀವನದ ಬೆಳವಳಿಕೆಯು ಫಲವಾಗಿ ಹೊಸ ಕಸುಬುಗಳು ಉದ್ಭವಿಸಿರಬಹುದು. ಆದರೆ ಜಾತಿಕಟ್ಟಳೆಗೊಳಗಾದವರು ತಮ್ಮ ಕಸುಬಿನಿಂದ ಲಾಭವಿರಲಿ, ಇಲ್ಲದಿರಲಿ; ಬೇರೊಂದು ಕಸುಬನ್ನು ಅವಲಂಬಿಸಲಾರರು. ತಮ್ಮ ಕಸುಬಿನಲ್ಲಿ ಎಂದು ಲಾಭವು ದೊರಕುವುದಿಲ್ಲವೋ ಅಂದು ಅವರಿಗೆ ನಿರುತ್ಸಾಹವು ಹುಟ್ಟುವುದು ಸಹಜ. ನಿರುತ್ಸಾಹವೇ ಬಡತನದ ಮೂಲ. ಆದುದರಿಂದ ತನ್ನ ಜಾತಿಗೆ ಸಂಬಂಧಪಡದ ಬೇರೊಂದು ಕಸುಬಿನಲ್ಲಿ

ಹೆಚ್ಚು ಆಸಕ್ತಿಯನ್ನು ತೋರಿಸಬಲ್ಲ ಒಬ್ಬ ವ್ಯಕ್ತಿಯು, ಆ ಕಸುಬನ್ನು ಸ್ವೀಕರಿಸಲು ಸ್ವಾತಂತ್ರ್ಯವಿದ್ದರೆ ಅವನಿಗೂ ಲಾಭ; ಅವನಿರುವ ಸಮಾಜಕ್ಕೂ ಲಾಭ. ಜಾತಿಯ ನಿಯಮಗಳು ಕಠಿಣವಾಗಿದ್ದರೆ, ತನ್ನ ಕಸುಬಿನಲ್ಲಿ ಹೊಸ ಮಾರ್ಗಗಳನ್ನು ಅನುಸರಿಸುವ ಸ್ವಾತಂತ್ರ್ಯವೂ ಕಸುಬುದಾರನಿಗಿರುವುದಿಲ್ಲ.

ಈಗಿರುವ ಜಾತಿಪದ್ಧತಿಯು ಮೇಲುಜಾತಿ, ಕೀಳುಜಾತಿ ಎಂಬುದಾಗಿ ಸಮಾಜವನ್ನು ಬೇರೆ ಬೇರೆ ಪಂಗಡಗಳಲ್ಲಿಟ್ಟಿರುವುದಲ್ಲವೆ, ಒಂದು ಪಂಗಡದಿಂದ ಇನ್ನೊಂದು ಪಂಗಡಕ್ಕೆ ಸೇರುವುದನ್ನೂ ಅಸಾಧ್ಯವನ್ನಾಗಿ ಮಾಡಿದೆ. ಇದರಿಂದಾಗುವ ಕೆಡುಕು ಅಪರಿಮಿತವಾದುದೆಂದು ಹೇಳಬಹುದು. ಕೀಳುಜಾತಿಯಲ್ಲಿ ಹುಟ್ಟಿದ ಮನುಷ್ಯನು ತಾನು ಪೂರ್ವಜನ್ಮದಲ್ಲಿ ಮಾಡಿದ ಪಾಪದ ಫಲವನ್ನು ಈ ಜನ್ಮದಲ್ಲಿ ಅನುಭವಿಸುತ್ತಾನೆಂಬುದು ನಮ್ಮ ನಂಬಿಕೆ. ಇವರ ಪರಿಣಾಮವಾಗಿ ಈ ಜನ್ಮದಲ್ಲಿ ಅವನಿಗೆ ಉತ್ತಮವರ್ಗಕ್ಕೆ ಸೇರಲವಕಾಶವಿಲ್ಲ; ಅವನು ಮುಂದಣ ಜನ್ಮದವರೆಗೆ ಕಾಯಬೇಕು. ಆದುದರಿಂದ ಕೀಳುಜಾತಿಯಲ್ಲಿ ಉತ್ತಮ ಗುಣವಿರುವವನು ಮೇಲುಜಾತಿಗೆ ಹೋಗುವುದಕ್ಕೂ ಮೇಲುಜಾತಿಯಲ್ಲಿರುವವನು ಅಲ್ಲಿರುವ ಯೋಗ್ಯತೆಯನ್ನು ಪಡೆಯದಿದ್ದರೆ, ಕೆಳಗಿನ ದರ್ಜೆಗೆ ಇಳಿಯುವುದಕ್ಕೂ ನಮ್ಮ ಸಮಾಜದಲ್ಲಿ ಅವಕಾಶವಿಲ್ಲ. ಈ ಅವಕಾಶವು ಸಮಾಜದ ಬೆಳವಳಿಕೆಗೆ ಅತ್ಯಾವಶ್ಯಕ.[3]

ಈ ದೋಷಗಳೆಲ್ಲವನ್ನೂ ಮೀರಿಸಿರುವ ಇನ್ನೊಂದು ದೋಷವು ನಮ್ಮ ಜಾತಿಪದ್ಧತಿಗೂ ಮತ್ತು ಇಂದಿನ ಅಸ್ಪೃಶ್ಯತಾಸಮಸ್ಯೆಗೂ ಇರುವ ಸಂಬಂಧ. ಇದು ನಮ್ಮ ಹಿಂದೂಸಮಾಜದಲ್ಲಿ ಬಹುಕಾಲದಿಂದ ಕಷ್ಟಪರಂಪರೆಗಳನ್ನು ಅನುಭವಿಸಿಕೊಂಡು ಬರುತ್ತಿರುವ ನಮ್ಮ ಏಳುಕೋಟಿ ಸಹೋದರರನ್ನು ನೆಲಕ್ಕೆ ಅದುಮಿ ಅವರ ಬೆಳವಳಿಕೆಗೆ ಅವಕಾಶವಿಲ್ಲದಂತೆ ಮಾಡಿದೆ. ಹಿಂದೆ ನಮ್ಮ ಸಮಾಜದ ಉನ್ನತಿಯನ್ನು ಕಾಪಾಡುವುದಕ್ಕಾಗಿ ನಾಗರಿಕ

ರಾದ ಆರ್ಯರಿಗೂ ಅನಾಗರಿಕರಾದ ಇಲ್ಲಿಯ ಪೂರ್ವ ನಿವಾಸಿಗಳಿಗೂ ಪರಸ್ಪರ ಸಂಬಂಧವಿಲ್ಲದಂತೆ ಮಾಡುವುದು ಆವಶ್ಯಕವಾಗಿತ್ತು. ಆಧುನಿಕ ಪ್ರಪಂಚದಲ್ಲಿಯೂ ಇಂತಹ ಉದಾಹರಣೆಗಳು ಹಲವಿವೆ. ಅಮೆರಿಕಾದಲ್ಲಿ ನೀಗ್ರೋಜನಗಳಿಗೂ ಅಮೇರಿಕನ್ನರಿಗೂ ಈಗಲೂ ಇರುವ ಸಂಬಂಧವನ್ನು ಜ್ಞಾಪಿಸಿಕೊಳ್ಳಬಹುದು. ಆದರೆ ಯಾವ ಸಮಾಜವು ಒಂದು ದೊಡ್ಡ ಗುಂಪಿನ ಜನಗಳ ಅಭಿವೃದ್ಧಿಗೆ ಕುಂದಕವನ್ನು ತರುವುದೋ ಆ ಸಮಾಜವು ಬಹುಕಾಲ ಬದುಕಲಾರದು; ಅಭಿವೃದ್ಧಿಯನ್ನೂ ಹೊಂದಲಾರದು.

ಕೊನೆಯದಾಗಿ ಇನ್ನೊಂದು ದೋಷವನ್ನು ವಿಮರ್ಶಿಸೋಣ. ನಮ್ಮ ಜಾತಿನಿಯಮಗಳಿಗೆ ಅನುಸಾರವಾಗಿ ಯಾವಯಾವ ಅವಲಂಬನದಲ್ಲಿ ದೇಹಶ್ರಮವು ಹೆಚ್ಚೋ, ಯಾವ ಅವಲಂಬನದಲ್ಲಿ ಅಸಹ್ಯತೆಯು ಹೆಚ್ಚೋ ಅಂತಹ ಕಸಬುಗಾರರನ್ನು ಬಹಳ ಕೀಳಾಗಿ ನೋಡುತ್ತಿದೇವೆ. ಅದರ ಪರಿಣಾಮವಾಗಿ ನಮ್ಮ ಜನಾಂಗದಲ್ಲಿಯೇ ಕಷ್ಟಪಟ್ಟು ಕೆಲಸ ಮಾಡುವುದೆಂದರೆ ಎಲ್ಲರಿಗೂ ಅವಮಾನವೆಂಬ ಭಾವನೆಯು ಹಬ್ಬುತ್ತಿದೆ. ದುಡಿದು ಕೆಲಸಮಾಡುವ ವ್ಯಕ್ತಿಯೇ ಸಮಾಜದ ತಳಹದಿಯೆಂಬುದನ್ನು ನಾವು ಮರೆತಿದ್ದೇವೆ. ಆದುದರಿಂದ ಪ್ರತಿಯೊಬ್ಬರೂ ಕೆಲಸಮಾಡದೆಯೇ ಜೀವನಮಾಡಬೇಕೆಂಬ ಆಸಕ್ತಿಯನ್ನು ಪ್ರದರ್ಶಿಸುತ್ತಿದ್ದೇವೆ. ನಮ್ಮ ಹಳ್ಳಿಗಳಲ್ಲಿಯೂ ಕೂಡ ಯಾರು ಸ್ವಲ್ಪಮಟ್ಟಿಗೆ ಪಟ್ಟಣಗಳ ಸಂಪರ್ಕವನ್ನು ಹೊಂದಿರುವರೋ, ಯಾರು ಸ್ವಲ್ಪ ಶುಚಿಯಾದ ಬಟ್ಟೆಯನ್ನು ಧರಿಸಲು ಆರಂಭಿಸಿರುವರೋ ಅಂಥವರು ನೇಗಿಲನ್ನು ಹಿಡಿಯುವುದಾಗಲಿ, ದನವನ್ನು ಮೇಯಿಸುವುದಾಗಲಿ, ತಮಗೆ ಜೀವನದಾನಮಾಡುವ ಗೊಬ್ಬರವನ್ನು ಹೊರುವುದಾಗಲಿ ಅವಮಾನಕರವೆಂಬ ಭಾವನೆಯನ್ನು ಹೊಂದುತ್ತಿದ್ದಾರೆ. ಈ ಭಾವನೆಯು ನಮ್ಮ ಸಮಾಜದಲ್ಲಿ ಅತಿಭಯಂಕರವಾದ ಶತ್ರುವೆಂಬುದನ್ನು ನಾವು ಮರೆಯಬಾರದು.

ಹೀಗೆ ಜಾತಿಪದ್ಧತಿಗಳ ಗುಣದೋಷಗಳನ್ನು ವಿಮರ್ಶಿಸಿದಮೇಲೆ ಮುಂದೇನುಮಾಡಬೇಕೆಂಬ ಪ್ರಶ್ನೆಯು ಮನಸ್ಸಿಗೆ ಬಾರದಿರದು. ಈಗಾಗಲೇ ಪಾಶ್ಚಾತ್ಯ ಸಂಸ್ಕೃತಿಯ ಹೊಡೆತ, ಆರ್ಥಿಕಜೀವನದ ತೊಡಕು, ವ್ಯಕ್ತಿಸ್ವಾತಂತ್ರ್ಯ, ಪ್ರಜಾಪ್ರತಿನಿಧಿಪ್ರಭುತ್ವ ಮುಂತಾದ ಸಂಸ್ಥೆಗಳ ಹೊಡೆತದಿಂದಲೂ ಜಾತಿಪದ್ಧತಿಯ ಕಟ್ಟಳೆಗಳು ಸಡಿಲವಾಗುತ್ತಿವೆ. ಜಾತಿಪದ್ಧತಿಯನ್ನು ಸಂಪೂರ್ಣವಾಗಿ ನಾಶಪಡಿಸುವುದರಿಂದ ನಮಗೆ ಲವಲೇಶವೂ ಪ್ರಯೋಜನವಿಲ್ಲ. ನಮ್ಮ ಧ್ಯೇಯವು ಮೇಲೆ ನಿರೂಪಿಸಿರುವ ದೋಷಗಳನ್ನೆಲ್ಲಾ ತೊಡೆದುಹಾಕಿ ಸಾಧ್ಯವಾದಷ್ಟುಮಟ್ಟಿಗೆ ಜಾತಿಜಾತಿಗಳಿಗಿರುವ ಅಂತರಗಳನ್ನು ಅಳಿಸಿ ಸಮಾನತೆಯನ್ನು ಕಲ್ಪಿಸುವುದೂ, ಪ್ರತಿಯೊಂದು ಅವಲಂಬನವೂ ಗೌರವಾರ್ಹವಾದ ಅವಲಂಬನ, ಸೋಮಾರಿತನವೇ ನಾಚಿಕೆಗೀಡಾಗಿರುವ ಅವಲಂಬನ, ಎಂಬ ಅಭಿಪ್ರಾಯವನ್ನು ಜನಗಳ ಮನಸ್ಸಿಗೆ ಅಂಟುವಂತೆ ಮಾಡುವುದೂ ನಮ್ಮ ಜೀವನದಲ್ಲಿರುವ ಒಂದು ಕೆಟ್ಟ ಕಟ್ಟಳೆಯನ್ನು ತೊಡೆದು ಉತ್ತಮಪಡಿಸಿಕೊಳ್ಳುವುದೂ ಆಗಿವೆ. ಇದೇ ಸಾಧುವಾದ ಮಾರ್ಗವೆಂದು ನಮ್ಮ ಸಮಾಜದ ಹಿತಚಿಂತಕರು ಅಭಿಪ್ರಾಯಪಡುವರು. ವ್ಯಕ್ತಿಸ್ವಾತಂತ್ರ್ಯವು ಆವಶ್ಯಕ; ಆದರೆ ಸಮಾಜದ ಹಿತಕ್ಕೆ ವ್ಯಕ್ತಿಸ್ವಾತಂತ್ರ್ಯವು ಬಾಗಬೇಕು. ಸಮಾಜದ ಹಿತಕ್ಕೆ ಅಡ್ಡಿಯಾಗದಂತೆ, ಆರ್ಥಿಕ ಅನಾಯಕತ್ವವು ನೆಲೆಗೊಳ್ಳದಂತೆ ವ್ಯಕ್ತಿಸ್ವಾತಂತ್ರ್ಯವನ್ನು ಹೆಚ್ಚುಮಾಡುವುದೇ ನಮ್ಮ ಧ್ಯೇಯವು.

## ಅವಿಭಕ್ತ ಕುಟುಂಬ

ಜಾತಿಪದ್ಧತಿಯಂತೆಯೇ ಪ್ರಭಾವಶಾಲಿಯಾದ, ಪ್ರಾಯಃ ಜಾತಿಪದ್ಧತಿಗಿಂತಲೂ ಹಳೆಯದಾದ ಇನ್ನೊಂದು ಸಂಸ್ಥೆಯು ಸಾವಿರಾರು ವರ್ಷಗಳಿಂದಲೂ ಹಿಂದೂ ಜನಾಂಗವನ್ನು ಹೊಂದಿಕೊಂಡಿದೆ. ಇದೇ ಅವಿಭಕ್ತ ಕುಟುಂಬ. ಇದು ಒಂದು ಚಿಕ್ಕ ಸಮಾಜವಿದ್ದಂತೆ ಇದೆ. ತಂದೆ, ಮಕ್ಕಳು, ಮೊಮ್ಮಕ್ಕಳು, ನೆಂಟರು, ಎಲ್ಲರೂ ಒಂದೇ ಮನೆಯಲ್ಲಿ

ದ್ದುಕೊಂಡು ಸಂಪಾದನೆಯನ್ನೂ ಖರ್ಚನ್ನೂ ಹಂಚಿಕೊಂಡು ಕಷ್ಟ ಸುಖಗಳಲ್ಲಿ ಭಾಗಿಗಳಾಗಿ ಜೀವನ ಮಾಡುವುದೇ ಹಿಂದುಗಳ ಪದ್ಧತಿ. ಹಿಂದೂ ಧರ್ಮಶಾಸ್ತ್ರಗಳ ಪ್ರಕಾರ ಅವಿಭಕ್ತ ಕುಟುಂಬದವರೆಲ್ಲರಿಗೂ ಕಟುಂಬಕ್ಕೆ ಸೇರಿದ ಆಸ್ತಿಯಲ್ಲಿ ಹಕ್ಕುಂಟು. ಪೂರ್ವಕಾಲದ ರೋಮ್ ಮತ್ತು ಗ್ರೀಕ್ ದೇಶದ ಕುಟುಂಬದಲ್ಲಿದ್ದಂತೆ ತಂದೆಯೇ ಎಲ್ಲರಿಗೂ ಯಜಮಾನ. ಅವನ ನೇತೃತ್ವದಲ್ಲಿ ಸಕಲರೂ ತಮ್ಮ ಐಹಿಕ, ಆಮುಷ್ಮಿಕ ಕರ್ಮಗಳನ್ನು ನಡೆಯಿಸಿಕೊಳ್ಳಬೇಕು.

ಪಾಶ್ಚಾತ್ಯ ದೇಶಗಳ ಕುಟುಂಬಗಳ ಸ್ಥಿತಿಗತಿಯನ್ನು ಅರಿತವರು ನಮ್ಮ ಹಿಂದೂ ಕುಟುಂಬಗಳ ಸ್ವರೂಪವನ್ನು ಕಂಡರೆ ಆಶ್ಚರ್ಯಪಡ ದಿರರು. ಏಕೆಂದರೆ ಒಂದು ಇಂಗ್ಲಿಷ್ ಕುಟುಂಬದಲ್ಲಿ ಮಕ್ಕಳು ಪ್ರಾಪ್ತ ವಯಸ್ಕರಾದ ಕೂಡಲೆ, ಬೇರೆ ಸಂಸಾರವನ್ನು ಹೂಡಿಕೊಳ್ಳುವುದೇ ಪದ್ಧತಿ. ಆದುದರಿಂದ ಒಂದು ಕುಟುಂಬದಲ್ಲಿ ತಂದೆ, ತಾಯಿ ಮೈನರ್, ಮತ್ತು ಅವಿವಾಹಿತರಾದ ಮಕ್ಕಳು ಮಾತ್ರ ಇರುವುದು ವಾಡಿಕೆ. ಇತ್ತೀಚೆಗೆ ಹೆಂಗಸರಿಗೆ ಸ್ವಾತಂತ್ರ್ಯಾಭಿಲಾಷೆಯು ಹೆಚ್ಚುತ್ತ ಬಂದಂತೆಲ್ಲ ಮತ್ತು ಹೆಂಗಸರು ಬೇರೆಬೇರೆ ಅವಲಂಬನಗಳಲ್ಲಿ ತೊಡಗಿ ತಮ್ಮಪಾಡಿಗೆ ತಾವು ಆರ್ಥಿಕ ಸ್ವಾತಂತ್ರ್ಯವನ್ನು ಅನುಭವಿಸುವ ಅರ್ಹತೆಯನ್ನು ಪಡೆದಂ ತೆಲ್ಲ ಕುಟುಂಬದ ಸ್ವರೂಪವು ಇನ್ನೂ ಬದಲಾವಣೆಯನ್ನು ಹೊಂದುತ್ತಿದೆ. ನಮ್ಮ ದೇಶದಲ್ಲಿ ಮಾತ್ರ ಇನ್ನೂ ಬಹುಮಟ್ಟಿಗೆ ಅವಿಭಕ್ತ ಕುಟುಂಬವೇ ಜೀವಿಸಿರುವುದನ್ನು ನೋಡಿದರೆ ಆಶ್ಚರ್ಯವಾಗದಿರದು.

ಇದರಿಂದ ನಮ್ಮ ಆರ್ಥಿಕ ಜೀವನದಲ್ಲಿ ಆಗಿರುವ ಪರಿಣಾಮ ವನ್ನು ಸ್ವಲ್ಪ ವಿಮರ್ಶಿಸುವ. ಪಾಶ್ಚಾತ್ಯಸಮಾಜದಲ್ಲಿ ಆರ್ಥಿಕಸ್ವಾಭಿ ಮಾನದ ಫಲ (Economic selfishness) ವಾಗಿ ಬಹು ವಿಧವಾದ ತೊಂದರೆಯಾಗುತ್ತಿರುವುದು ಸರ್ವವಿದಿತವಾಗಿದೆ. ಆರ್ಥಿಕ ಉದ್ಯಮಗಳ ಧ್ಯೇಯಗಳೆಲ್ಲವೂ ಸಮಾಜದ ಹಿತಕ್ಕಾಗಿ ಇರಬೇಕೆಂಬ ವಾದದ ಕೂಗು

ಎಲ್ಲೆಲ್ಲೂ ಕೇಳಬರುತ್ತಿದೆ. ಆ ಧ್ಯೇಯದೊಡನೆ ನಮ್ಮ ಸಣ್ಣ ಸಮಾಜ ವೆನಿಸಿದ ಅವಿಭಕ್ತ ಕುಟುಂಬದ ಲಕ್ಷಣವನ್ನು ಸ್ವಲ್ಪ ಹೋಲಿಸಿನೋಡಿರಿ. ಒಂದು ಕುಟುಂಬದಲ್ಲಿ ಕೈಲಾಗುವವರೂ ಇರುವವರು; ಆಗದವರೂ ಇರುವವರು; ಕುರುಡರೂ ಇರುವರು; ಕುಂಟರೂ ಇರುವರು; ಹಣ್ಣು ಹಣ್ಣು ಮುದುಕರೂ ಇರುವರು; ಸಣ್ಣ ಸಣ್ಣ ಬಾಲಕರೂ ಇರುವರು; ಸೋಮಾರಿಗಳೂ ಇರುವರು; ದುಡಿಯುವವರೂ ಇರುವರು. ಪ್ರತಿ ಯೊಬ್ಬನೂ ಇತರರಿಗಾಗಿ ಎಷ್ಟು ಸ್ವಾರ್ಥತ್ಯಾಗಮಾಡಬೇಕಾಗುವುದೆಂಬು ದನ್ನು ನೋಡಿರಿ. ಪಾಶ್ಚಾತ್ಯದೇಶಗಳಲ್ಲಿ ಸರ್ಕಾರದವರು ಮಾಡಬೇಕಾದ ಎಷ್ಟೋ ಕೆಲಸಗಳನ್ನು ನಮ್ಮ ದೇಶದಲ್ಲಿ ಈ ಅವಿಭಕ್ತ ಕುಟುಂಬವೇ ಮಾಡುತ್ತಿದೆ. ಆದುದರಿಂದಲೇ, ದೀನರಕ್ಷಣಾಲಯ (Poor Houses) ವೃದ್ಧಾಪ್ಯದ ಪೆನ್ಷನುಗಳು, ನಿರುದ್ಯೋಗದ ನಿವಾರಣಾಫಂಡು (Unemployment relief) ಮುಂತಾದ ಸರ್ಕಾರಿ ಶಾಖೆಗಳ ಅಗ ತ್ಯವೇ ಇಲ್ಲಿಲ್ಲ. ಈ ಕೆಲಸಗಳನ್ನೆಲ್ಲ ಅವಿಭಕ್ತ ಕುಟುಂಬವೇ ನೋಡಿಕೊಳ್ಳು ತ್ತಿದೆ. ಆದುದರಿಂದಲೇ ನಮ್ಮ ನಾಡಿನಲ್ಲಿ ಸಾವಿರಾರು ಮಂದಿ ನಿರು ದ್ಯೋಗಿಗಳಿದ್ದರೂ ಪಾಶ್ಚಾತ್ಯದೇಶಗಳಲ್ಲಿ ನಡೆಯುವಂತೆ ನಿರುದ್ಯೋಗ ನಿವಾರಣೆಗಾಗಿ ಚಳುವಳಿಯು ನಡೆಯುತ್ತಾ ಇಲ್ಲ. ಅವಿಭಕ್ತಕುಟುಂಬವು "One for all and all for one" ಎಂಬ ಉಚ್ಚ ಧ್ಯೇಯವನ್ನು ಸಫಲಗೊಳಿಸುತ್ತಿದೆ.

ದಿನಚರಿಯ ಆರ್ಥಿಕವ್ಯವಹಾರದಲ್ಲಿಯೂ ಕೂಡ ಇದರಿಂದ ಮಹ ತ್ವದ ಪರಿಣಾಮವುಂಟು. ಉದಾಹರಣೆಗೆ: ನಮ್ಮ ರೈತರ ಕಷ್ಟಗಳಲ್ಲಿ ಒಂ ದಾದ ತಾಕುಗಳ ಚದುರುವಿಕೆಗೆ (Fragmentation of Holdings) ಅವಿಭಕ್ತಕುಟುಂಬವು ಅಡ್ಡಿಬರುವುದು. ಕುಟುಂಬದ ಜಮೀನನ್ನೆಲ್ಲ ಎಲ್ಲರೂ ಸೇರಿ ವ್ಯವಸಾಯಮಾಡಬಹುದು. ಇದರಿಂದ ಆಡಮ್‌ಸ್ಮಿತ್ ಎಂಬ ಅರ್ಥಶಾಸ್ತ್ರಜ್ಞನು ವಾದಿಸುತ್ತಿದ್ದ ಅವಲಂಬನ ವಿಭಜನೆಯು

(Division of labour) ಉತ್ತಮರೀತಿಯಲ್ಲಿ ಆಚರಣೆಗೆ ಬರುವುದು. ಊಟ ಉಪಚಾರಗಳಲ್ಲಿಯೂ ಕೂಡ ಎಲ್ಲರೂ ಒಟ್ಟಿಗೆ ಸೇರಿ ಜೀವಿಸುವುವುದರಿಂದ ಖರ್ಚು ಬಹಳ ಕಡಿಮೆಯಾಗುವುದು. ಪರಸ್ಪರ ಸಹಾಯಕ ಸಂಘಗಳು ಇಡೀ ಸಮಾಜಕ್ಕೇ ಯಾವ ಸಹಾಯವನ್ನು ಮಾಡಲು ಯತ್ನಿಸುತ್ತಿರುವುವೋ ಅದೇ ಸಹಾಯುವನ್ನು ಕುಟುಂಬಕ್ಕೆ ಈ ಪದ್ಧತಿಯು ದೊರಕಿಸುತ್ತಿದೆಯೆಂದು ಹೇಳಬಹುದು. ಯುವಕಯುವತಿಯರು ಹಿರಿಯರೊಂದಿಗೆ ವಾಸಿಸುವುದರಿಂದ ಒಂದು ಬಗೆಯ ವ್ಯವಸ್ಥಿತವಾದ ಜೀವನವನ್ನು ನಡೆಯಿಸಲು ಅಭ್ಯಾಸವಾಗುವುದು. ತಾಯಿತಂದೆಗಳಲ್ಲಿ ಭಕ್ತಿಯು ಬೇರೂರಲು ಅವಕಾಶವಿರುವುದು. ಹೀಗೆ ಈ ಪದ್ಧತಿಯಿಂದ ನಮ್ಮ ಸಮಾಜದಲ್ಲಿ ಮತ್ತು ಆರ್ಥಿಕ ಜೀವನದಲ್ಲಿ ಹೆಚ್ಚುಪ್ರಯೋಜನವು ದೊರೆಯುತ್ತಿದೆಯೆಂಬುದಾಗಿ ಹೇಳಬಹುದು.

ಮನುಷ್ಯಕೃತವಾದ ಯಾವುದೊಂದು ಸಂಸ್ಥೆಯೂ ದೋಷರಹಿತವಾದುದಲ್ಲ. ಸಮಷ್ಟಿಕುಟುಂಬವೂ ಈ ನಿಯಮಕ್ಕೆ ಬದ್ಧವಾಗಿಯೇ ಇದೆಯೆಂದು ಧಾರಾಳವಾಗಿ ಹೇಳಬಹುದು. ಅನೇಕ ಕುಟುಂಬಗಳಲ್ಲಿ ಯಜಮಾನನು ಹಗಲೂ ಇರಳೂ ದುಡಿದು ತಂದುಹಾಕಿ ಅನೇಕ ಸೋಮಾರಿಗಳ ಬೊಜ್ಜು ಬೆಳೆಯಿಸುತ್ತಿರುವುದು ಸಕಲರ ಗಮನಕ್ಕೂ ಬಂದ ವಿಷಯ. ಹತ್ತು ಜನಗಳ ಮಧ್ಯಕದ ಕೆಲಸವೆಂದರೆ ಸಾಧ್ಯವಾದಮಟ್ಟಿಗೆ ಕಷ್ಟವನ್ನು ತಪ್ಪಿಸಿಕೊಳ್ಳಲು ಎಲ್ಲರೂ ಪ್ರಯತ್ನ ಪಡುವುದು ಸಹಜವಾಗಿಯೇ ಇದೆ. ಆದುದರಿಂದಲೇ ನಮ್ಮ ಸಮಾಜದಲ್ಲಿ ಸೋಮಾರಿಗಳೇ ಹೆಚ್ಚು. ಕುಟುಂಬಕ್ಕೆ ಸೇರಿದವರೆಲ್ಲರೂ ತಮ್ಮ ಕೈಲಾದಷ್ಟು ಸಹಾಯ ಮಾಡಿ ತಮಗೆ ಆವಶ್ಯಕವಾದ ಖರ್ಚನ್ನು ಒದಗಿಸಿಕೊಳ್ಳುತ್ತಿದ್ದರೆ, ಆಧುನಿಕ ಸಂಘವಾದಿಗಳ ಮೂಲತತ್ತ್ವವನ್ನು (From each according to his might and to each according to his needs) ಆಚರಣೆಗೆ ತಂದಂತೆ ಆಗುತ್ತಿತ್ತು.

ದುಡಿಯುವವರು ಸೋಮಾರಿಗಳನ್ನು ಮನ್ನಿಸುವುದು ಕಷ್ಟ. ಆದುದರಿಂದಲೇ ನಮ್ಮ ಕುಟುಂಬಗಳಲ್ಲಿ ಯಾವಾಗಲೂ ಜಗಳ, ಮನಸ್ತಾಪ–ಇವು ತುಂಬಿರುವುವು. ಪೂರ್ವಕಾಲದಲ್ಲಿದ್ದ ಉಚ್ಚಧ್ಯೇಯಗಳು ಮಲಿನವಾಗಿ, ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ಸ್ವಾರ್ಥಪರತೆಯು ಹೆಚ್ಚಿದಷ್ಟೂ ಅವಿಭಕ್ತಕುಟುಂಬದಿಂದ ತೊಂದರೆಯೂ ಹೆಚ್ಚುವುದು.

ಕುಟುಂಬವ್ಯಾಮೋಹದಿಂದ ತಂದೆಯೇ ಎಲ್ಲಾ ಕೆಲಸಗಳನ್ನು ಮಾಡುವುದರಿಂದಲೂ ಇತರರಿಗೆ ಸ್ವಾತಂತ್ರ್ಯವು ಕಡಮೆಯಾಗಿರುವುದರಿಂದಲೂ, ಅನೇಕಯುವಕರು, ಸ್ವಾತಂತ್ರ್ಯಾಭಿಲಾಷೆಯನ್ನೇ ತೊರೆದು ಆತ್ಮಬಲದಲ್ಲಿ ನಂಬುಗೆಯೇ ಇಲ್ಲದವರಾಗಿ ಸಂಕುಚಿತವಾದ ಅಭಿವೃದ್ಧಿಗೆ ಈಡಾಗಿರುವರು. ಇದು ಶೋಚನೀಯವಾದ ಸಂಗತಿ. ವ್ಯಕ್ತಿತ್ವದ ಬೆಳವಳಿಕೆಗೆ ಕಷ್ಟಸಹಿಷ್ಣುತೆಯು ಆವಶ್ಯಕ. ಸಮಾಜದ ಬೆಳವಳಿಕೆಗೂ ಕಷ್ಟದ ಅನುಭವವು ಬೇಕೇಬೇಕು. ಯಾರುಯಾರು ಜೀವನಸಂಗ್ರಾಮದಲ್ಲಿ ಸ್ವಾತಂತ್ರ್ಯವನ್ನು ವಹಿಸಿ ಧೈರ್ಯವನ್ನು ಪ್ರದರ್ಶಿಸಿರುವರೋ ಅಂಥವರು ತಾವು ಎದುರಿಸಬೇಕಾದ ಕಷ್ಟಪರಂಪರೆಗಳನ್ನು ನಿರ್ಲಕ್ಷ್ಯವಾಗಿ ಸಹಿಸುವರು. ಯಾರು ಯಾವಾಗಲೂ ಇತರರ ಮರೆಯಲ್ಲೇ ಜೀವನಮಾಡುವರೋ ಅಂಥವರು ತಮಗೆ ಇತರರ ಮರೆಯು ತಪ್ಪಿದ ಕೂಡಲೇ ಸಂಸಾರ ಸಾಗರದಲ್ಲಿ ಮುಳುಗುವರು. ರೋಮನರ ಮರೆಯಲ್ಲಿ ಸುಖಜೀವನಾಸಕ್ತರಾಗಿ ವೀರವಿದ್ಯೆಯನ್ನು ಮರೆತ ಬ್ರಿಟನ್ನರು ಹೇಗೆ ಶತ್ರುಗಳ ವಶವಾದರೆಂಬುದನ್ನು ನೆನಪಿನಲ್ಲಿಡಿರಿ. ಜೀವನಸಂಗ್ರಾಮದಲ್ಲಿ ಭಾಗವಹಿಸುವುದು ಪ್ರತಿಯೊಬ್ಬ ಜೀವಿಯ ಮುಖ್ಯಧರ್ಮ. ಅವಿಭಕ್ತಕುಟುಂಬದಲ್ಲಿ ಇದು ಅನೇಕರಿಗೆ ಅಸಾಧ್ಯವಾದುದೇ ಸರಿ.

ಇತ್ತೀಚೆಗೆ ಜಾತಿಪದ್ಧತಿಯು ಮಲಿನವಾಗುತ್ತಿರುವಂತೆಯೇ ಸಮಷ್ಟಿ ಕುಟುಂಬದ ಪದ್ಧತಿಯೂ ಸಡಿಲವಾಗುತ್ತಿದೆ. ವ್ಯಕ್ತಿಸ್ವಾತಂತ್ರ್ಯದ ಆಸೆಗಾಗಿ ಅನೇಕ ಯುವಕರು ಪ್ರತ್ಯೇಕ ವಾಸಕ್ಕೆ ಹೆಚ್ಚು ಆಸಕ್ತಿಯನ್ನು

ತೋರಿಸುತ್ತಿದಾರೆ. ಹೆಂಗಸರಲ್ಲಿ ವಿದ್ಯಾಭ್ಯಾಸವು ಹರಡಿದಷ್ಟೂ ಅವರೂ ಸ್ವಾತಂತ್ರ್ಯಾಭಿಲಾಷಿಗಳಾಗಿ ಅತ್ತೆಮಾವಂದಿರ ಸಂಕಲೆಗಳಿಂದ ಬಿಡುಗಡೆಯನ್ನು ಹೊಂದಲು ಪ್ರಯತ್ನಿಸುತ್ತಿದಾರೆ. ಸಂಪ್ರದಾಯಕ್ಕೆ ತವರುಮನೆಯಾದ ನಮ್ಮ ಹಳ್ಳಿಗಳಲ್ಲಿಯೂ ಕೂಡ ಅವಿಭಕ್ತಕುಟುಂಬವು ಅಪೂರ್ವವಾಗುತ್ತಿದೆ. ಇದು ಒಳ್ಳೆಯದೆ, ಕೆಟ್ಟದೆ ಎಂಬುದನ್ನು ನಿರ್ಧರವಾಗಿ ಹೇಳಲಾಗುವುದಿಲ್ಲ.

## ಆಸ್ತಿ, ದಾಯಭಾಗ, ಜವಿಾನು ಹಂಚುವಿಕೆ.

ಹಿಂದೂಧರ್ಮಶಾಸ್ತ್ರದ ಪ್ರಕಾರವಾಗಿ ಪ್ರತಿಯೊಬ್ಬ ಹಿಂದುವಿಗೂ ಕುಟುಂಬದ ಆಸ್ತಿಯಲ್ಲಿ ಪಾಲುಂಟು. ಹೆಣ್ಣುಮಕ್ಕಳಲ್ಲಿ ಮದುವೆಯಾಗದವರಿಗೂ, ವಿಧವೆಯರಿಗೂ, ಜೀವನಾಂಶದ ಹಕ್ಕುಂಟು. ಬಂಗಾಳದಲ್ಲಿ ಆಚರಣೆಯಲ್ಲಿರುವ ದಾಯಭಾಗ ಎಂಬ ಪದ್ಧತಿಯಂತೆ ತಂದೆಯು ಸತ್ತ ಮೇಲೆ ಮಕ್ಕಳಿಗೆ ಆಸ್ತಿಯ ಹಕ್ಕುಂಟಾಗುವುದು. ಇತರ ಪ್ರಾಂತಗಳಲ್ಲಿ ಮೈತಾಕ್ಷರಪದ್ಧತಿಯು ಜಾರಿಯಲ್ಲಿರುವುದು. ಇದರಪ್ರಕಾರ ಗಂಡುಮಕ್ಕಳು ಹುಟ್ಟಿದಕೂಡಲೆ ಪಿತ್ರಾರ್ಜಿತವಾದ ಆಸ್ತಿಯಲ್ಲಿ ಹಕ್ಕನ್ನು ಪಡೆಯುವರು. ಮಹಮ್ಮದೀಯರ ಧರ್ಮಶಾಸ್ತ್ರದ ಪ್ರಕಾರವಾಗಿ ಪಿತ್ರಾರ್ಜಿತವಾದ ಆಸ್ತಿಯಲ್ಲಿ ಗಂಡುಮಕ್ಕಳಿಗೂ ಹೆಣ್ಣುಮಕ್ಕಳಿಗೂ ಹಕ್ಕು ಬರುವುದು.

ಇದರ ಫಲವಾಗಿ ನಮ್ಮ ದೇಶದಲ್ಲಿ ಪ್ರತಿಯೊಬ್ಬ ವ್ಯಕ್ತಿಗೂ ಸ್ವಲ್ಪವಾದರೂ ಆಸ್ತಿಯು ದೊರೆಯುವುದು. ಇದರಿಂದ ಅವರು ಮುಂದೆ ಅಭಿವೃದ್ಧಿಗೆ ಬರಲು ಸ್ವಲ್ಪ ಸಹಾಯವು ದೊರೆಯುವುದು. ಪಾಶ್ಚಾತ್ಯ ದೇಶಗಳಲ್ಲಿ ಆಸ್ತಿಯೆಲ್ಲವೂ ಹಿರಿಯಮಗನಿಗೇ ಸೇರಬೇಕೆಂಬ ನಿಯಮವಿದೆ. (Law of Primogeniture) ಆದುದರಿಂದ ಅಲ್ಲಿ ಅಲ್ಪ ಮಂದಿ ಸಿರಿವಂತರೂ, ಬಹುಮಂದಿ ಆಸ್ತಿಯೇ ಇಲ್ಲದವರೂ ಸಿಕ್ಕುವರು. ಸಿರಿವಂತರಿಗೂ ಬಡವರಿಗೂ ಅಂತರವು ಬಹು ದೊಡ್ಡದಾಗಿರುವುದು. ಈ ಕಾರಣ

ದಿಂದಲೇ "ಆಸ್ತಿಯೆಲ್ಲವೂ ಸಮಾಜಕ್ಕೇ ಸೇರಿದುದು; ಮಧ್ಯಕದಲ್ಲಿರ ಬೇಕು; ವ್ಯಕ್ತಿಗೆ ಆಸ್ತಿಯಲ್ಲಿ ಹಕ್ಕಿರಕೂಡದು." ಎಂಬ ಚಳವಳಿಯು ಬೆಳೆಯುತ್ತಿರುವುದು. ನಮ್ಮಲ್ಲಿರುವ ಪದ್ಧತಿಯು ಪ್ರತಿಯೊಬ್ಬ ವ್ಯಕ್ತಿಗೂ ಪಕ್ಷಪಾತವಿಲ್ಲದೆ ಆಸ್ತಿಯನ್ನು ದೊರಕಿಸುವುದು; ಇದು ಅನನುಕೂಲ ವನ್ನುಂಟುಮಾಡಿಲ್ಲ. ಆದುದರಿಂದ ಇದು ಧರ್ಮಯುತವಾದುದೆಂದು (Distributive Justice) ಹೇಳಬಹುದು. ಆದುದರಿಂದಲೇ ನಮ್ಮ ದೇಶದ ಪ್ರತಿಯೊಬ್ಬ ರೈತನಿಗೂ ಸ್ವಲ್ಪವಾದರೂ ಆಸ್ತಿಯು ಸಿಕ್ಕುತ್ತಿರು ವುದು. ಒಂದು ಎಕರೆ ಜಮೀನು ಒಬ್ಬ ರೈತನಿಗೆ ಸಿಕ್ಕಿದರೆ ಅವನು ಎಷ್ಟೋ ಸ್ವಾತಂತ್ರ್ಯವನ್ನು ಗಳಿಸುವನು. ಆ ಪುಟ್ಟ ಆಸ್ತಿಯಲ್ಲೇ ಅವನಿಗೆ ಒಂದು ವಿಧವಾದ ವ್ಯಾಮೋಹ; ಹೆಮ್ಮೆ. ಹೀಗಲ್ಲದೆ ನಮ್ಮ ಹಳ್ಳಿಗಳಲ್ಲಿ ಆಸ್ತಿಯೆಲ್ಲ ಸ್ವಲ್ಪಮಂದಿಗೂ, ಕಷ್ಟವೆಲ್ಲ ಇತರರ ಪಾಲಿಗೂ ಬಿದ್ದಿದ್ದರೆ ಗ್ರಾಮಜೀವನವು ಮದ್ದಿನ ಮನೆಯಲ್ಲಿ ಬೆಂಕಿಯೊಡನೆ ಸರಸ ವಾಡುವವನ ಜೀವನದಂತಿರುತ್ತಿತ್ತು. ಆದುದರಿಂದ ನಮ್ಮವರ ಆಸ್ತಿಯ ಹಂಚುವಿಕೆಯನ್ನು ಎಷ್ಟು ಹೊಗಳಿದರೂ ಸಾಲದು.

ಆದರೆ ಇತ್ತೀಚೆಗೆ ಸುಧಾರಕರು ಈ ಪ್ರಶ್ನೆಗೂ ಕೈಹಚ್ಚಿರುವರು. ಇದರಲ್ಲಿರುವ ಕೆಲವು ದೋಷಗಳನ್ನು ಗುರುತಿಸಿರುವರು. ಈ ಬಗೆಯ ಜಮೀನು ಹಂಚುವಿಕೆಯಿಂದ ಪ್ರತಿಯೊಬ್ಬ ರೈತನಿಗೂ ದೊರೆಯುತ್ತಿರುವ ಜಮೀನಿನ ತಾಕು ಬಹು ಚಿಕ್ಕದಾಗುತ್ತಿದೆಯೆಂದೂ, ಅದರ ಪರಿಣಾಮ ವಾಗಿ ಬೇಸಾಯವನ್ನು ಉತ್ತಮಗೊಳಿಸುವುದು ಅಸಾಧ್ಯವೆಂದೂ ಅವರ ವಾದ. ನಮ್ಮ ಬೇಸಾಯವೆಲ್ಲವೂ ಸಣ್ಣಪುಟ್ಟ ರೈತರ ವಶದಲ್ಲಿರುವುದ ರಿಂದ ಪಾಶ್ಚಾತ್ಯದೇಶಗಳಲ್ಲಿರುವಂತೆ ಉತ್ತಮವಾದ ಯಂತ್ರೋಪಕರಣ ಗಳನ್ನು ವ್ಯವಸಾಯದಲ್ಲಿ ಉಪಯೋಗಿಸಲಸಾಧ್ಯವಾಗಿದೆಯೆಂದೂ ಒಳ್ಳೆಯ ಬಂಡವಾಳಗಾರರು ನಮ್ಮ ರೈತರಲ್ಲಿ ಇರಲಸಾಧ್ಯವಾಗಿದೆಯೆಂದೂ ಅವರ ಹೇಳಿಕೆ. ಈ ದೋಷಗಳೆಲ್ಲವೂ ಇರುವುದು ನಿಜ. ಆದರೆ ಇದರ ಪರಿಹಾರವು

ನಮ್ಮ ಹಂಚುವಿಕೆಯ ಪದ್ಧತಿಯನ್ನು ಬದಲಾಯಿಸುವುದಗಲ್ಲಿಲ್ಲ. ಆದುದರಿಂದ ಇವುಗಳ ಪರಿಹಾರಕ್ಕಾಗಿ ಬೇರೆ ಉಪಾಯಗಳನ್ನು ಹುಡುಕಬೇಕು.[4]

## ಜನತೆಯ ಸಂಸ್ಕೃತಿಯೂ, ಆರ್ಥಿಕ ಜೀವನವೂ

ಹಳ್ಳಿಯವರೊಡನೆ ಬೆರೆದು, ಅವರ ನಿತ್ಯದ ಜೀವನದಲ್ಲಿ ಭಾಗಿಗಳಾಗಿ, ಅವರ ನಡೆನುಡಿಗಳನ್ನು ನಾವು ಪರೀಕ್ಷಿಸಿದರೆ ಅವರ ಸಂಸ್ಕೃತಿಯ ಸ್ವರೂಪವನ್ನು ತಿಳಿಯಬಹುದು. ಮೊಟ್ಟಮೊದಲು ನಮ್ಮ ಮನಸ್ಸಿಗೆ ಅಂಟುವ ವಿಷಯವಾವುದೆಂದರೆ ರೈತರಿಗೆ ಇಹಲೋಕದ ವ್ಯಾಪಾರದಲ್ಲಿರುವ ನಿರುತ್ಸಾಹ, ಉದಾಸೀನ ಮತ್ತು ಪರಲೋಕದ ವ್ಯಾಪಾರದಲ್ಲಿರುವ ಆಸಕ್ತಿ. ವೇದಗಳು, ಉಪನಿಷತ್ತುಗಳು, ಇತಿಹಾಸಗಳು—ಇವುಗಳೆಲ್ಲವೂ ಐಹಿಕಪ್ರಪಂಚದ ನಶ್ವರತೆಯನ್ನೂ ಆಮುಷ್ಮಿಕ ಪ್ರಪಂಚದ ಸ್ಥಿರತ್ವವನ್ನೂ ನಮ್ಮ ಜನಗಳಿಗೆ ಸಾವಿರಾರು ವರ್ಷಗಳಿಂದಲೂ ಉಪದೇಶಮಾಡುತ್ತಿವೆ. ಈ ಉದ್ಗ್ರಂಥಗಳನ್ನು ಜನಸಾಮಾನ್ಯವು ಎಟಕಿಸದಿದ್ದರೂ ನಮ್ಮ ಸಮಾಜದಲ್ಲಿ ಪ್ರಚುರವಾಗಿರುವ ಹರಿಕಥೆ, ಪುರಾಣ, ನಾಟಕ, ಗಾದೆ, ಜನಪದ ಸಾಹಿತ್ಯ, ವಚನಕಾರರ ವಚನ ಮೊದಲಾದುವುಗಳ ಸಹಾಯದಿಂದ ಉಪನಿಷದ್ರತ್ನಗಳಲ್ಲಿ ಅಡಗಿರುವ ಪಾರಮಾರ್ಥಿಕ ಜ್ಞಾನವು ಜನಸಾಮಾನ್ಯರಿಗೂ ಸುಲಭವಾಗಿ ದೊರೆಯುವಂತಾಗಿ, ಆ ಉಪದೇಶಗಳು ಜನತೆಯ ದಿನಚರಿಯ ಜೀವನದಲ್ಲಿ ಅಡಕವಾಗಿವೆ. "ಮುಕ್ತಿಯೇ ಶಾಶ್ವತವಾದ ಸುಖ; ಅದನ್ನು ಪಡೆಯಲು ಯತ್ನಿಸುವುದೇ ಮಾನವನಿಗೆ ಯೋಗ್ಯವಾದ ಕರ್ತವ್ಯ." ಎನ್ನುವುದೇ ಈ ಸಂಸ್ಕೃತಿಯ ತಿರುಳು. "ಬಡತನದಿ ಕಂಗೆಡವೆ, ವಿತ್ತವಗಳಿಸಿ ಗರ್ವಿಸದೆ, ಮಡದಿ, ಮನೆ, ಮನೆ ವಾರ್ತೆ, ಮಕ್ಕಳ ಗೊಡವಿಯಲಿ ಕಡು ಮಮತೆಯಿಲ್ಲದೆ, ದೃಢವಿರಕ್ತಿಯಿರಲು ಮನುಷ್ಯನು ಮೋಕ್ಷಪಡೆಯುವನು."[5] ಈ ನಂಬುಗೆಯೊಡನೆ ಇನ್ನೊಂದು ನಂಬುಗೆಯೂ ನಮ್ಮ ಸಂಸ್ಕೃತಿಯಲ್ಲಿ

ಬೆರೆದು ಬಂದಿರುವುದು. ನಾವು ಪುನರ್ಜನ್ಮದಲ್ಲಿ ನಂಬುಗೆಯನ್ನಿಟ್ಟುಕೊಂಡಿರುವೆವು. ಈ ಜನ್ಮದಲ್ಲಿ ನಾವು ಮಾಡಿದ ಪುಣ್ಯಪಾಪಗಳ ಫಲವನ್ನು ಅನುಭವಿಸಲು ಪುನಃ ಹುಟ್ಟುವೆವೆಂಬುದೇ ಈ ನಂಬುಗೆ. ಒಂದು ವಿಧದಲ್ಲಿ ಇದರಿಂದ ಉಪಕಾರವುಂಟು. ನಾವು ಮಾಡಿದ ಪಾಪದ ಫಲವನ್ನು ನಾವೇ ಸವೆಯಿಸಬೇಕು; ಎಂಬ ಹೆದರಿಕೆಯು ನಮ್ಮಲ್ಲಿದ್ದರೆ ಈ ಜನ್ಮದಲ್ಲಿ ನಾವು ಉತ್ತಮ ಮಾರ್ಗವನ್ನು ಅನುಸರಿಸುವುದು ಸುಲಭ. ಇದು ಒಳ್ಳೆಯದೇ. ಆದರೆ ನಾವು ಈ ಜನ್ಮದಲ್ಲಿ ಪಡುತ್ತಿರುವ ಕಷ್ಟಕ್ಕೆ ನಮ್ಮ ಪೂರ್ವಜನ್ಮವೇ ಕಾರಣವೆಂಬ ನಂಬುಗೆಯೂ ಇದರೊಡನೆಯೇ ಬರುವುದರಿಂದ ಇಂದಿನ ಕಷ್ಟವನ್ನು ನಿವಾರಣೆಮಾಡಿಕೊಳ್ಳಲು ನಾವು ಪ್ರಯತ್ನಿಸುವುದು ವ್ಯರ್ಥವೆಂದು ನಮ್ಮ ಮನಸ್ಸಿಗೆ ಬಾರದಿರದು. ನಮ್ಮ ರೈತರೊಡನೆ ನಾವು ಸಂಭಾಷಣೆಯನ್ನು ನಡೆಯಿಸಿದರೆ ಈ ವಿಷಯಕ್ಕೆ ಬಹು ನಿದರ್ಶನಗಳು ದೊರೆಯುವುವು. ಒಂದು ವರ್ಷ ಫಸಲು ನಷ್ಟವಾದರೆ ಇದು ಏಕೆ ನಷ್ಟವಾಯಿತು? ಕಾರಣವು ನಿವಾರಣೀಯವೇ? ಅನಿವಾರಣೀಯವೇ? ಎಂಬುದನ್ನು ಪರೀಕ್ಷಿಸದೆ ಅದು ದೈವಲೀಲೆ; ಪೂರ್ವಜನ್ಮದ ಕರ್ಮದ ಫಲ; ಎಂದು ಹೇಳುವ ರೈತರೇ ಬಹುಮಂದಿ ಇರುವರು. ನಿವಾರಣೀಯವಾದ ಖಾಯಿಲೆಗಳಿಗೆ ತುತ್ತಾಗಿ ಕೃಶರಾಗಿರುವ ಅಥವಾ ಸಾಯುತ್ತಿರುವ ರೈತರಲ್ಲಿ ಬಹುಮಂದಿ ಈ ಪಲ್ಲವಿಯನ್ನು ಹಾಡುತ್ತ, ತಮ್ಮ ಸನ್ನಿವೇಶವನ್ನು ಉತ್ತಮಗೊಳಿಸಲು ಪ್ರಯತ್ನಿಸದೆ ಇರುವರು.

ಆದುದರಿಂದಲೇ ನಮ್ಮ ನಾಡಿನ ಬಡತನಕ್ಕೂ ನಮ್ಮ ರೈತರ ನಿರುತ್ಸಾಹಕ್ಕೂ ನಮ್ಮ ಸಂಸ್ಕೃತಿಯೇ—ನಮ್ಮ ಮತವೇ–ಕಾರಣವೆಂದು ಹಲವು ಪಾಶ್ಚಾತ್ಯ ಅರ್ಥಶಾಸ್ತ್ರಜ್ಞರೂ, ಭಾರತೀಯ ಅರ್ಥಶಾಸ್ತ್ರಜ್ಞರೂ ಅಭಿಪ್ರಾಯಪಡುತ್ತಾರೆ. "ಇಹಲೋಕವನ್ನೂ ಅದರ ವ್ಯಾಪಾರವನ್ನೂ ನಿಕೃಷ್ಟಭಾವದಿಂದ ಕಾಣುತ್ತಿರುವುದರಿಂದ ಪಾರಮಾರ್ಥಿಕವಾದ ಆದರ್ಶವು ನಮ್ಮ ಜನಜೀವನದಲ್ಲಿ ದೃಢವಾದ ಪರಿಣಾಮವನ್ನು ಉಂಟುಮಾಡಿದೆ.

ಆ ಪರಿಣಾಮವು ದುಷ್ಪರಿಣಾಮವಾಗಿದೆ. ಇಹವ್ಯಾಪಾರವನ್ನು ದೂಷಣೆ ಮಾಡುವ ಅಭ್ಯಾಸವು ನಮ್ಮಲ್ಲಿ ಬೇರೂರಿ ನಿಂತಿದೆ. ನಮ್ಮ ರಾಜಕೀಯ ದಾಸ್ಯಕ್ಕೂ ಮತ್ತು ಆರ್ಥಿಕಾವನತಿಗೂ ಇದೊಂದು ಮುಖ್ಯಕಾರಣ." ಎಂದು 1908 ನೆಯ ಇಸವಿಯ ಇಂಡಿಯನ್ ಇಂಡಸ್ಟ್ರಿಯಲ್ ಕಾನ್ಫರೆನ್ಸಿನ ಅಧ್ಯಕ್ಷಭಾಷಣದಲ್ಲಿದೆ.[6]

ಈ ವಿಧವಾದ ನಿರುತ್ಸಾಹವೂ, ನಿರಾಶೆಯೂ ನಮ್ಮ ನಾಡಿನಲ್ಲಿರುವವರೆಗೂ ನಮ್ಮ ರೈತರ ಜೀವನವನ್ನು ಉತ್ತಮಗೊಳಿಸುವುದು ಹರಿಹರ ಬ್ರಹ್ಮಾದಿಗಳಿಗೂ ಸಾಧ್ಯವಿಲ್ಲವೆನ್ನಬಹುದು. ಆದುದರಿಂದ ಈ ಮಾನಸಿಕವಾದ ರೋಗವನ್ನು ಮೊದಲು ಹೋಗಲಾಡಿಸಬೇಕು. ಅದಕ್ಕಾಗಿಯೇ ಈ ನಿರುತ್ಸಾಹವೆಂಬ ಕಾರ್ಮೋಡದ ಸ್ವಭಾವವನ್ನು ಕೂಲಂಕಷವಾಗಿ ವಿಮರ್ಶಿಸಬೇಕು.

ಮೊದಲು ನಮ್ಮ ಪಾರಮಾರ್ಥಿಕ ದೃಷ್ಟಿಗೂ ಈ ನಿರುತ್ಸಾಹಕ್ಕೂ ಇರುವ ಸಂಬಂಧವನ್ನು ನೋಡುವ. ಹಿಂದೂಗಳ ಇತಿಹಾಸವನ್ನು ಶೋಧಿಸಿ ನೋಡಿದರೆ, ಎಂದು ಹಿಂದುಗಳ ವೈದಿಕಧರ್ಮವು ಅತ್ಯುನ್ನತ ಸ್ಥಿತಿಯಲ್ಲಿದ್ದಿತೋ ಅಂದೇ ಹಿಂದುಗಳ ಇಹಲೋಕ ಸುಖಸಂಪತ್ತೂ ಉತ್ತಮಸ್ಥಿತಿಯಲ್ಲಿದ್ದಂತೆ ಕಂಡುಬರುವುದು. ವಿಜ್ಞಾನಶಾಸ್ತ್ರದ ಬೆಳವಳಿಕೆಯಲ್ಲೂ ಸಕಲಕಲಾಭಿವೃದ್ಧಿಯಲ್ಲೂ ಪೂರ್ವಕಾಲದ ಹಿಂದುಗಳು ತೋರಿಸಿರುವ ಉತ್ಸಾಹವನ್ನು ನೋಡಿದರೆ "ಹಿಂದುಗಳಿಗೆ ಪರಮಾರ್ಥದಲ್ಲಿ ನಂಬುಗೆಯಿದ್ದರೂ, ಇಹಲೋಕದ ಸುಖವು ಅನಿತ್ಯವೆಂದು ತಿಳಿದಿದ್ದರೂ, ಪರಲೋಕಸುಖಕ್ಕಾಗಿ ಹೆಚ್ಚು ಶ್ರಮವನ್ನು ವಹಿಸುತ್ತಿದ್ದರೂ, ಇಹಲೋಕದ ಸುಖವನ್ನು ಕೈಬಿಟ್ಟಿರಲಿಲ್ಲ; ಎಂದರೆ ಎಲ್ಲರೂ ಸನ್ಯಾಸಿಗಳಾಗಿರಲಿಲ್ಲ. ಹಿಂದೂಮತದ ಅಡಿಗಲ್ಲಾದ ವರ್ಣಾಶ್ರಮಧರ್ಮದ ವಿವೇಚನೆಗೆ ಇದೇ ಕಾರಣ. ಇಹಲೋಕದ ಸುಖಕ್ಕೆ ಎರವಾದ ಗೃಹಸ್ಥಾಶ್ರಮಕ್ಕೆ ನಮ್ಮ ಧರ್ಮಶಾಸ್ತ್ರಜ್ಞರು ಪೂಜ್ಯಸ್ಥಾನವನ್ನು ಕೊಟ್ಟಿದ್ದರು. ಉಪನಿಷತ್ತುಗಳ,

ವೇದಗಳ ಮತ್ತು ಭಗವದ್ಗೀತೆಯ ಮತವು ಅಬಲರಾವ ನಿರುತ್ಸಾಹಿಗಳಾದ ನಿರಾಶಾವಾದಿಗಳ ಮತವಾಗಿರಲಿಲ್ಲ; ಸಂತೋಷದಿಂದಲೂ, ಉತ್ಸಾಹ ದಿಂದಲೂ ತುಂಬಿತುಳುಕುತ್ತಿದ್ದ ದೃಢಮನಸ್ಕರ ಬುದ್ಧಿಚತುರತೆಯ ಕೆನೆಯಾಗಿತ್ತು." ಎಂದು ನಿಸ್ಸಂದೇಹವಾಗಿ ಹೇಳಬಹುದು.

ನಮ್ಮ ಜನಾಂಗದಲ್ಲಿ ಈ ಅರಿವು ನಶಿಸಿಹೋಗಿದೆ. ನಮ್ಮ ಮತ ಗ್ರಂಥಗಳ ಅರ್ಥವನ್ನು ಅವರು ತಪ್ಪಾಗಿ ತಿಳಿದುಕೊಂಡಿರುವುದರಿಂದ ಅವರ ನಿರುತ್ಸಾಹಕ್ಕೆ ಒಂದು ಪಾರಮಾರ್ಥಿಕ ಭಾವನೆಯ ಬಣ್ಣವು ಹತ್ತಿದೆ. ನಿಜವಾಗಿಯೂ ನಮ್ಮ ನಿರುತ್ಸಾಹದ ಕಾರಣವು ನಮ್ಮ ವೇದಾಂತವಲ್ಲ; ಬೇರೆ ಇರಬೇಕು.

ನಮ್ಮ ಜನಾಂಗದಲ್ಲಿರುವ ನಿರುತ್ಸಾಹವು ಬಹುಪುರಾತನವಾದುದಲ್ಲ. ಹಿಂದಿನಕಾಲದಲ್ಲಿ ಎಂದರೆ ವೇದಗಳಕಾಲ, ಪುರಾಣಗಳಕಾಲ–ಇವುಗಳಲ್ಲಿ ನಮ್ಮ ಜನರಿಗೆ ಭಕ್ತಿಯೊಡನೆ ದೈವಶ್ರದ್ಧೆಯು ಹೆಚ್ಚಾಗಿದ್ದರೂ ಇಹಲೋಕ ಸಂಪತ್ತಿನಲ್ಲಿ ನಿರುತ್ಸಾಹವಿರಲಿಲ್ಲ. ತಮ್ಮ ಬಾಹುಬಲದಲ್ಲಿ ನಂಬುಗೆಯಿತ್ತು, "ದೇವರು ಮಾಡಿದಂತಾಗಲಿ." ಎಂಬ ಮಾತು ಕೊನೆಯ ಮಾತಾಗಿದ್ದಿತೇ ವಿನಾ ಅದು ಪುರುಷಪ್ರಯತ್ನವನ್ನು ನಿಷೇಧಿಸುತ್ತಿರಲಿಲ್ಲ. ಹಿಂದುಗಳ ಬಹು ಮುಖ್ಯಗ್ರಂಥವಾದ ಭಗವದ್ಗೀತೆಯು ಫಲಾಫಲಗಳ ಮೇಲೆ ದೃಷ್ಟಿಯನ್ನಿಡದೆ ತನ್ನ ಕಾರ್ಯವನ್ನು ಮನುಷ್ಯನು ಮಾಡಲೇಬೇಕು; ಎಂಬುದನ್ನು ಒತ್ತಿಒತ್ತಿ ಹೇಳುತ್ತಿದೆ.

ನಾವು ಬಲಹೀನರಾಗಿ ನಿರುತ್ಸಾಹಿಗಳಾಗಿರುವುದು ಕೆಲವು ಶತಮಾನಗಳಿಂದೀಚೆಗೆ. ಪ್ರಾಯಃ ಪರದೇಶದವರಿಗೆ ನಾವು ಅಧೀನರಾಗಿರುವುದೂ ಇದಕ್ಕೆ ಒಂದು ಕಾರಣವಾಗಿರಬಹುದು. ನಮ್ಮ ದೇಶದ ವಾಯುಗುಣವೂ ನಮ್ಮನ್ನು ಬಲಹೀನರನ್ನಾಗಿ ಮಾಡಿ ನಮ್ಮಲ್ಲಿ ನಿರುತ್ಸಾಹವನ್ನುಂಟುಮಾಡಿರಬಹುದು. ಕಾಲಕ್ಕೆ ಸರಿಯಾಗಿ ಮಳೆಬೆಳೆಗಳಾಗದಿರುವುದರಿಂದಲೂ ಬೆಳೆದ ಪದಾರ್ಥಗಳು ತಕ್ಕ ಪ್ರತಿಫಲವನ್ನು ತಾರದಿರುವುದ

ರಿಂದಲೂ ನಮಗೆ ಪುರುಷಪ್ರಯತ್ನದಲ್ಲಿಯೇ ನಂಬುಗೆ ಕಡಮೆಯಾಗಿರ ಬಹುದು. ಉಷ್ಣವಲಯದಲ್ಲಿ ಸಾಮಾನ್ಯವಾಗಿರುವ ಮಲೇರಿಯಾ, ನಾರುಹುಣ್ಣು, ಮೊದಲಾದ ಖಾಯಿಲೆಗಳಿಂದ ಮನುಷ್ಯನ ಲವಲವಿಕೆಯು ಕಡಿಮೆಯಾಗಿ ಜೀವನದಲ್ಲಿ ಉತ್ಸಾಹವು ಕಡಮೆಯಾಗುವುದು. ಅಲ್ಲದೆ ಭಾರತೀಯರಿಗೆ ಆಜನ್ಮಸಿದ್ಧವಾದ ಹಕ್ಕಿನಂತಿರುವ ಮಹಾಕ್ಷಾಮಗಳಿಂದಲೂ ಉಪದ್ರವಗಳಿಂದಲೂ ಆಸಕ್ತಿಯು ದಿನೇದಿನೇ ಕುಗ್ಗುತ್ತಿರುವುದು. ಒಟ್ಟಿನಲ್ಲಿ ನಮ್ಮ ನಿರುತ್ಸಾಹದ ಕಾರಣವು ನಮ್ಮ ವೇದಾಂತವಲ್ಲ; ನಮ್ಮ ಸನ್ನಿವೇಶಗಳು.

ಪ್ರಕೃತ ಜನಸಾಮಾನ್ಯದಲ್ಲಿರುವ ಈ ನಿರುತ್ಸಾಹವನ್ನು ಹೋಗಲಾಡಿಸುವುದೇ ನಮ್ಮ ಮುಖ್ಯ ಕರ್ತವ್ಯವು. ಇದಕ್ಕಾಗಿ "ಐಹಿಕಸಂಪದಭಿವೃದ್ಧಿಯಿಂದ ಆಮುಷ್ಮಿಕ ವ್ಯಾಪಾರವು ಕೆಡುವುದಿಲ್ಲ; ಮತ್ತು ಅನೇಕ ಸಂದರ್ಭಗಳಲ್ಲಿ ಐಹಿಕಸಂಪತ್ತಿನ ಮೂಲಕವಾಗಿಯೇ ನಾವು ಸಮಾಜಹಿತಕ್ಕಾಗಿ ಕೆಲಸಮಾಡಬಹುದು; ದೇಶಸೇವೆಯೇ ಈಶಸೇವೆಯಲ್ಲವೇ! ನಮ್ಮ ಪೂರ್ವಿಕರು ಸಂತೋಷಭರಿತರಾಗಿ ಇಹಲೋಕದ ವ್ಯಾಪಾರದಲ್ಲಿ ಉತ್ತಮ ಕಲಾಕುಶಲತೆಯನ್ನು ತೋರಿಸುತ್ತಿರಲಿಲ್ಲವೆ"? ಎಂಬ ವಿಷಯಗಳನ್ನು ನಮ್ಮ ಹಳ್ಳಿಯವರಿಗೆ ಮನದಟ್ಟುವಂತೆ ಮಾಡಬೇಕು. ಆದರೆ ಈ ಬೋಧನೆಯಿಂದ ನಮ್ಮ ಪಾರಮಾರ್ಥಿಕದೃಷ್ಟಿಯ ಸಂಕೋಚನಕ್ಕೆ ಅವಕಾಶವನ್ನು ಮಾತ್ರ ಕೊಡಬಾರದು. ನಮ್ಮ ಪಿತ್ರಾರ್ಜಿತವಾದ ಸಂಸ್ಕೃತಿಯನ್ನು ಬೆಳೆಯಿಸಬೇಕು; ಅಳಿಸಬಾರದು.[7] ಇಹಲೋಕದ ಸುಖದಲ್ಲಿಯೇ ಮಗ್ನರಾಗದೆ, ಆ ಸುಖವನ್ನು ಪರಲೋಕದ ಸುಖಕ್ಕೆ ಸೋಪಾನದಂತೆ ಉಪಯೋಗಿಸಿಕೊಳ್ಳಬಹುದೆಂಬುದನ್ನು ಪಾಶ್ಚಾತ್ಯರಿಗೆ ಬೋಧಿಸುವುದೇ ನವಭಾರತದ ಮುಖ್ಯಸಂದೇಶವಾಗಬಾರದೇಕೆ? "Desire the Eternal; Use the Temporal.[8]"



# ೧೪. ಹಳ್ಳಿಯ ಪಾಠಶಾಲೆಗಳು

ಈ ಗ್ರಂಥದ ಆದಿಯಿಂದ ಇಲ್ಲಿಯವರೆಗೆ ನಮ್ಮ ರೈತರ ಜೀವನ ಪಥವಲ್ಲಿರುವ ನಾನಾವಿಧವಾದ ನ್ಯೂನಾತಿರೇಕಗಳನ್ನು ವಿವರಿಸಿರುವೆವಲ್ಲದೆ, ಅವುಗಳ ಪರಿಹಾರಕ್ಕಾಗಿ ಯಾವ ಮಾರ್ಗಗಳನ್ನು ಅನುಸರಿಸಬೇಕೆಂಬು ದನ್ನೂ ಚರ್ಚಿಸಿರುವೆವು. ಆದರೆ ನಮ್ಮ ಚರ್ಚೆಯಲ್ಲಿ ಹೆಜ್ಜೆಹೆಜ್ಜೆಗೂ ನಮ್ಮನ್ನೇ ಹಿಂಬಾಲಿಸಿ ಬರುತ್ತಿರುವ ಮಹಾಮಾರಿಯೊಂದನ್ನು ನಾವು ಆಗಾಗ್ಗೆ ದೃಷ್ಟಿಸಿ ನೋಡಿದ್ದರೂ ಸಂಪೂರ್ಣವಾಗಿ ಪರೀಕ್ಷಿಸಿಲ್ಲ. ನಮ್ಮ ರೈತರನ್ನಾವರಿಸಿರುವ ಅಜ್ಞಾನವೇ ಆ ಮಹಾಮಾರಿ. ಈ ಅಜ್ಞಾನವೇ ರೈತರ ಸಕಲ ವಿಧವಾದ ಕಷ್ಟಗಳಿಗೂ ಕಾರಣವು. ಅಲ್ಲವೆ ನಾವು ಹುಡುಕುತ್ತಿರುವ ಎಲ್ಲ ಸಾಧನಗಳಿಗೂ ಇದೇ ಅಡ್ಡಿಯಾಗಿ ನಿಂತಿರುವುದು. ರೈತರ ವ್ಯಾಪಾರ ಮಾರ್ಗದಲ್ಲಿರುವ ಕಷ್ಟಗಳು, ಅವರ ಮುಖ್ಯ ಕಸಬಿನ ಪಾಲನೆಯಲ್ಲಿರುವ ಕಷ್ಟಗಳು, ಅವರ ಆರೋಗ್ಯಭಾಗ್ಯಕ್ಕೆ ಅನ್ವಯವಾಗುವ ಕಷ್ಟಗಳು—ಇವುಗಳಿಗೆಲ್ಲ ಅವರ ಅಜ್ಞಾನವೇ ಮುಖ್ಯ ಕಾರಣವಾಗಿದೆ. ಪರಸ್ಪರ ಸಹಾಯಕ ಸಂಘಗಳ ಮೂಲಕವಾಗಿಯೂ ಗ್ರಾಮಪಂಚಾಯತಿ ಗಳ ಮೂಲಕವಾಗಿಯೂ ಬೇಸಾಯದ ಇಲಾಖೆಯ ಮೂಲಕವಾಗಿಯೂ ಅವರನ್ನು ಉದ್ಧಾರಮಾಡೋಣವೆಂದರೆ ಅವರ ಅಜ್ಞಾನವೆಂಬ ಅಗಾಧ ವಾದ ಗೋಡೆಗೆ ನಮ್ಮ ತಲೆಯು ತಗುಲಿ, ನಮ್ಮ ಆಸೆಯು ನಿರಾಸೆಯಾ ಗುತ್ತಿದೆ. ರೈತರಲ್ಲಿರುವ ಈ ಕತ್ತಲೆಯನ್ನು ಹೋಗಲಾಡಿಸಿ, ತಿಳಿವಿನ ಬೆಳಕನ್ನು ಅವರ ಮೇಲೆ ಬೀರುವ ವರೆಗೂ ಅವರಲ್ಲಿ ಶುಚಿತ್ವವನ್ನಾಗಲಿ, ಮಿತವ್ಯಯವನ್ನಾಗಲಿ, ಶ್ರಮಸಹಿಷ್ಣುತೆಯನ್ನಾಗಲಿ, ಆತ್ಮಾವಲಂಬನ ವನ್ನಾಗಲಿ ನಾವು ನೋಡಲಾರೆವು. ಆದುದರಿಂದ ಗ್ರಾಮಜೀವನವನ್ನು ಉತ್ತಮಪಡಿಸಬೇಕಾದರೆ ರೈತರಲ್ಲಿ ತಿಳಿವನ್ನು ಹರಡಲು ತಕ್ಕ ಪ್ರಯತ್ನ ಗಳನ್ನು ಮಾಡಬೇಕು.

ರೈತರಲ್ಲಿ ಯಾವ ವಿಧವಾದ ತಿಳಿವಳಿಕೆಯನ್ನು ಹರಡಬೇಕೆಂಬ ಉದ್ದೇಶವು ನಮ್ಮ ಪ್ರಾಚೀನ ಸಮಾಜದ ನೇತೃಗಳಲ್ಲಿದ್ದಿತೋ ಅಂತಹ ಆಧ್ಯಾತ್ಮಿಕ ಜ್ಞಾನವನ್ನು ಹರಡಲು ತಕ್ಕ ಉಪಕರಣಗಳನ್ನು ಅವರು ಒದಗಿಸಿಟ್ಟುಕೊಂಡಿದ್ದರು. ಹರಿಕಥೆಗಳು, ಪುರಾಣ, ಕೀರ್ತನೆಗಳು, ಲಾವಣಿಗಳು, ಗುರುಗಳ ಉಪದೇಶ—ಮುಂತಾದವುಗಳ ಮೂಲಕ ಅನಕ್ಷರಸ್ಥರಾದ ರೈತರ ಹೃದಯದಲ್ಲಿಯೂ ದೈವಭಕ್ತಿ, ಗುರುಹಿರಿಯರಲ್ಲಿ ಭಕ್ತಿ, ನಯವಿನಯಗಳು—ಮುಂತಾದ, ಮಾನವ ಜೀವನದ ಕುಸುಮಗಳನ್ನು ಅರಳಿಸುವ ಏರ್ಪಾಡುಗಳಿದ್ದವು. ಆದರೆ ಅಕ್ಷರಾಭ್ಯಾಸದಲ್ಲಿ ಅಷ್ಟು ಆಸಕ್ತಿಯು ಪ್ರದರ್ಶಿಸಲ್ಪಡಲಿಲ್ಲ.

ಆಧುನಿಕ ಪ್ರಪಂಚದಲ್ಲಿ ತಿಳಿವಿನ ಪ್ರಚಾರಕ್ಕೆ ಅನೇಕ ವೈಜ್ಞಾನಿಕ ಉಪಕರಣಗಳು ದೊರೆತಿವೆ. ರೇಡಿಯೋ, ಚಲನಚಿತ್ರಗಳು, ಮಾಯಾದೀಪ—ಮೊದಲಾದುವುಗಳ ಸಹಾಯದಿಂದ ಅನಕ್ಷರಸ್ಥರಿಗೆ ನೂತನ ವಿಷಯಗಳನ್ನು ಬೋಧಿಸುವುದು ಸುಲಭ. ಹಿಂದೆ ಅಕ್ಷರಗಳನ್ನು ಓದುವುದು, ಬರೆಯುವುದು, ಪುಸ್ತಕಗಳು, ಪತ್ರಿಕೆಗಳು, ಪ್ರಬಂಧಗಳು—ಇವುಗಳೇ ಜ್ಞಾನಪ್ರಚಾರಮಾಡುವ ಉಪಕರಣಗಳಾಗಿದ್ದವು. ಇಂದಿನ ಕಾಲದ ನಾಯಕರ ಮುಖ್ಯವಾದ ಉದ್ದೇಶವು ಜ್ಞಾನಾರ್ಜನೆಗೆ ಮುಖ್ಯೋಪಕರಣವಾದ ಅಕ್ಷರಾಭ್ಯಾಸವನ್ನು ಪ್ರತಿಯೊಬ್ಬ ವ್ಯಕ್ತಿಗೂ ಒದಗಿಸಿಕೊಡುವುದು. ಮೈಸೂರು ಸರ್ಕಾರದವರು ಅಕ್ಷರಾಭ್ಯಾಸಕ್ಕಾಗಿ ಪಾಠಶಾಲೆಗಳಿಗೆ ಪ್ರತಿವರ್ಷವೂ ತಮ್ಮ ಶಕ್ತಿಮೀರಿ ಹಣವನ್ನು ವೆಚ್ಚಮಾಡುತ್ತಿರುವರು. ಈ ಕೆಳಗಿನ ಅಂಕಿಗಳು ಈ ವಿಷಯವನ್ನು ಸ್ಪಷ್ಟಪಡಿಸುವುವು.

**ಮೈಸೂರು ಸರ್ಕಾರದ ವಿದ್ಯಾಭ್ಯಾಸದ ಇಲಾಖೆಯ**

**ಖರ್ಚಿನ ತಃಖ್ತೆ**[1]

| | | |
|---|---|---|
| 1865 | .... | 1,13,000 ರೂಪಾಯಿಗಳು |
| 1881 | .... | 3,91,028 ,, |

| | | | |
|---|---|---|---|
| 1911 | .... | 18,73,133 | ,, |
| 1916 | .... | 27,85,328 | ,, |
| 1926 | .... | 60,70,703 | ,, |
| 1933 | .... | 67,17,951 | ,, |

ನಮ್ಮನ್ನಾಳುವ ಶ್ರೀಮನ್ಮಹಾರಾಜರವರ ಉದಾರಭಾವನೆಯೂ ವಿದ್ಯಾದಾನದಲ್ಲಿ ಅವರಿಗಿರುವ ಆಸಕ್ತಿಯೂ ಇದರಿಂದ ವ್ಯಕ್ತವಾಗುವುದು.

ನಮ್ಮ ಪಾಠಶಾಲೆಗಳಲ್ಲಿ ಅನೇಕ ಹಂತಗಳಿರುವುವಷ್ಟೆ. ಅವುಗಳಲ್ಲಿ ಗ್ರಾಮಜೀವನಕ್ಕೆ ಅನ್ವಯವಾಗುವ ಪಾಠಶಾಲೆಗಳೆಂದರೆ ಪ್ರಾಥಮಿಕ ಪಾಠಶಾಲೆಗಳೇ ಎಂದು ನಿಸ್ಸಂಕೋಚವಾಗಿ ಹೇಳಬಹುದು. ಇಂತಹ ಪ್ರಾಥಮಿಕ ಪಾಠಶಾಲೆಗಳು ಎಷ್ಟರಮಟ್ಟಿಗೆ ಬೆಳೆದಿವೆ ಎಂಬುದನ್ನು ಈ ಕೆಳಗಿನ ಅಂಕಿಗಳು ತೋರಿಸುವುವು.

**ಮೈಸೂರು ದೇಶದ ಪ್ರಾಥಮಿಕ ಪಾಠಶಾಲೆಗಳ ಬೆಳವಳಿಕೆಯನ್ನು ತೋರಿಸುವ ತಃಖ್ತೆ**[2]

| ಇಸವಿ | ಪಾಠಶಾಲೆಗಳು | ವಿದ್ಯಾರ್ಥಿಗಳು |
|---|---|---|
| 1865 | 43 | . |
| 1881 | 907 | 38,296 |
| 1911 | 2077 | 74,804 |
| 1916 | 4930 | 1,53,158 |
| 1926 | 5631 | 2,40,137 |
| 1933 | 6243 | 2,47,191 |

ಇದೇ ರೀತಿಯಲ್ಲಿ ಬ್ರಿಟಿಷ್ ಇಂಡಿಯಾದಲ್ಲಿಯೂ ಪ್ರಾಥಮಿಕ ವಿದ್ಯಾಭ್ಯಾಸಕ್ಕಾಗಿ ಖರ್ಚಾಗುತ್ತಿರುವ ಹಣವು ದಿನೇ ದಿನೇ ವೃದ್ಧಿಯಾಗುತ್ತಿದೆ.[1]

| | | | |
|---|---|---|---|
| 1921-22 | .... | 4,33,47,444 | ರೂಪಾಯಿಗಳು |
| 1926-27 | .... | 5,92,20,326 | ,, |
| 1931-32 | .... | 6,80,98,169 | ,, |

ಈ ಖರ್ಚಿಗೆ ತಕ್ಕಂತೆ ಹೆಚ್ಚು ಹೆಚ್ಚು ಮಂದಿ ಬಾಲಕರೂ ಪಾಠ ಶಾಲೆಗಳಿಗ ಸೇರುತ್ತಿರುವರು.

ನಮ್ಮ ಪಾಠಶಾಲೆಗಳಲ್ಲಿ ನಡೆಯುತ್ತಿರುವ ಕೆಲಸಕ್ಕೆ ಗಮನ ವನ್ನೇ ಕೊಡದೆ ಸರ್ಕಾರದ ವರದಿಯಲ್ಲಿ ಬರುವ ಈ ಅಂಕಿಗಳನ್ನೇ ದೃಷ್ಟಿಯಲ್ಲಿಟ್ಟುಕೊಂಡರೆ, ಪ್ರತಿಯೊಬ್ಬ ಭಾರತೀಯನಿಗೂ ಹೃದಯವು ಹಿಗ್ಗಬಹುದು. ಸರ್ಕಾರದವರೇನೊ ಉದಾರದೃಷ್ಟಿಯಿಂದ ಹೆಚ್ಚು ಹಣ ವನ್ನು ವಿದ್ಯಾಪ್ರಚಾರಕ್ಕಾಗಿ ಖರ್ಚುಮಾಡುತ್ತಿರುವರು. ಆದರೆ ಅಷ್ಟು ಖರ್ಚು ಸಾಕೆ ಎಂಬುದೊಂದು ಪ್ರಶ್ನೆ. ಅದಕ್ಕಿಂತಲೂ ತೊಡಕಾದ ಪ್ರಶ್ನೆಯು, ಈಗ ಆಗುತ್ತಿರುವ ಖರ್ಚಿಗೆ ತಕ್ಕ ಪ್ರತಿಫಲವು ದೊರೆಯುತ್ತಿ ದೆಯೇ ಎಂಬುದು.

ಈ ಸಂದರ್ಭದಲ್ಲಿ ಮೈಸೂರಿನ ಪರಿಸ್ಥಿತಿಯನ್ನು ಕುರಿತು ಸರ್ಕಾರ ದವರು ಪಡುವ ಅಭಿಪ್ರಾಯವನ್ನು ಈಚೆಗೆ ಪ್ರಕಟವಾಗಿರುವ ಒಂದು ವರದಿಯಲ್ಲಿ ನಾವು ಓದಬಹುದು.[4] 1931 ನೆಯ ಇಸವಿಯ ಸೆನ್ಸೆಸ್ ವರದಿಯಂತೆ ನಮ್ಮ ದೇಶದಲ್ಲಿ 32,84,554 ಗಂಡಸರಿರುವರು. ಇವರಲ್ಲಿ ಶೇಕಡ 15 ರಂತೆ ಸ್ಕೂಲಿಗೆ ಹೋಗುವ ವಯಸ್ಸಿನ ಬಾಲಕರಿರುವರು; ಎಂದರೆ 4,92,683. ಇದರಲ್ಲಿ ಶೇಕಡ 80 ಮಂದಿಯನ್ನಾದರೂ ಬಲಾ ತ್ಕಾರವಾಗಿ ಸ್ಕೂಲಿಗೆ ಸೇರಿಸಬಹುದು. ಆದುದರಿಂದ ನಮ್ಮ ಪ್ರಾಥಮಿಕ ಪಾಠಶಾಲೆಗಳಲ್ಲಿ 3,94,146 ಮಂದಿ ಬಾಲಕರಿಗೆ ಸ್ಥಳವಿರಬೇಕಾಯಿತು. ಈಗ 2,27,040 ಮಂದಿ ಬಾಲಕರಿಗೆ ಮಾತ್ರ ಸ್ಥಳವಿವೆ. ಉಳಿದ 1,67,106 ಮಂದಿ ಬಾಲಕರಿಗಾಗಿ ಸುಮಾರು 4200 ಪಾಠಶಾಲೆಗಳನ್ನಾ ದರೂ ಸ್ಥಾಪಿಸಬೇಕಾಗುತ್ತದೆ. ಅಂದರೆ ವರ್ಷವೊಂದಕ್ಕೆ ಸರಾಸರಿ 13.5 ಲಕ್ಷ ರೂಪಾಯಿಗಳನ್ನಾದರೂ ಹೆಚ್ಚಾಗಿ ಒದಗಿಸಬೇಕು. ಬರಿಯ ಬಾಲಕರ ವಿದ್ಯಾಭ್ಯಾಸಕ್ಕಾಗಿಯೇ ಇಷ್ಟು ಹೆಚ್ಚು ಪಾಠಶಾಲೆಗಳು ಬೇಕಾಯಿತು. ಆದರೆ ನಮ್ಮ ಜೀವನವು ನಿಜವಾಗಿಯೂ ಉತ್ತಮವಾಗಬೇಕಾದರೆ ಬಾಲಕಿ

ಯರ ವಿದ್ಯಾಭ್ಯಾಸಕ್ಕೂ ಹೆಚ್ಚು ಗಮನವನ್ನು ಕೊಡಲೇಬೇಕು. ಒಬ್ಬ ಬಾಲಕಿಗೆ ವಿದ್ಯೆಯನ್ನು ಕಲಿಸಿದರೆ ಮುಂದಿನ ಜನಾಂಗದಲ್ಲಿ 4-5 ಮಂದಿಗೆ ವಿದ್ಯೆಯನ್ನು ಕಲಿಸಿದಂತಾಗುವುದು. ಆದುದರಿಂದ ಬಾಲಕಿಯರ ವಿದ್ಯಾಭ್ಯಾಸವು ಬಾಲಕರ ವಿದ್ಯಾಭ್ಯಾಸಕ್ಕಿಂತಲೂ ಹೆಚ್ಚು ಆವಶ್ಯಕವೆಂಬುದನ್ನು ನಾವು ಮರೆಯಬಾರದು.

ಎರಡನೆಯ ಪ್ರಶ್ನೆಗೆ ಉತ್ತರವು ದೊರೆಯಬೇಕಾದರೆ ಮೊದಲು ನಮ್ಮ ಪ್ರಾಥಮಿಕ ವಿದ್ಯಾಭ್ಯಾಸದ ಉದ್ದೇಶವೇನೆಂಬುದನ್ನು ನಿರ್ಧರಿಸಬೇಕು. ವಿದ್ಯಾಭಿಮಾನಿಗಳು ವಿದ್ಯಾಭ್ಯಾಸದ ಉದ್ದೇಶವನ್ನು ನಾನಾ ವಿಧವಾಗಿ ವರ್ಣಿಸುವರು. ಆದರೆ ಪ್ರಜಾಸತ್ತಾತ್ಮಕವಾದ ಸರಕಾರಗಳು ಬಳಕೆಗೆ ಬರುತ್ತಿರುವ ಈಗಿನ ಕಾಲದಲ್ಲಿ ಪ್ರಾಥಮಿಕ ವಿದ್ಯಾಭ್ಯಾಸದ ಉದ್ದೇಶವನ್ನು ಎರಡು ವಿಧವಾಗಿ ವಿಂಗಡಿಸಬಹುದು. (1) ಪ್ರತಿಯೊಬ್ಬ ಪ್ರಜೆಗೂ ತನ್ನ ಹಕ್ಕುಬಾಧ್ಯತೆಗಳೂ, ಕರ್ತವ್ಯಗಳೂ, ತಿಳಿಯುವಂತೆ ಮಾಡುವುದು. (2) ಪ್ರತಿಯೊಬ್ಬ ಪ್ರಜೆಯೂ ಸ್ವಂತ ವ್ಯಾಸಂಗದಿಂದ ವಿದ್ಯಾರ್ಜನೆ ಮಾಡುವುದಕ್ಕೆ ತಕ್ಕಷ್ಟು ಅಕ್ಷರಸ್ಥನಾಗುವುದು.

ಪ್ರಾಥಮಿಕ ವಿದ್ಯಾಭ್ಯಾಸದ ಈ ಧ್ಯೇಯಗಳಲ್ಲಿ ಮೊದಲನೆಯದು ನಮ್ಮ ಹಳ್ಳಿಗಳ ಪಾಠಶಾಲೆಗಳಿಂದ ಬಹು ದೂರವೆಂಬುದಕ್ಕೆ ನಿದರ್ಶನಗಳೇ ಬೇಕಿಲ್ಲ. ಬಹುದಿನಗಳಿಂದಲೂ ಈ ಪಾಠಶಾಲೆಗಳು ಸಂಖ್ಯೆಯಲ್ಲಿ ಮಾತ್ರ ವೃದ್ಧಿಯಾಗುತ್ತಿದ್ದರೂ ನಮ್ಮ ಗ್ರಾಮಪಂಚಾಯತಿಗಳು ಎಷ್ಟು ಅವ್ಯವಸ್ಥೆಯಲ್ಲಿವೆ, ಎಂಬುದನ್ನು ನೋಡಿರಿ.

ಇದನ್ನು ಬಿಟ್ಟರೆ ನಮ್ಮ ಪಾಠಶಾಲೆಗಳ ಮುಖ್ಯ ಗುರಿಯು ಜನಗಳನ್ನು ಅಕ್ಷರಸ್ಥರನ್ನಾಗಿ ಮಾಡುವುದು. ಈ ಧ್ಯೇಯವಾದರೂ ಎಷ್ಟರಮಟ್ಟಿಗೆ ಫಲಿಸಿದೆ, ಎಂಬುದನ್ನು ವಿಮರ್ಶಿಸಬೇಕು. ಅಕ್ಷರಸ್ಥರೆಷ್ಟು ಮಂದಿಯಿದ್ದಾರೆಯೆಂಬುದನ್ನು ಸೆನ್ಸಸ್ ವರದಿಯಲ್ಲಿ ಹುಡುಕುವುದೇ ಇದಕ್ಕೆ ತಕ್ಕ ಸಾಧನ.

1931 ನೆಯ ಇಸವಿಯಲ್ಲಿ ಮೈಸೂರು ಸಂಸ್ಥಾನದಲ್ಲಿದ್ದ ಪ್ರಜೆಗಳು
64,23,189 ಮಂದಿ.[5]

| | | |
|---|---|---|
| ಅಕ್ಷರಸ್ಥರಾದ ಗಂಡಸರು | 4,78,440 | ,, |
| ಹೆಂಗಸರು | 78,822 | ,, |

ಈ ಅಂಕಿಗಳೊಡನೆ 1831 ನೆಯ ಇಸವಿಯಿಂದ ಈಚೆಗೆ ಪ್ರತಿ ವರ್ಷವೂ ಸರ್ಕಾರದವರು ವಿದ್ಯಾ ಪ್ರಚಾರಕ್ಕಾಗಿ ಮಾಡುತ್ತಿರುವ ವೆಚ್ಚ ವನ್ನು ಹೋಲಿಸಿ ನೋಡಿರಿ. ವೆಚ್ಚವು ಹೆಚ್ಚುತ್ತಿದ್ದರೂ ಅದಕ್ಕನುಗುಣ ವಾದ ಪ್ರತಿಫಲವು ದೊರೆಯುತ್ತಿಲ್ಲವೆಂಬುದಕ್ಕೆ ಬೇರೆ ನಿದರ್ಶನವು ಬೇಕೆ? ಮೈಸೂರು ಸಂಸ್ಥಾನದ ಮಾತು ಅಂತಿರಲಿ; ಬ್ರಿಟಿಷ್ ಇಂಡಿಯಾ ದಲ್ಲಿಯಾದರೂ ಅಕ್ಷರಸ್ಥರು ಹೆಚ್ಚುತ್ತಿದಾರೆಯೆ? ಇತರ ದೇಶ ಗಳೊಡನೆ ನಮ್ಮ ದೇಶವನ್ನು ಹೋಲಿಸುವುದಕ್ಕಾದರೂ ನಮಗೆ ಮನ ಬರುವುದೇ? ಕೆಳಗಿನ ಅಂಕಿಗಳನ್ನು ನೋಡಿದರೆ ನಾವು ನಾಚಿ ತಲೆ ಬಾಗುವೆವು.

**ಕೆಲವು ದೇಶಗಳಲ್ಲಿರುವ ಅಕ್ಷರಸ್ಥರ ತಃಖ್ತೆ**[6]

| ದೇಶ | ಜನಸಂಖ್ಯೆ | ಅಕ್ಷರಸ್ಥರು | ಶೇಕಡ | ಇಸವಿ |
|---|---|---|---|---|
| ಇಂಡಿಯ | 3530 ಲಕ್ಷ | 280 ಲಕ್ಷ | 8 | 1931 |
| ಬ್ರಿ. ಇಂಡಿಯ | 2720 ,, | 227 ,, | 8.5 | ,, |
| ಇಂಗ್ಲೆಂಡ್ | 427 ,, | 325 ,, | 76.0 | 1921 |
| ಸಂಯುಕ್ತರಾಷ್ಟ್ರ | 1057 ,, | 790 ,, | 74.5 | 1920 |
| ಜಪಾನ್ | 507 ,, | 458 ,, | 71.7 | .... |

ಈ ತಃಖ್ತೆಯಿಂದ ವಿಶದವಾಗುವುದೇನೆಂದರ ನಮ್ಮ ನಾಡಿನಲ್ಲಿ ರುವಷ್ಟು ಮಂದಿ ಅನಕ್ಷರಸ್ಥರು ಇನ್ನಾವ ನಾಡಿನಲ್ಲಿಯೂ ಇಲ್ಲವೆಂಬುದು. ಸರ್ ಎಂ. ವಿಶ್ವೇಶ್ವರಯ್ಯನವರು "ನಮ್ಮ ದೇಶದ ಬೇಸಾಯಕ್ರಮವು ಹಿಂದೆ ಬಿದ್ದಿರುವುದಕ್ಕೆ ಮುಖ್ಯವಾದ ಕಾರಣವು ನಮ್ಮ ಜನಗಳಲ್ಲಿ ಬಹು ಮಂದಿ ಅನಕ್ಷರಸ್ಥರಾಗಿರುವುದೇ[7]" ಎಂದು ಹೇಳುವರು.

ಮೇಲ್ಕಂಡ ವಿಮರ್ಶೆಯಿಂದ ಒಂದಂಶವು ಸ್ಪಷ್ಟವಾಗುವುದು. ವಿದ್ಯಾಪ್ರಚಾರಕ್ಕಾಗಿ ಸರ್ಕಾರದವರು ಇಷ್ಟು ದಿವಸವೂ ಪಡುತ್ತಿರುವ ಶ್ರಮವು ಫಲಕಾರಿಯಾಗಿಲ್ಲ. ಪ್ರಾಥಮಿಕ ವಿದ್ಯಾಭ್ಯಾಸದ ಗುರಿಗಳಲ್ಲಿ ಯಾವುದೊಂದನ್ನೂ ನಾವು ಸಾಧಿಸಿಲ್ಲ. ಪಾಠಶಾಲೆಗಳ ಸಂಖ್ಯೆಯು ಹೆಚ್ಚ ಬಹುದು; ವಿದ್ಯಾರ್ಥಿಗಳ ಸಂಖ್ಯೆಯು ಹೆಚ್ಚಬಹುದು; ಖರ್ಚಿನ ತಃಖ್ತೆಯು ಹೆಚ್ಚಬಹುದು; ರೈತರ ಜ್ಞಾನವು ಮಾತ್ರ ವೃದ್ಧಿಯಾಗುತ್ತಾ ಇಲ್ಲ. ಈ ವಿಚಿತ್ರಪ್ರಸಂಗಕ್ಕೆ ಕಾರಣವಾದರೂ ಏನು?

## II

ಪ್ರಾಥಮಿಕ ವಿದ್ಯಾಭ್ಯಾಸವು ಫಲಕಾರಿಯಾಗದಿರುವುದಕ್ಕೆ ಅನೇಕ ಕಾರಣಗಳಿವೆ. ನಮ್ಮ ದೇಶದ ವಿದ್ಯಾಶಾಖೆಯವರು ಈ ಕೆಳಗಿನ ಕಾರಣ ಗಳನ್ನು ಸೂಚಿಸಿರುವರು.[8]

1. ಬಡತನದ ಫಲವಾಗಿ ತಾಯಿತಂದೆಗಳಿಗೆ ಮಕ್ಕಳ ವಿದ್ಯಾಭ್ಯಾಸ ದಲ್ಲಿರುವ ಔದಾಸೀನ್ಯ.

2. ಬಾಲಕರು ಕ್ರಮವಾಗಿ ಪಾಠಶಾಲೆಗೆ ಬಾರದಿರುವುದು.

3. ನಾಲ್ಕಾರು ತರಗತಿಗಳಿರುವ ಪಾಠಶಾಲೆಗಳಲ್ಲಿ ಒಬ್ಬನೇ ಉಪಾಧ್ಯಾಯನಿರುವುದು.

4. ಪಠ್ಯವಿಷಯಗಳು ಸಮರ್ಪಕವಾಗಿಲ್ಲದಿರುವುದು.

5. ಸುಶಿಕ್ಷಿತರಲ್ಲದ ಅಲ್ಪವೇತನಗಳನ್ನು ಪಡೆಯುತ್ತಿರುವ ಉಪಾ ಧ್ಯಾಯರು.

ಬ್ರಿಟಿಷ್ ಇಂಡಿಯದ ವಿದ್ಯಾಭ್ಯಾಸ ಕ್ರಮವನ್ನು ಕೂಲಂಕಷ ವಾಗಿ ವಿಮರ್ಶಿಸಿದ ಹಾರ್ಟಾಗ್ ಸಮಿತಿಯವರೂ, ವಿದ್ಯಾಪ್ರಚಾರದ ಹೆಸರಿನಲ್ಲಿ ನಡೆಯುವ ದ್ರವ್ಯನಷ್ಟವನ್ನು ಕುರಿತು ವಿಷಾದಪಟ್ಟಿರುವರು.[9] ನಾನಾ ಪ್ರಾಂತಗಳ ವಿದ್ಯಾಶಾಖೆಯವರೂ ಕೂಡ ತಮ್ಮ ವರದಿಗಳಲ್ಲಿ

ಈ ವಿಷಯವನ್ನು ಒತ್ತಿ ಒತ್ತಿ ಹೇಳುವರು. ಬಂಗಾಳಾ ಪ್ರಾಂತದ ವರದಿಯ ಹೇಳಿಕೆಯನ್ನು ನೋಡಿರಿ. "ಕೊನೆಯಪಕ್ಷ ಒಂದು ಪಾಠ ಶಾಲೆಯು ಅಲ್ಲಿಯ ವಿದ್ಯಾರ್ಥಿಗಳನ್ನು ಅಕ್ಷರಸ್ಥರನ್ನಾಗಿಯಾದರೂ ಮಾಡ ಬೇಕು; ಇಲ್ಲವಾದರೆ ಅಂತಹ ಪಾಠಶಾಲೆಗಳು ಇರಬೇಕಾದುದೇ ಇಲ್ಲ. ಆದರೆ ಬಂಗಾಳದಲ್ಲಿ ಅಕ್ಷರಸ್ಥರ ಸಂಖ್ಯೆಯು ಹೆಚ್ಚುವುದಕ್ಕೆ ಬದಲಾಗಿ ಕಡಿಮೆಯಾಗುತ್ತಿರುವುದು. 1921 ನೆಯ ಇಸವಿಯಲ್ಲಿ ಶೇಕಡ 15.9 ಮಂದಿ ಗಂಡಸರು ಅಕ್ಷರಸ್ಥರಾಗಿದ್ದರು. 1931 ರಲ್ಲಿ ಇದು ಶೇಕಡ 15.75 ಕ್ಕೆ ಇಳಿಯಿತು."[10]

ಈ ವಿಷಾದಸ್ಥಿತಿಗೆ ಬಹುಮಟ್ಟಿಗೆ ನಮ್ಮ ರೈತರ ಬಡತನವೇ ಕಾರಣವೆನ್ನಬಹುದು. ಆ ಬಡತನದ ಫಲವಾಗಿ ಅವರು ನಿರುತ್ಸಾಹಿಗಳಾ ಗಿರುವರು. ಅಲ್ಲದೆ ಬಾಲಕರನ್ನೂ ತಮ್ಮ ಹೊಲಗದ್ದೆಗಳಲ್ಲಿ ಕೆಲಸ ಮಾಡಲು ಕರೆದುಕೊಂಡು ಹೋಗುವರು. ಬಡತನದ ಫಲವಾಗಿ ಬಾಲಕ ರಿಗೆ ಸರಿಯಾದ ಆಹಾರವೂ, ಶುಚಿಯಾದ ಬಟ್ಟೆಗಳೂ ದೊರೆಯದಿರುವುದ ರಿಂದ ಬಾಲಕರು ಪದೇಪದೇ ರೋಗಪೀಡಿತರಾಗುವರು. ತತ್ಫಲವಾಗಿ ಬಾಲಕರ ಹೆಸರನ್ನು ಮಾತ್ರ ಪಾಠಶಾಲೆಯ ರಿಜಸ್ಟರಿನಲ್ಲಿ ನೋಡಬಹುದು. ಅವರನ್ನು ಕಣ್ಣಾರ ನೋಡಬೇಕಾದರೆ, ಅವರ ಮನೆಗೇ ಹೋಗಬೇಕು.

**ಬ್ರಿಟಿಷ್ ಇಂಡಿಯದ ಪ್ರೈಮರಿ ಪಾಠಶಾಲೆಗಳಲ್ಲಿ ಬಾಲ ಕರ ಸರಾಸರಿ ಹಾಜರಾತಿಯನ್ನು ತೋರಿಸುವ ಈ ಅಂಕಿಗಳನ್ನು ನೋಡಿರಿ.**[11]

| ಇಸವಿ | | ಶೇಕಡ |
|---|---|---|
| 1922 | .... | 76.1 |
| 1927 | .... | 77.8 |
| 1932 | .... | 79.1 |

ಬಾಲಕರು ಕ್ರಮವಾಗಿ ಪಾಠಶಾಲೆಗೆ ಬಾರದಿರುವುದು ನಮ್ಮ ಗ್ರಾಮ ಜೀವನದಲ್ಲಿರುವ ಒಂದು ಮುಖ್ಯವಾದಕೊರತೆ. ಇದರ ಜೊತೆಗೆ ನಮ್ಮ ಮನನೋಯಿಸುವ ಇನ್ನೊಂದು ಕೊರತೆಯಿದೆ. ಪ್ರಾಥಮಿಕಶಾಲೆಗಳಲ್ಲಿ ಮೊದಲನೆಯ ತರಗತಿಗೆ ಸೇರುವ ಸಾವಿರಾರು ಬಾಲಕರಲ್ಲಿ ಬಹುಮಂದಿ ಪ್ರಾಥಮಿಕ ವಿದ್ಯಾಭ್ಯಾಸವನ್ನೂ ಮುಗಿಸುವುದಿಲ್ಲ. ಮೈಸೂರು ಸೀಮೆಯಲ್ಲಿ ಕೊನೆಯ ಪಕ್ಷ ಪ್ರೈಮರಿ ನಾಲ್ಕು ತರಗತಿಗಳಲ್ಲಿಯೂ ಪೂರ್ತಿಯಾಗಿ ವಿದ್ಯಾರ್ಜನೆಮಾಡಿದ ವಿದ್ಯಾರ್ಥಿಯು ಅಕ್ಷರಸ್ಥನಾಗುವನೆಂಬ ನಂಬುಗೆ ಯುಂಟು. ಆದರೆ ಬಹುಮಂದಿ ಒಂದೆರಡು ವರ್ಷ ಪಾಠಶಾಲೆಗೆ ಅಕ್ರಮ ವಾಗಿ ಬಂದು ಅನಂತರ ಪಾಠಶಾಲೆಯನ್ನು ಬಿಡುವರು. ಈ ಕೆಳಗಿನ ಅಂಕಿಗಳನ್ನು ಪರೀಕ್ಷಿಸಿರಿ.[12] 1922-23 ರಲ್ಲಿ ಬ್ರಿಟಿಷ್ ಇಂಡಿಯದ ಪ್ರೈಮರಿ ಒಂದನೆಯ ತರಗತಿಗೆ ಸೇರಿದ ಬಾಲಕರಲ್ಲಿ 1925-26 ರಲ್ಲಿ ಪ್ರೈಮರಿ ನಾಲ್ಕನೆಯ ತರಗತಿಗೆ ಸೇರಿದವರು ಶೇಕಡ 19 ಮಂದಿ ಮಾತ್ರ; 26-27 ನೆಯ ಇಸವಿಯ 5 ನೆಯ ತರಗತಿಗೆ ಸೇರಿದವರು ಶೇಕಡ 11 ಮಾತ್ರ; ಅಂದರೆ 1922-23 ನೆಯ ಇಸವಿಯಲ್ಲಿ ಪಾಠಶಾಲೆಗೆ ಮೊದಲು ಸೇರಿದ ನೂರು ಬಾಲಕರಲ್ಲಿ 11 ಜನ ಮಾತ್ರ ಪ್ರೈಮರಿ ವಿದ್ಯಾಭ್ಯಾಸವನ್ನು ಮುಗಿಸಿದರು. ಬಾಲಕಿಯರ ಲೆಕ್ಕವು ಇನ್ನೂ ಶೋಚ ನೀಯವಾಗಿದೆ.[13] 1926-27 ನೆಯ ಇಸವಿಯಲ್ಲಿ ವಿದ್ಯಾಭ್ಯಾಸಕ್ಕೆ ಪ್ರಾರಂ ಭಮಾಡಿದ ಬಾಲಕಿಯರಲ್ಲಿ ಶೇಕಡ 10 ಮಂದಿ ಮಾತ್ರ 30-31 ನೆಯ ಇಸವಿಯ 4 ನೆಯ ತರಗತಿಯಲ್ಲಿದ್ದರು. ಇವರಲ್ಲಿ 6 ಮಂದಿ ಮಾತ್ರ 31-32 ನೆಯ ಇಸವಿಯ 5 ನೆಯ ತರಗತಿಯಲ್ಲಿದ್ದರು. ಮೈಸೂರು ದೇಶ ದಲ್ಲಿಯೂ ಕೂಡ ಇದೇ ರೀತಿಯಲ್ಲಿ ನಮ್ಮ ಸರಕಾರದವರು ಖರ್ಚು ಮಾಡುತ್ತಿರುವ ಹಣವು ವ್ಯರ್ಥವಾಗುತ್ತಿರುವುದು. ಕಳೆದ ದಶವಾರ್ಷಿಕದ ವರದಿಯಿಂದ ಆರಿಸಿರುವ ಈ ಅಂಕಿಗಳನ್ನು ನೋಡಿರಿ.[14]

| | | | | |
|---|---|---|---|---|
| 1927-28 | .... | 1,02,003 | ಒಂದನೆಯ | ತರಗತಿ |
| 28-29 | .... | 40,012 | ಎರಡನೆಯ | ,, |
| 29-30 | .... | 32,234 | ಮೂರನೆಯ | ,, |
| 30-31 | .... | 22,456 | ನಾಲ್ಕನೆಯ | ,, |
| 31-32 | .... | 12,444 | ಐದನೆಯ | ,, |

1927-28 ರಲ್ಲಿ ಒಂದನೆಯ ತರಗತಿಗೆ ಸೇರಿದ 1,02,003 ಬಾಲಕರಲ್ಲಿ 1930-31 ನೆಯ ಇಸವಿಯಲ್ಲಿ ನಾಲ್ಕನೆಯ ತರಗತಿಗೆ ಬಂದವರು 22,456 ; ಅಂದರೆ ಹಿಂದುಳಿದವರು ಶೇಕಡ 78 ಮಂದಿ ಎಂಬುದು ವಿದಿತವಾಗುವುದು.

ಹೀಗೆ ಒಂದು ತರಗತಿಯಿಂದ ಇನ್ನೊಂದು ತರಗತಿಗೆ ಹೋಗುವ ವೇಳೆಗೆ ಬಹು ಮಂದಿ ಬಾಲಕರು ಹಿಂದುಳಿಯುವರು ; ಇದೇ ರೀತಿಯಲ್ಲಿ ಎಷ್ಟೋಮಂದಿ ಮುಂದಿನ ತರಗತಿಗೆ ಹೋಗದೆ ಒಂದೇ ತರಗತಿಯಲ್ಲಿ ನಾಲ್ಕಾರು ವರ್ಷಗಳನ್ನು ಕಳೆಯುವರು. ಬರಿಯ ಅಕ್ಷರಾಭ್ಯಾಸ ಮಾಡುವುದಕ್ಕೇ ಹಲವು ವರ್ಷಗಳಾಗುವಂತಿದ್ದರೆ ಅಂತಹ ವಿದ್ಯಾಭ್ಯಾಸದಲ್ಲಿ ರೈತರಿಗೆ ಉತ್ಸಾಹವಾದರೂ ಹೇಗೆ ಬರಬೇಕು ?

ಕ್ರಮವಾಗಿ ಪಾಠಶಾಲೆಗೆ ಬಂದು ನಾಲ್ಕು ವರ್ಷಗಳನ್ನು ಪಾಠಶಾಲೆಯಲ್ಲಿ ಕಳೆದು, ಕೊನೆಗೆ ಪಾಠಶಾಲೆಯನ್ನು ಬಿಡುವವರ ಸ್ಥಿತಿಯನ್ನು ಸ್ವಲ್ಪ ಪರೀಕ್ಷಿಸೋಣ. ಪ್ರಾಯಃ ಅವರಿಗೆ ಓದುವುದೂ, ಬರೆಯುವುದೂ ಅಭ್ಯಾಸವಾಗಿರಬಹುದೆಂದು ತಿಳಿಯೋಣ. ಆದರೆ ಪಾಠಶಾಲೆಯನ್ನು ಬಿಟ್ಟಂದಿನಿಂದ ಅವರಿಗೆ ತಮ್ಮ ಅಭ್ಯಾಸವನ್ನು ಬಳಕೆಯಲ್ಲಿಟ್ಟುಕೊಳ್ಳಲು ಅವಕಾಶವಾದರೂ ಉಂಟೆ ? ಹಳ್ಳಿಗಳಲ್ಲಿ ಓದುವ ಪುಸ್ತಕಗಳಾಗಲೀ, ವೃತ್ತಪತ್ರಿಕೆಗಳಾಗಲಿ ದೊರೆಯುವುದಿಲ್ಲ. ಅಲ್ಪಸ್ವಲ್ಪ ಕಲಿತ ನಮ್ಮ ಮಿತ್ರರು, ಆ ಅಭ್ಯಾಸದ ಬೆಳವಳಿಕೆಗೆ ಅವಕಾಶವಿಲ್ಲದೆ ಕೊನೆಗೆ ಅಕ್ಷರಾಭ್ಯಾಸವನ್ನು ಮಾಡದಿರುವ ರೈತರ ತರಗತಿಗೇ ಇಳಿಯಬೇಕಾಗುವುದು.

ಈ ಸಂದರ್ಭದಲ್ಲಿ ಪಾಶ್ಚಾತ್ಯದೇಶಗಳಿಗೂ ನಮಗೂ ಇರುವ ತಾರತಮ್ಯ ವನ್ನು ನೋಡಿರಿ. ಇಂಗ್ಲೆಂಡಿನಲ್ಲಿ "ಸರ್ಕ್ಯುಲೇಟಿಂಗ್ ಲೈಬ್ರೆರಿ" ಗಳ ವಿಷಯವನ್ನು ಚರ್ಚಿಸುತ್ತಾ ಆರ್ಥರ್‌ವಾಫ್ ಎಂಬ ಪ್ರಸಿದ್ಧ ಪುಸ್ತಕ ವ್ಯಾಪಾರಿಯು "ಇಂದು ಪ್ರತಿಹಳ್ಳಿಯಲ್ಲಿಯೂ ಪುಸ್ತಕಗಳನ್ನು ಎರವಾಗಿ ತೆಗೆದುಕೊಳ್ಳಲು ಅನುಕೂಲಗಳಿವೆ. ಆದುದರಿಂದ ರೈಲಿನಲ್ಲಾಗಲಿ, ಬಸ್ಸಿನಲ್ಲಾಗಲಿ ಸಂಚಾರಮಾಡುವಾಗ ಯಾವ ಕಡೆಗೆ ನೋಡಿದರೂ ಪ್ರತಿಯೊಬ್ಬ ಪ್ರಯಾಣಿಕನ ಕೈಯಲ್ಲಿಯೂ ಯಾವುದಾದರೊಂದು ಪುಸ್ತಕವು ಇದ್ದೇ ಇರುವುದು." ಎಂಬುದಾಗಿ ಹೇಳಿರುವನು.[15] ಅಮೆರಿಕದ ಸಂಯುಕ್ತರಾಷ್ಟ್ರದ ಹಳ್ಳಿಗಳಲ್ಲಿ "ಜಮೀನುದಾರರಲ್ಲಿ ಒಂಭತ್ತಕ್ಕೆ ಒಬ್ಬ ನಲ್ಲಿಯೂ, ರೈತರಲ್ಲಿ ಏಳಕ್ಕೆ ಒಬ್ಬನಲ್ಲಿಯೂ, ಕೂಲಿಗಾರರಲ್ಲಿ ಐದಕ್ಕೆ ಒಬ್ಬನಲ್ಲಿಯೂ ಓದುವ ಪುಸ್ತಕಗಳಿಲ್ಲ." ಎಂಬುದಾಗಿ ನ್ಯಾಷನಲ್ ಚೈಲ್ಡ್ ಲೇಬರ್ ಸಮಿತಿಯವರು ಬರೆಯುವರು.[16] ನಮ್ಮ ಹಳ್ಳಿಗಳಲ್ಲಿ ನೂರಕ್ಕೆ ಒಬ್ಬನಲ್ಲಿಯೂ ಪುಸ್ತಕಗಳಿಲ್ಲವೆಂಬುದಾಗಿ ನಿಸ್ಸಂಕೋಚವಾಗಿ ಹೇಳ ಬಹುದು. ಆದುವರಿಂದ ತಾವು ಕಲಿತುದನ್ನು ಅಭಿವೃದ್ಧಿಪಡಿಸಿಕೊಳ್ಳು ವುದಿರಲಿ; ಬಳಕೆಯಲ್ಲಿಟ್ಟುಕೊಳ್ಳುವುದೇ ಅನೇಕರಿಗೆ ಅಸಾಧ್ಯವಾಗಿದೆ.

ಮೇಲ್ಕಂಡ ವಿಮರ್ಶೆಯ ಫಲವಾಗಿ ನಮಗೆ ತಿಳಿದುಬರುವುದೇನೆಂ ದರೆ: ನಮ್ಮ ದೇಶದಲ್ಲಿ ಪ್ರಾಥಮಿಕ ವಿದ್ಯಾಭ್ಯಾಸಕ್ಕಾಗಿ ಹೆಚ್ಚು ಹಣವು ವೆಚ್ಚವಾಗುತ್ತಿದ್ದರೂ ಅದಕ್ಕೆ ತಕ್ಕ ಪ್ರತಿಫಲವನ್ನು ನಾವು ಪಡೆಯುತ್ತಿಲ್ಲ, ಎಂಬುದು. ಇದಕ್ಕೆ ಕಾರಣವನ್ನು ಹಿಂದೆಯೇ ಸೂಚಿಸಿರುವೆವು. ಸಮಾಜ ನೇತೃಗಳು ಆ ಕಾರಣಗಳನ್ನು ಕೂಲಂಕಷವಾಗಿ ವಿಮರ್ಶಿಸಿ, ನಮ್ಮ ಪಾಠ ಶಾಲೆಗಳು ತಮ್ಮ ಕರ್ತವ್ಯವನ್ನು ಸರಿಯಾಗಿ ಮಾಡುವಂತೆ ಏರ್ಪಡಿಸುವ ವರೆಗೂ ನಮ್ಮ ಗ್ರಾಮಜೀವನವು ಉತ್ತಮವಾಗಲಾರದು.

## III

ಈ ಮಧ್ಯೆ ನಮ್ಮ ಪಾಠಶಾಲೆಗಳಿಂದ ಇನ್ನೂ ಹೆಚ್ಚು ಕೆಲಸವಾಗಬೇಕೆಂಬುದಾಗಿ ಅನೇಕರು ಅಭಿಪ್ರಾಯಪಡುತ್ತಿರುವರು. ಹಲವು ವರ್ಷಗಳಿಂದೀಚೆಗೆ ನಮ್ಮ ಗ್ರಾಮಜೀವನದ ಶೋಚನೀಯಸ್ಥಿತಿಯು ನಮ್ಮ ನಾಯಕರ ಗಮನಕ್ಕೆ ಬೀಳುತ್ತಿರುವುದು ಸರಿಯಷ್ಟೆ. ಇಂದು ಯಾರು ಗ್ರಾಮಪುನರುದ್ಧಾರದ ವಿಷಯವನ್ನು ಮಾತನಾಡಲಿ, ಅಂತಹ ಉದ್ಧಾರದ ಕಾರ್ಯಕ್ರಮದಲ್ಲಿ ಹಳ್ಳಿಯ ಪಾಠಶಾಲೆಗಳಿಗೆ ಅಗ್ರಸ್ಥಾನವು ಕೊಡಲ್ಪಡುವುದರಲ್ಲಿ ಸಂದೇಹವಿಲ್ಲ. ಕೆಲವುವರ್ಷಗಳ ಹಿಂದೆ ಬೊಂಬಾಯಿನ ಗವರ್ನರಾಗಿದ್ದ ಸರ್ ಫ್ರೆಡರಿಕ್ ಸೈಕ್ಸ್‌ರವರ ಅಧ್ಯಕ್ಷತೆಯಲ್ಲಿ ಸೇರಿದ್ದ ಗ್ರಾಮ ಪುನರುದ್ಧಾರದ ಕಾಂಫರೆನ್ಸಿನ ಮುಂದೆ ಸಾಂಗ್ಲಿ ಮಹಾರಾಜರು ಹಳ್ಳಿಯ ಸ್ಕೂಲುಗಳ ಸಹಾಯವಿಲ್ಲದೆ ಹಳ್ಳಿಗಳನ್ನು ಉದ್ಧಾರಮಾಡಲಾಗುವುದಿಲ್ಲವೆಂದರು. ರಾಯಲ್ ಅಗ್ರಿಕಲ್ಚರಲ್ ಕಮಿಷನ್ನಿನವರೂ ಗ್ರಾಮೋದ್ಧಾರಕ್ಕೆ ತಾವು ಮಾಡಿರುವ ಸಲಹೆಗಳಲ್ಲಿ ವಿದ್ಯಾಭ್ಯಾಸದ ವಿಷಯಕ್ಕೆ ಹೆಚ್ಚು ಗಮನವನ್ನು ಕೊಟ್ಟಿರುವರು. ಮೈಸೂರು ದೇಶದ ಗ್ರಾಮಜೀವನದ ಗುಟ್ಟನ್ನು ಚೆನ್ನಾಗಿ ಅರಿತವರೂ, ಅರ್ಥಶಾಸ್ತ್ರನಿಪುಣರೂ ಆದ ಶ್ರೀಮಾನ್ ಎ. ಎಸ್. ಸುಬ್ಬರಾಯರು “ ಹಳ್ಳಿ, ಹಳ್ಳಿಯ ಪಾಠಶಾಲೆ, ಹಳ್ಳಿಯ ಉಪಾಧ್ಯಾಯರು ಈ ಮೂರೂ ನಮ್ಮ ಸಂಸ್ಕೃತಿಯ ಮೂರು ಸ್ತಂಭಗಳು; ಎಂಬುದಾಗಿ ತಮ್ಮ ಅಮೋಘವಾದ ಭಾಷಣವೊಂದರಲ್ಲಿ ಹೇಳಿರುವರು.[17] ಇವರೆಲ್ಲರ ಉದ್ದೇಶವಾದರೂ ಏನೆಂದರೆ, ಹಳ್ಳಿಯ ಸ್ಕೂಲುಗಳು ಬಾಲಕರಿಗೆ ಓದುಬರಹ ಲೆಕ್ಕ ಇವುಗಳನ್ನು ಮಾತ್ರ ಕಲಿಸಿದರೆ ಸಾಲದು. ಪ್ರಾಥಮಿಕ ವಿದ್ಯಾಭ್ಯಾಸದ ಧ್ಯೇಯವು ಇನ್ನೂ ವಿಶಾಲವಾಗಬೇಕು. ಗ್ರಾಮಪುನರುದ್ಧಾರಕಾರ್ಯದಲ್ಲಿ ಈ ಪಾಠಶಾಲೆಗಳು ಕೇಂದ್ರಗಳಾಗಿರಬೇಕು. ಇವು ಬಾಲಕಬಾಲಕಿಯರ ಪಾಠಶಾಲೆಗಳಾಗಿ ಮಾತ್ರವೇ ಅಲ್ಲದೆ ನಿಜವಾಗಿಯೂ ಹಳ್ಳಿಯ ಜನಗಳಿಗೆಲ್ಲ ಸಕಲ ವಿಧವಾದ ಕಾರ್ಯಗಳಿಗೂ ನೆರವಾಗುವ ಸಂಸ್ಥೆಗಳಾಗಬೇಕು.

ಈ ಉದ್ದೇಶವು ಅಪ್ರಕೃತವೆಂದು ಹೇಳಲಾಗುವುದಿಲ್ಲ. ಏಕೆಂದರೆ ಪುರಾತನಕಾಲದಿಂದಲೂ ನಮ್ಮ ಗ್ರಾಮಜೀವನದಲ್ಲಿ ಹಳ್ಳಿಯ ಉಪಾಧ್ಯಾಯರು ಮುಂದಾಳುಗಳು. ಹಳ್ಳಿಯ ಪಾಠಶಾಲೆಗಳೇ ಗ್ರಾಮದಲ್ಲಿ ಬೆಳಕನ್ನು ಹರಡುವ ದೀಪಗಳಾಗಿದ್ದುವು. ನಮ್ಮ ಸಂಸ್ಕೃತಿಯು ಹುಟ್ಟಿದುದೂ, ಬೆಳೆದುದೂ ನಮ್ಮ ಹಳ್ಳಿಯ ಪಾಠಶಾಲೆಗಳಲ್ಲಿ; ಆಶ್ರಮಗಳಲ್ಲಿ. ಆದುದರಿಂದಲೇ ನಮ್ಮ ಗ್ರಾಮಜೀವನದಲ್ಲಿ ಹಳ್ಳಿಯ ಉಪಾಧ್ಯಾಯರಿಗೆ ಮಾನ್ಯಸ್ಥಾನವಿದ್ದುದು.

ಇತ್ತೀಚೆಗೆ ಪಾಶ್ಚಾತ್ಯದೇಶಗಳಲ್ಲಿಯೂ ಗ್ರಾಮಪಾಠಶಾಲೆಗಳಿಂದ ಹೆಚ್ಚು ಹೆಚ್ಚು ಕೆಲಸವನ್ನು ಅಪೇಕ್ಷಿಸುತ್ತಿರುವರು. ಡೆನ್ಮಾರ್ಕ್ ದೇಶದಲ್ಲಿ ಗ್ರಾಮಜೀವನವು ಅಷ್ಟು ಉತ್ತಮವಾಗಿರುವುದಕ್ಕೆ ಅಲ್ಲಿಯ ಪಾಠಶಾಲೆಗಳೇ ಕಾರಣವೆಂಬುದಾಗಿ ಒಬ್ಬ ಮಹನೀಯರು ಹೇಳಿರುವರು.[18] ಪಾಠಶಾಲೆಗಳ ಕೇಂದ್ರೀಕರಣವು (consolidation) ಬೆಳೆದಂತೆಲ್ಲ ಅಂತಹ ಪಾಠಶಾಲೆಗಳು ಗ್ರಾಮಜೀವನದ ಕೇಂದ್ರಗಳಾಗಬೇಕೆಂಬ ಆಕಾಂಕ್ಷೆಯು ವೃದ್ಧಿಯಾಗುತ್ತಿರುವುದು. "ಪಾಠಶಾಲೆಯೇ ಗ್ರಾಮಜೀವನದ ಸಮಸ್ಯೆಯ ಕೇಂದ್ರವೆಂಬುದನ್ನು ಅನುಮಾನವಿಲ್ಲದೆ ಹೇಳಬಹುದು. ಹಳ್ಳಿಯ ಜೀವನ, ಹಳ್ಳಿಯ ನಡತೆ, ಹಳ್ಳಿಯ ವಿಹಾರ, ಹಳ್ಳಿಯ ಭಾವನೆ–ಇವುಗಳಿಗೆಲ್ಲ ಹಳ್ಳಿಯ ಪಾಠಶಾಲೆಯೂ, ಹಳ್ಳಿಯ ಉಪಾಧ್ಯಾಯನೂ ಕೇಂದ್ರವಾಗಿರಬೇಕು. ಅಂದರೆ ಉಪಾಧ್ಯಾಯನ ನೇತೃತ್ವದಲ್ಲಿ ಹಳ್ಳಿಯ ಪಾಠಶಾಲೆಗಳು ಗ್ರಾಮಜೀವನಕ್ಕೆ ಅನ್ವಯವಾಗುವ ಸಕಲ ವಿಷಯಗಳಲ್ಲಿಯೂ ಭಾಗವಹಿಸಬೇಕು." ಎಂಬುದಾಗಿ ಜೋಸಫ್ ಕೆನಡಿಯು ಹೇಳುವನು.[19]

ಪ್ರಾಯಃ ಹಳ್ಳಿಯ ಪಾಠಶಾಲೆಗಳಿಗೆ ಮೆಕ್ಸಿಕೋ ದೇಶದಲ್ಲಿ ದೊರೆತಿರುವ ಮರ್ಯಾದೆಯು ಇನ್ನೆಲ್ಲಿಯೂ ದೊರೆತಿಲ್ಲವೆನ್ನಬಹುದು. ಅಲ್ಲಿಯ ಫೆಡರಲ್ ಸರ್ಕಾರದವರು "ಡೈರೆಕ್ಟರ್ ಆಫ್ ರೂರಲ್ ಎಜ್ಯುಕೇಷನ್" ಎಂಬ ಅಧಿಕಾರಿಯನ್ನು ನೇಮಿಸಿ ಆ ದೇಶದ ಗ್ರಾಮಪುನರುಜ್ಜೀವನಕಾರ್ಯವೆಲ್ಲವೂ

ಅಲ್ಲಿಯ ಪಾಠಶಾಲೆಗಳ ಮೂಲಕವೇ ನಡೆಯುವಂತೆ ಮಾಡಿರುವರು. ಅಲ್ಲಿಯ ಪಾಠಶಾಲೆಗಳನ್ನು "House of the people" ಎಂಬುದಾಗಿಯೇ ಕರೆಯುವರು.[20] ಅಲ್ಲಿಯ ಪಾಠಶಾಲೆಗಳ ಉದ್ದೇಶವನ್ನು ಕುರಿತು ಒಬ್ಬ ಅಧಿಕಾರಿಯು ಈ ಬಗೆಯಲ್ಲಿ ಹೇಳುವನು. "ನಮ್ಮ ಉದ್ದೇಶವು ದ್ವಿಮುಖವಾದುದು. ಮೊದಲು ಇಂದಿನ ಜನಾಂಗದವರ ಜೀವನವನ್ನು ಉತ್ತಮವಾದುದನ್ನಾಗಿಯೂ, ಕ್ಲೇಶರಹಿತವಾದುದನ್ನಾಗಿಯೂ ಮಾಡುವುದು; ಅನಂತರ ಮುಂದಿನ ಜನಾಂಗದವರಿಗೆ ಹೆಚ್ಚು ಸುಖವೂ ನ್ಯಾಯವೂ ಆಗಿರುವ ಜೀವನವನ್ನು ಕಲ್ಪಿಸುವುದು. ಮೆಕ್ಸಿಕೋ ದೇಶದ ಹಳ್ಳಿಗಳು ಒಂದು ತೋಟದಂತೆ ಅಥವಾ ಮಿರುಮಿರುಗುವ ಕಿರುತಾರಗೆಗಳಿಂದಲಂಕೃತವಾದ ನಭೋಮಂಡಲದಂತೆ ಸುಂದರವಾಗುವುದರಲ್ಲಿ ಸಂದೇಹವೇ ಇಲ್ಲ."

ಈ ಭಾವನೆಯಲ್ಲಿ ಎರಡು ಮೂರು ತತ್ತ್ವಗಳು ಅಡಕವಾಗಿರುವುವು.

1. ಹಳ್ಳಿಯ ಪಾಠಶಾಲೆಗಳ ಮುಖ್ಯ ಗುರಿಯು ಹಳ್ಳಿಯ ಬಾಲಕಬಾಲಕಿಯರ ಬೆಳವಳಿಕೆ.

2. ನೂತನ ವಿದ್ಯಾತತ್ತ್ವವನ್ನನುಸರಿಸಿ ಆ ಮಕ್ಕಳ ಬೆಳವಳಿಕೆಯು ಅವರ ಸನ್ನಿವೇಶವನ್ನು ಅನುಸರಿಸಿರಬೇಕು.

3. ಈಗ ನಮ್ಮ ಹಳ್ಳಿಗಳಲ್ಲಿರುವಂತೆ ಈ ಸನ್ನಿವೇಶವು ಎಂದಿನವರೆಗೆ ಅಂಧಕಾರಮಯವಾಗಿರುವುದೋ ಅಂದಿನವರಿಗೆ ಬಾಲಕ ಬಾಲಕಿಯರ ವಿದ್ಯಾಭ್ಯಾಸವು ನಿಷ್ಪ್ರಯೋಜಕವಾಗುವುದು ಮತ್ತು ಅಸಾಧ್ಯವಾಗುವುದು.

4. ಇಂದಿನ ಜನಾಂಗದವರ ಬೆಳವಳಿಕೆಯೂ ಸುಖವೂ ಮುಂದಿನ ಜನಾಂಗಗಳ ಬೆಳವಳಿಕೆಯು ಮತ್ತು ಸುಖದಷ್ಟೇ ಪ್ರಾಮುಖ್ಯತೆಯನ್ನು

ಪಡೆದಿರುವುದು. ಆದುದರಿಂದ ಯಾವ ದೃಷ್ಟಿಯಿಂದ ನೋಡಿದರೂ ಹಳ್ಳಿಯ ಪಾಠಶಾಲೆಗಳು ಹಳ್ಳಿಯ ಕೇಂದ್ರಗಳಾಗಲೇ ಬೇಕು. **ಬ್ರೇನ್** ಎಂಬ ಮಹನೀಯನು ಹೇಳುವಂತೆ ಹಳ್ಳಿಯ ಭವಿಷ್ಯವು ಹಳ್ಳಿಯ ಉಪಾಧ್ಯಾಯನ ಕೈಯಲ್ಲಿದೆ.

ಮೇಲ್ಕಂಡ ತತ್ತ್ವವನ್ನು ನಾವು ಅಂಗೀಕರಿಸುವುದಾದರೆ ಹಳ್ಳಿಯ ಪಾಠಶಾಲೆಗಳು ಯಾವ ರೀತಿಯಲ್ಲಿ ರೈತರಿಗೆ ನೆರವಾಗಬಹುದೆಂಬುದನ್ನು ವಿಮರ್ಶಿಸುವ.

ಮೊದಲು ಪಾಠಶಾಲೆಯು ತನ್ನ ಪ್ರಥಮಕರ್ತವ್ಯವಾದ ಮಕ್ಕಳ ವಿದ್ಯಾಭ್ಯಾಸದ ಕಡೆಗೆ ಗಮನವನ್ನು ಕೊಡಬೇಕು. ಮಕ್ಕಳಿಗೆ ಬರಿಯ ಓದುಬರಹವನ್ನು ಕಲಿಸಿದರೆ ಸಾಲದು. ಮಕ್ಕಳು ಮುಂದಿನ ಹಳ್ಳಿಗಳನ್ನು ಇಂದಿಗಿಂತ ಉತ್ತಮಗೊಳಿಸಲು ಶಕ್ತರಾಗುವಂತೆ ಶಿಕ್ಷಿಸ ಬೇಕು. ಈ ಸಮಸ್ಯೆಯ ಅರ್ಥವೇನೆಂದರೆ ಬೋಧನಕ್ರಮವು ಈಗಿರುವುದ ಕ್ಕಿಂತ ತೀರ ಬದಲಾವಣೆಯನ್ನು ಹೊಂದಬೇಕು. ಚಿಕ್ಕಂದಿನಿಂದಲೇ ಮಕ್ಕಳ ದೃಷ್ಟಿಯು ಗ್ರಾಮಜೀವನದ ಮೇಲೆ ಬೀಳುವಂತೆ ಮಾಡಿ, ಅಲ್ಲಿಯ ಕಷ್ಟಗಳನ್ನೂ ಸೌಂದರ್ಯವನ್ನೂ ಅವರು ಮನನಮಾಡುವಷ್ಟು ಶಕ್ತರಾಗಬೇಕು. ಅಲ್ಲದೆ ಹಳ್ಳಿಯ ಮಕ್ಕಳು ಶುಚಿಯಾದ ಬಟ್ಟೆಯನ್ನು ಹಾಕುವಂತೆಯೂ, ಶುಚಿಯಾದ ಜೀವನಕ್ರಮವನ್ನು ಅನುಸರಿಸು ವಂತೆಯೂ, ಆರೋಗ್ಯಕರವಾದ ಆಹಾರವನ್ನು ತೆಗೆದುಕೊಳ್ಳುವಂತೆಯೂ ಶಿಕ್ಷಿತರಾಗಬೇಕು. ಆಟಪಾಟಗಳು ಬೆಳೆಯಬೇಕು. ಎಲ್ಲ ವಿಧದಲ್ಲಿಯೂ ಮಕ್ಕಳ ಆರೋಗ್ಯವು ಉತ್ತಮವಾಗಬೇಕು. ಆದರೆ ಈ ಕೆಲಸದಲ್ಲಿ ಎರಡು ವಿಧವಾದ ಪ್ರತಿಬಂಧಕಗಳಿವೆ. ಮೊದಲನೆಯದಾಗಿ ಮಕ್ಕಳ ಮನೆಯ ಸನ್ನಿವೇಶವು ಇದಕ್ಕೆ ವ್ಯತಿರಿಕ್ತವಾಗಿರುವುದು. ಎರಡನೆಯದಾಗಿ ನಮ್ಮ ಹಳ್ಳಿಯ ಪಾಠಶಾಲೆಗಳಾಗಲಿ, ಹಲವು ಹಳ್ಳಿಯ ಉಪಾಧ್ಯಾಯ ರಾಗಲಿ ಶುಚಿತ್ವದಲ್ಲಿ ಆದರ್ಶಮಾರ್ಗವನ್ನು ತೋರಿಸಬಲ್ಲವರಾಗಿಲ್ಲ.

ಉಪದೇಶಕ್ಕಿಂತಲೂ ಉದಾಹರಣೆಯು ಮೇಲೆಂಬುದನ್ನು ನಾವು ಮರೆಯಬಾರದು.

ಗ್ರಾಮಜೀವನದಲ್ಲಿ ಪಾಠಶಾಲೆಗಳು ಮಾಡಬಹುದಾದ ಎರಡನೆಯ ವಿಧವಾದ ಕೆಲಸವು ಗ್ರಾಮಸ್ಥರಿಗೆ ಅನ್ವಯವಾಗುವುದು. ಮೊದಲು, ಮನಸ್ಸುಮಾಡಿದರೆ ಗ್ರಾಮಜೀವನವನ್ನು ಉತ್ತಮಪಡಿಸುವುದು ಸಾಧ್ಯವೆಂಬ ಭಾವನೆಯು ಗ್ರಾಮಸ್ಥರಿಗೆ ಬರಬೇಕು. ಅಲ್ಲದೆ ಗ್ರಾಮದ ಪಾಠಶಾಲೆಯ ಕೆಲಸವು ಗುಮಾಸ್ತರನ್ನು ತಯಾರ್ಮಾಡುವುದಲ್ಲ; ಆರೋಗ್ಯವಂತರಾದ ಮತ್ತು ಬುದ್ಧಿವಂತರಾದ ಹಳ್ಳಿಯ ಜನಗಳನ್ನು ತಯಾರ್ಮಾಡುವುದೆಂಬುದು ಜನಗಳಿಗೆ ಮನದಟ್ಟಬೇಕು. ಕಷ್ಟಪಟ್ಟು ದುಡಿದು, ಸಾಯಂಕಾಲ ವಿರಾಮವಾಗಿ ಸಿನಿಮಾಕ್ಕೋ, ಪಾರ್ಕಿಗೋ, ಕ್ಲಬ್ಬಿಗೊ ಹೇಗೆ ನಗರವಾಸಿಗಳು ಹೋಗುವರೋ ಹಾಗೆಯೇ ವಿರಾಮಕಾಲವನ್ನು ಹಳ್ಳಿಯವರು ಪಾಠಶಾಲೆಯಲ್ಲಿ ಕಳೆಯುವಂತಾಗಬೇಕು. ಉಪಾಧ್ಯಾಯರಲ್ಲಿ ಜೀವಕಳೆಯಿದ್ದರೆ ಅವರು ಇದಕ್ಕೆ ಅನೇಕ ಉಪಾಯಗಳನ್ನು ಹುಡುಕಬಹುದು. ಉದಾಹರಣೆ—ಪಾಠಶಾಲೆಗಳಲ್ಲಿ ಉತ್ತಮವಾದ ಚರ್ಚಾಸಂಘಗಳನ್ನು ಏರ್ಪಡಿಸಿ ಹಳ್ಳಿಯ ಜನಗಳು ಭಾಗವಹಿಸುವಂತೆ ಏರ್ಪಡಿಸಬಹುದು. ಉತ್ತಮವಾದ ಉಪನ್ಯಾಸಕರನ್ನು ಕರೆಯಿಸಿ ಉಪನ್ಯಾಸಮಾಡಿಸಬಹುದು. ಹರಿಕಥೆಗಳು, ಸಂಗೀತಕಛೇರಿ, ಸ್ಕೂಲುನಾಟಕ, ಸ್ಕೂಲಿನ ಪ್ರದರ್ಶನ ಮುಂತಾದವುಗಳಮೂಲಕ ಹಳ್ಳಿಯ ಜನಗಳಿಗೆ ವಿದ್ಯಾಭ್ಯಾಸಮಾಡಿಸಬಹುದು. ಆದರೆ ಎಳೆಯಮಕ್ಕಳಿಗೆ ಅಕ್ಷರವನ್ನು ಬೋಧಿಸುವಂತೆ ಮುದುಕರಿಗೂ ಬೋಧಿಸಲು ಹೋದರೆ, ಅಂತಹ ಉಪಾಧ್ಯಾಯನು ದಡ್ಡನಾಗುವನೇವಿನಾ, ಮುದುಕನು ಅಕ್ಷರಸ್ಥನಾಗುವುದಿಲ್ಲ. ಸ್ಕೂಲಿನ ಆಶ್ರಯದಲ್ಲಿ ಆಟಗಳಿಗೆ ಏರ್ಪಾಡುಮಾಡಿದರೆ ಹಳ್ಳಿಯವರಿಗೂ ಸಂತೋಷ; ಬಾಲಕರಿಗೂ ಆನಂದ.

ಹಳ್ಳಿಯ ಪಾಠಶಾಲೆಯು ಹಳ್ಳಿಯ ಜನರಿಗೆ ಆದರ್ಶವಾಗಿರಬೇಕು. ಉತ್ತಮವಾದ ಹೂವಿನ ಗಿಡಗಳು, ಅಂದವಾದ ತೋಟ, ಶುಚಿಯಾದ ಮನೆ ಇವುಗಳನ್ನು ರಚಿಸಲು ಹಳ್ಳಿಯವರಿಗೆ ಕಷ್ಟವಿಲ್ಲ; ಆದರೆ ಅಭ್ಯಾಸವಿಲ್ಲ. ಉಪಾಧ್ಯಾಯನು ಅಂತಹ ಅಭ್ಯಾಸವನ್ನು ತನ್ನ ಉದಾಹರಣೆಯ ಮೂಲಕ ಕಲಿಸಬಹುದು.

ಹಳ್ಳಿಯ ಜನಗಳಿಗೆ ಉತ್ತಮಜೀವನವನ್ನು ಕಲಿಸಲು ದೊಡ್ಡ ದೊಡ್ಡ ತರಗತಿಗಳನ್ನೂ, ವೇಳಾಪತ್ರಿಕೆಗಳನ್ನೂ ಹಾಕಿದರೆ ನಗೆಗೀಡು. ಉಪಾಧ್ಯಾಯನು ಹಳ್ಳಿಯ ಜನಗಳಲ್ಲಿ ಬೆರೆತು ಅವರೊಡನೆ ಸಂಭಾಷಿಸಿಯೋ ಅಥವಾ ಅವರಿಗೆ ಸೂಚಿಸಿಯೋ ಅವರಿಂದ ಉತ್ತಮವಾದ ಕೆಲಸಗಳನ್ನು ಮಾಡಿಸಬೇಕು.

ಅಲ್ಲದೆ ಸರ್ಕಾರದ ನಾನಾ ಇಲಾಖೆಯವರು—ಬೇಸಾಯ, ಪರಸ್ಪರ ಸಹಾಯ, ವಾಣಿಜ್ಯ, ಗ್ರಾಮಪಂಚಾಯತಿ, ಆರೋಗ್ಯ ಇತ್ಯಾದಿ—ಹಳ್ಳಿಯ ಉಪಾಧ್ಯಾಯನನ್ನೇ ತಮ್ಮ ಪ್ರತಿನಿಧಿಯಾಗಿಟ್ಟುಕೊಂಡು ಅವನ ಮೂಲಕ ಗ್ರಾಮೋದ್ಧಾರಕಾರ್ಯಗಳನ್ನೆಲ್ಲ ಮಾಡಬಹುದು.

ನಮ್ಮ ದೇಶದಲ್ಲಿ ಇದು ಬಹು ದೂರದ ಆಸೆ. ಇಂತಹ ಕೆಲಸಗಳನ್ನು ಮಾಡಲು ಶಕ್ತನಾದ ಉಪಾಧ್ಯಾಯನು ಗಗನಕುಸುಮವೇ ಸರಿ. ಕಾಲೇಜು ವಿದ್ಯಾಭ್ಯಾಸದಿಂದಾಗಲಿ, ಶಿಕ್ಷಣತರಗತಿಗಳ ಶಿಕ್ಷಣದಿಂದಾಗಲಿ ಇಂತಹ ಉಪಾಧ್ಯಾಯರನ್ನು ತಯಾರುಮಾಡುವುದು ಕಷ್ಟ. ಈಗಿರುವ ಉಪಾಧ್ಯಾಯರಲ್ಲಿ ಬಹುಮಂದಿ ಇಂತಹ ನಾಯಕರಾಗುವುದಕ್ಕೆ ಸಾಕಾಗುವಷ್ಟು ಅರ್ಹತೆಯನ್ನು ಹೊಂದಿಲ್ಲ. ಅವರ ಜೀವನದ ಅಂತಸ್ತು ರೈತರ ಜೀವನದ ಅಂತಸ್ತಿಗಿಂತ ಮೇಲಾದುದಲ್ಲ; ಅವರ ವ್ಯಾವಹಾರಿಕಜ್ಞಾನವು ಹೆಚ್ಚಿನದಲ್ಲ. ಆರೋಗ್ಯವಿಚಾರದಲ್ಲಿ ಅವರಿಗೆ ಪರಿಶ್ರಮವೇ ಇಲ್ಲವೆನ್ನಬಹುದು. ನಮ್ಮ ಇಂದಿನ ಹಳ್ಳಿಯ ಉಪಾಧ್ಯಾಯರಲ್ಲಿ ಬಹುಶಕ್ತರಾದವರಿರುವರು. ಆದರೆ ಸರಿಯಾದ ಸನ್ನಿವೇಶವೂ, ಕ್ರಮವಾದ ಶಿಕ್ಷಣವೂ

ದೊರೆವವರೆಗೆ ಅವರ ಪ್ರಭಾವವು ಪ್ರಕಟವಾಗಲಾರದು. ಆದುದರಿಂದ ನಮ್ಮ ಗ್ರಾಮಜೀವನವು ಉತ್ತಮವಾಗಬೇಕಾದರೆ ಹಳ್ಳಿಯ ಉಪಾಧ್ಯಾಯರ ಜೀವನದಲ್ಲಿ ಕ್ರಾಂತಿಯಾಗಬೇಕು. ಅವರ ಯೋಗ್ಯತೆಯು ಬೆಳೆಯಬೇಕು. ಅವರು ಸುಶಿಕ್ಷಿತರಾಗಬೇಕು. ಅವರು ಗ್ರಾಮಪುನರುಜ್ಜೀವನ ಕಾರ್ಯದಲ್ಲಿ ದಕ್ಷತೆಯಿಂದ ಭಾಗವಹಿಸುವ ಉತ್ಸಾಹಿಗಳಾಗಬೇಕು.



# ೧೫ ಮುಂದಿನ ಹಳ್ಳಿಗಳು.



ನಾವು ಇಲ್ಲಿಯವರೆಗೂ ರೈತರ ಬಡತನವನ್ನು ನಿವಾರಿಸುವ ಮತ್ತು ಅವರ ದೇಹದಾರ್ಢ್ಯವನ್ನು ಬೆಳೆಯಿಸುವ ಮಾರ್ಗಗಳನ್ನು ಚರ್ಚಿಸಿರುವೆವು. ನಮ್ಮ ರೈತರಲ್ಲಿ ಬಹುಮಂದಿಗೆ ಅನ್ನಬಟ್ಟೆಗಳಿಗೂ ಗತಿಯಿಲ್ಲದಿರುವುದರಿಂದ ನಮ್ಮ ಗ್ರಾಮಾಭ್ಯುದಯ ಕಾರ್ಯಕ್ರಮದಲ್ಲಿ ಆರ್ಥಿಕಶಾಖೆಗೆ ಪ್ರಥಮಸ್ಥಾನವನ್ನು ಕೊಡುವುದು ಸಹಜವಾದುದೇ ಸರಿ; ಹಾಗಲ್ಲದೆ ರೈತರಲ್ಲಿ ಕಲಾಭಿರುಚಿಯನ್ನು ಹೆಚ್ಚಿಸುವ, ಹೃದಯವನ್ನು ಹಿಗ್ಗಿಸುವ, ಸಾಧನಗಳಿಗೆ ನಾವು ಪ್ರಥಮಸ್ಥಾನವನ್ನು ಕೊಡುವುದೆಂದರೆ "ಹೊಟ್ಟೆಗೆ ಹಿಟ್ಟಿಲ್ಲ; ಜುಟ್ಟು ಮಲ್ಲಿಗೆ ಹೂವನ್ನು ಬೇಡಿತಂತೆ" ಎಂದು ಜನರು ಆಡಿಕೊಳ್ಳಲು ಅವಕಾಶಕೊಟ್ಟಂತಾಗುವುದು. ಆದುದರಿಂದಲೇ ಸರ್ ಎಂ. ವಿಶ್ವೇಶ್ವರಯ್ಯನವರು "The animal wants of man are fundamental; Before they are satisfied, to talk of culture and refinement, is a mockery" ಎಂಬುದಾಗಿ ಹೇಳುವರು.[1] ರೈತರು ತಮ್ಮ ದೇಹವನ್ನು ಪೋಷಿಸಿಕೊಳ್ಳಲು ಸಾಕಾಗುವಷ್ಟು

ಆಹಾರವನ್ನೂ, ಬಟ್ಟೆಯನ್ನೂ, ವಾಸಸ್ಥಳವನ್ನೂ ಹೊಂದುವುದು ಅತಿ ಮುಖ್ಯವಾದ ಕೆಲಸವೇ ಸರಿ.

ಆದರೆ ನಮ್ಮ ಆದರ್ಶವು ಇಷ್ಟು ಮಾತ್ರವೇ? ನಮ್ಮ ರೈತರು ಒಂದು ಗರಿ ಹುಲ್ಲು ಬೆಳೆಯುವೆಡೆ ಹತ್ತು ಗರಿಗಳನ್ನು ಬೆಳೆಯಿಸಿದರೆ ನಾವು ನಮ್ಮ ಗ್ರಾಮಗಳನ್ನು ಉದ್ಧಾರಮಾಡಿದಂತಾಯಿತೇ? ನಮ್ಮ ದನಕರುಗಳನ್ನು ಪುಷ್ಟಿಯಾಗಿ ಬೆಳೆಯಿಸಬೇಕೆಂದು ಹಿಂದೆ ಹೇಳಿರುವಂತೆ ನಮ್ಮ ರೈತರನ್ನೂ ಪುಷ್ಟರನ್ನಾಗಿ ಬೆಳೆಸಿದರೆ ಸಾಕೆ? ಅಥವಾ ದನಕರುಗಳ ಬೆಳವಳಿಕೆಗೂ, ಮಾನವನ ಬೆಳವಳಿಕೆಗೂ ಸ್ವಲ್ಪ ವ್ಯತ್ಯಾಸವಿರಬೇಕೆ? ಅಂದರೆ ನಮ್ಮ ಹಳ್ಳಿಗಳಲ್ಲಿ ದವಸಧಾನ್ಯಗಳು ಸಮೃದ್ಧಿಯಾಗಿ ದೊರೆತರೆ ನಾವು ನಮ್ಮ ಆದರ್ಶವನ್ನು ಎಟಕಿಸಿದಂತಾಯಿತೇ ಅಥವಾ ಸಂಪದಭಿವೃದ್ಧಿಯೊಡನೆಯೇ ಆತ್ಮವಿಕಾಸಕ್ಕೂ, ಕ್ಲೇಶರಹಿತವಾದ ಜೀವನಕ್ಕೂ ಅವಕಾಶವು ದೊರೆತರೆ ಎಟಕಿಸಿದಂತಾಗುವುದೋ? ಸಂಪದಭಿವೃದ್ಧಿಯು ಸುಖಮಯವಾದ ಜೀವನಕ್ಕೆ ತಳಹದಿಯೆಂಬುದನ್ನು ಮರೆಯಬಾರದು; ಆದರೆ ಬರಿಯ ತಳಹದಿಯೇ ಸೌಧವೆನಿಸದು. ನಮ್ಮ ರೈತರು ತಮ್ಮ ಆರ್ಥಿಕಜೀವನವನ್ನು ಕ್ರಮಪಡಿಸಬೇಕು; ಅದರೊಡನೆಯೇ ನಮ್ಮ ಹಳ್ಳಿಗಳು ಜೀವಕಳೆಯಿಂದ ತುಂಬಿತುಳುಕುವಂತಾಗಬೇಕು. ರೈತರಲ್ಲಿ ಕಲಾಭಿರುಚಿಯೂ, ಸೌಂದರ್ಯಾಭಿನಿವೇಶವೂ ಬೆಳೆದಷ್ಟೂ ಅವರ ಜೀವನವು ಉತ್ತಮವಾಗುವುದು.

ಕಲಾಭಿರುಚಿಯೂ ಮತ್ತು ಸೌಂದರ್ಯಾಭಿನಿವೇಶವೂ ಮನುಷ್ಯನಲ್ಲಿ ಸಹಜಜನ್ಯವಾದ ಶಕ್ತಿಗಳು. ಅನಾಗರಿಕರೆಂದೆನಿಸಿಕೊಳ್ಳುವ ಶಿಲಾಯುಗದ ಜನಗಳೂ ಕೂಡ ಪ್ರಕೃತಿಯ ಬೆಡಗಿಗೆ ಮನಸೋತು, ತಮ್ಮ ಮನಸ್ಸಿನ ವಿಕಾಸಗಳನ್ನು ತಾವು ವಾಸಿಸುವ ಗುಹೆಗಳ ಗೋಡೆಗಳ ಮೇಲೆ ಚಿತ್ರಿಸಿಕೊಳ್ಳುತ್ತಿದ್ದರು. ನಮ್ಮ ನಾಡಿನಲ್ಲಿ ಪ್ರಕೃತಿಯ ಸೊಬಗಿಗೆ ಮಿತಿಯೇ ಇಲ್ಲವೆನ್ನಬಹುದು. ದೊಡ್ಡ ದೊಡ್ಡ ನಗರಗಳಲ್ಲಿ ಕೃತಕವಾದ

ಸೊಬಗನ್ನು ಬಿಟ್ಟು ಪ್ರಕೃತಿಯ ನೈಜಸೌಂದರ್ಯವನ್ನು ಆಸ್ವಾದಿಸಬೇಕಾದರೆ ಬಹುದೂರ ಹೋಗಬೇಕು; ಹಳ್ಳಿಗಳಲ್ಲಿ ಮನೆಯಿಂದ ಹೊರಗೆ ಇಣುಕಿನೋಡಿದರೆ ಸಾಕು; ಪ್ರಕೃತಿದೇವಿಯು ತನ್ನ ಸೌಂದರ್ಯವನ್ನು ರೈತನಿಗಾಗಿಯೇ ಪ್ರದರ್ಶಿಸಿ ಕಾಯುತ್ತಿರುವಳು. ನದಿಗಳು, ಕೆರೆಗಳು, ಬೆಟ್ಟಗಳು, ತೋಪುಗಳು, ಪುಷ್ಪಲತೆಗಳು ಎತ್ತನೋಡಿದರತ್ತ ಮನುಷ್ಯನ ಹೃದಯವನ್ನು ಸೂರೆಗೊಳ್ಳುತ್ತಿರಬಹುದು. ಅದು ತಪ್ಪಿದರೆ ಹೊಲಗದ್ದೆಗಳಲ್ಲಿಯೂ, ತೋಟಗಳಲ್ಲಿಯೂ ಹಚ್ಚಗಿರುವ ಸೀರೆಯನ್ನುಟ್ಟು ನಲಿದಾಡುತ್ತಿರುವ ಪ್ರಕೃತಿವೇವಿಯ ದರ್ಶನವು ನಮಗೆ ದೊರೆಯಬಹುದು. ತಮ್ಮ ನೈಜಸನ್ನಿವೇಶದಲ್ಲಿ ನವಿಲುಗಳ ಕುಣಿತ, ಕೋಗಿಲೆಗಳ ಗಾನ, ಇತರಪಕ್ಷಿಗಳ ಸಂಭ್ರಮ—ಇವುಗಳೆಲ್ಲವೂ ರೈತರನ್ನು ಆಹ್ವಾನಿಸುತ್ತಿರುವುವು. ಇಂತಹ ಸನ್ನಿವೇಶದಲ್ಲಿ ಕಲಾಭಿರುಚಿಯನ್ನು ಬೆಳೆಯಿಸುವುದು ಕಷ್ಟವೆ? ನಮ್ಮ ಪುರಾತನರ ಕಲಾಭಿರುಚಿಯ ಕಡೆಗೆ ಸ್ವಲ್ಪ ಗಮನವನ್ನು ಕೊಡಿರಿ. ಎಲ್ಲಿ ಪ್ರಕೃತಿಯ ಬೆಡಗು ಅತಿ ಹೆಚ್ಚೋ, ಅಲ್ಲಿಯೇ ಒಂದು ದೇವಾಲಯ. ಪ್ರಕೃತಿಯ ಬೆಡಗಿನೊಡನೆ ಪೈಪೋಟಿ ಮಾಡುವ ಶಿಲ್ಪಕಲೆ; ಮನಸೋತ ಮಾನವನು ಪ್ರಕೃತಿಗೂ ದೇವರಿಗೂ ಭೇದವೆಣಿಸುವುದೇ ಬೇಡ; ಇಂತಹ ಪುರಾತನ ಕಟ್ಟಡಗಳು ಪ್ರತಿ ಹಳ್ಳಿಯಲ್ಲಿಯೂ ಇರುವುವು. ಒಂದು ಬಗೆಯಲ್ಲಿ ನಮ್ಮ ರೈತರು ಪ್ರಕೃತಿಗೆ ಒಂದುಕಡೆ, ನಮ್ಮ ಪುರಾತನರಿಗೆ ಒಂದುಕಡೆ ಋಣಿಗಳಾಗಿರುವರು. ಆದರೆ ತಮ್ಮ ಋಣದ ಭಾರವನ್ನು ಮರೆತು, ಪ್ರಕೃತಿಯ ಬೆಡಗನ್ನೂ ತಿರಸ್ಕರಿಸಿರುವರು, ತಮ್ಮ ಪಿತ್ರಾರ್ಜಿತವಾದ ಕಲೆಯ ಮೂರ್ತಿಯನ್ನೂ ಮೂಲೆಗೊತ್ತಿರುವರು. ರೈತರು ಸಜೀವಿಗಳಾದರೆಂದರೆ ಇಂತಹ ಕಲಾಭಿರುಚಿಯು ಅವರಲ್ಲಿ ಪುನಃ ಉದ್ಭವವಾಗಲೇ ಬೇಕು.

ಹಿಂದಿನ ಜನಗಳಂತೆ, ಇಂದಿನ ಜನರೂ ಪ್ರಕೃತಿಯೊಡನೆ ಸಹಕರಿಸಿ, ಗ್ರಾಮದ ಸನ್ನಿವೇಶದಲ್ಲಿರುವ ಕುಂದುಕೊರತೆಗಳನ್ನು ಪರಿಹರಿಸಿ,

ತಮ್ಮ ಜೀವನದ ಸೌಂದರ್ಯವನ್ನು ಇನ್ನೂ ಉತ್ತಮಪಡಿಸಿಕೊಳ್ಳುವುದು ಆವಶ್ಯಕ. ದೇವಾಲಯ ಮಂಟಪಗಳ ಜೀರ್ಣೋದ್ಧಾರ, ಗ್ರಾಮನಿರ್ಮಲೀಕರಣ, ಹೊಸ ತೋಪುಗಳ ನಿರ್ಮಾಣ, ತಮ್ಮ ಹೊಲ ಗದ್ದೆ ತೋಟಗಳ ವಿನ್ಯಾಸ—ಇವುಗಳ ಸೌಂದರ್ಯಕ್ಕೂ ಗಮನಕೊಡುವುದು ಯುಕ್ತವಾಗಿದೆ. ಈ ಬಗೆಗಳಲ್ಲಿ ಇವರು ಪ್ರಕೃತಿಯೊಡನೆ ಸಹಕರಿಸಿ ತಮ್ಮ ಸನ್ನಿವೇಶವನ್ನು ಬದಲಾಯಿಸುವುದು ಸಾಧ್ಯ.

ಇದಕ್ಕಿಂತಲೂ ಮೊದಲು ನಮ್ಮ ಹಳ್ಳಿಗಳ ಸ್ಥಿತಿಗೆ ಸ್ವಲ್ಪ ಗಮನವನ್ನು ಕೊಡುವುದು ಆವಶ್ಯಕ. ಸೊಟ್ಟುಸೊಟ್ಟಾಗಿರುವ ರಸ್ತೆಗಳೂ, ಗುಹೆಗಳಂತಿರುವ ಮನೆಗಳೂ, ತಿಪ್ಪೆಗುಂಡಿಗಳಾಗಿರುವ ಹಿತ್ತಿಲೂ, ಸೌಂದರ್ಯೋಪಾಸಕರ ಲಕ್ಷಣವಲ್ಲ. ಹಿಂದಿನಂತೆ ಇಂದೂ ನಮ್ಮ ಮನೆಗಳನ್ನು ಸಾರಿಸಿ ಗುಡಿಸಿ, ರಂಗವಲ್ಲಿಗಳಿಂದ ಅಲಂಕಾರಮಾಡುವರು. ಇದನ್ನು ಇನ್ನೂ ವೃದ್ಧಿಪಡಿಸಿ, ಮನೆಯ ಎಲ್ಲ ಗೋಡೆಗಳಿಗೂ ಸುಣ್ಣ ಬಳಿಸುವುದು, ಒಳಗೆ ಚಿತ್ರಪಠಗಳನ್ನು ತೂಗುಹಾಕುವುದು, ಶುಚಿಯಾಗಿಟ್ಟಿರುವುದು ಮುಂತಾದ ಸಣ್ಣ ವಿಷಯಗಳಲ್ಲಿ ರೈತರಿಗೆ ಶಿಕ್ಷಣವು ದೊರೆಯಬೇಕು. ಹಳ್ಳಿಯ ಮನೆಗಳ ಸ್ಥಿತಿಯನ್ನೂ, ನಗರದ ಮನೆಗಳ ಇರುವಿಕೆಯನ್ನೂ ಹೋಲಿಸಿ ನೋಡಿದರೆ ಸೌಂದರ್ಯಕ್ಕೆ ಮನಸೋಲುವ ಶಕ್ತಿಯಿರುವವರು ಹೆಚ್ಚು ವೆಚ್ಚವಿಲ್ಲದೆಯೇ ತಮ್ಮ ಮನೆಗಳನ್ನು ಎಷ್ಟು ಅಂದವಾಗಿ ಇಡಬಲ್ಲರೆಂಬುದು ವಿದಿತವಾಗುವುದು.

ನಗರವಾಸಿಗಳಂತೆ ಹಳ್ಳಿಯವರಿಗೂ ಹೂವನ್ನು ಕಂಡರೆ ಆಸೆ. ನಮ್ಮ ನಾಡಿನಲ್ಲಿ ವರ್ಷದ ಎಲ್ಲಾ ತಿಂಗಳಲ್ಲಿಯೂ ಹೂವುಗಳನ್ನು ಬೆಳೆಯಿಸಬಹುದು; ಇದಕ್ಕಾಗಿ ರೈತರು ಹೆಚ್ಚು ಹಣವನ್ನು ವೆಚ್ಚಮಾಡಬೇಕಾದುದಿಲ್ಲ. ಆದರೆ ನಮ್ಮ ಹಳ್ಳಿಗಳಲ್ಲಿ ಪ್ರವಾಸಮಾಡಿ ನೋಡಿರಿ; ಎಷ್ಟು ಮಂದಿಯ ಮನೆಯ ಮುಂದೆ ಹೃದಯವನ್ನು ಹಿಗ್ಗಿಸುವ ಹೂವಿನ ಗಿಡಗಳಿರುವುವು? ಅದಕ್ಕೆ ಬದಲಾಗಿ ತಿಪ್ಪೆಯ ಗುಂಡಿಯೋ ಮುರುಕಲು

ಗೋಡೆಯೋ ಕಣ್ಣನ್ನು ಚುಚ್ಚಲು ಬರುವುದು. ನಮ್ಮ ಹಳ್ಳಿಗಳು ರಮ್ಯ ವಾಗಬೇಕಾದರೆ, ಹಳ್ಳಿಗಳಲ್ಲಿ ಹೂವಿನ ಗಿಡಗಳು ಬೆಳೆಯಬೇಕು.

ಸಂಗೀತ, ನಾಟಕ, ಸಾಹಿತ್ಯ—ಇವುಗಳಲ್ಲಿ ನಮ್ಮ ರೈತರಿಗೆ ಇಂದೂ ಶ್ರದ್ಧೆಯುಂಟು. ಹರಿಕಥೆ, ಪುರಾಣ, ಯಕ್ಷಗಾನ, ಕಥಾಕಳಿ ಮೊದಲಾದುವು ಇಂದೂ ನಮ್ಮ ರೈತರನ್ನು ಬಹುದೂರದಿಂದಲೂ ಆಕ ರ್ಷಿಸಬಲ್ಲವು. ಇವುಗಳನ್ನು ಸ್ವಲ್ಪ ಉತ್ತಮಪಡಿಸಿ ರೈತರಲ್ಲಿ ಕಲಾಭಿ ರುಚಿಯನ್ನು ಹೆಚ್ಚಿಸುವುದುಮಾತ್ರವಲ್ಲದೆ, ಅವರಿಗೆ ಉಪಯೋಗಕ್ಕೆ ಬರುವ ವಿಷಯುಗಳನ್ನೂ ತಿಳಿಸಬಹುದು. ಮೈಸೂರಿನ ಅನೇಕ ಹಳ್ಳಿಗಳಿಗೆ ವಿದ್ಯುದ್ದೀಪವು ದೊರೆಯುತ್ತಿರುವುದಷ್ಟೆ. ಅಂತಹ ಸ್ಥಳಗಳಲ್ಲಿಯಾದರೂ ರೇಡಿಯೋಗಳನ್ನು ಸ್ಥಾಪಿಸಿ ರೈತರಿಗೆ ಸುಶ್ರಾವ್ಯವಾದ ಸಂಗೀತವನ್ನು ದೊರಕಿಸಬಹುದು. ಶ್ರೀಮನ್ಮಹಾರಾಜರವರ ಔದಾರ್ಯದಿಂದ ಮೈಸೂ ರಿನ ನಗರವಾಸಿಗಳು ಅತ್ಯುತ್ತಮವಾದ ಸಂಗೀತವನ್ನು ಆಸ್ವಾದಿಸುವ ಪುಣ್ಯವನ್ನು ಪಡೆದಿರುವರು; ಅಂತಹ ಸಂಗೀತಗಳನ್ನು ಕೇಳುವಾಗ ಯಾವ ಗ್ರಾಮಪ್ರೇಮಿಗೆತಾನೆ ಹಳ್ಳಿಯಲ್ಲಿ ನೀರಸವಾದ ಜೀವನವನ್ನು ಹೇಗೋ ನೂಕುತ್ತಿರುವ ರೈತರ ಪಾಡು ಹೃದಯವನ್ನು ಚುಚ್ಚದಿರುವುದು ?

ರೈತರಲ್ಲಿ ಕಲಾಭಿರುಚಿಯನ್ನೂ, ಸೌಂದರ್ಯಾಸ್ವಾದನಶಕ್ತಿಯನ್ನೂ ವೃದ್ಧಿಪಡಿಸಲು ಸಾವಿರಾರು ಮಾರ್ಗಗಳಿವೆ. ಅವುಗಳನ್ನೆಲ್ಲ ಇಲ್ಲಿ ವರ್ಣಿ ಸಲು ಅವಕಾಶವಿಲ್ಲ. ಕೊನೆಯದಾಗಿ ಒಂದು ಮಾತನ್ನು ಹೇಳ ಬಹುದು. ಇಂದಿನ ರೈತರು ಸೌಂದರ್ಯೋಪಾಸನೆಯನ್ನು ಮಾಡುವುದು ಆವಶ್ಯಕ; ಮುಂದಿನ ಜನಾಂಗವು ತನ್ನ ಹೃದಯವನ್ನು ವಿಕಾಸಪಡಿಸಿ ಕೊಳ್ಳುವಂತೆ ಮಾಡುವುದು ಇನ್ನೂ ಹೆಚ್ಚು ಆವಶ್ಯಕ. ಹಳ್ಳಿಯ ಪಾಠಶಾಲೆಗಳು ಈ ಕೆಲಸವನ್ನು ಬಹುಮಟ್ಟಿಗೆ ಸಾಧಿಸಬಲ್ಲವು.



# REFERENCES

## ಪೀಠಿಕಾಪ್ರಕರಣ




1 Census Report 1931: India Vol. I and Mysore Vol. 1.

2 M. R. Srinivasa Murty: Nagarika.

3 Census Report 1931: Mysore Vol I.

4 Henry Wolff: Rural Reconstruction.

5 Report of the National Child Labour Committee of America 1922.

6 N. S. Subba Rao Esq. M.A., (Cantab) Bar-at-Law: Address delivered while opening the Education week at Hassan Jan. 1935.

7 National Child Labour Committee. Op. cit.





1 Cumming: Modern India p. 381.

2 Ibid pp. 254-255

3 P. J. Thomas: Vide Hindu Aug. 13. 1934.

4 Sir M. Visveswariah: Planned Economy for India p. 401.

5 D. V. Gundappa: All about Mysore 1931 p. 111.

6 P. J. Thomas: Op.cit.

7 Vide chapter on ಗ್ರಾಮಾರೋಗ್ಯ.

8 S. K. Aiyyangar: Studies in Indian Rural Economics p. 104.

9 Ibid p. 105.

10 Census Report: 1931. Mysore Vol. I p. 40.

11 Ibid.

12 Mahadeva Desai: With Gandhiji in Indian villages.

೨

1 Vera Anste: Modern India pp. 266-7-8.

2 India in 1930. p. 145.

3 ,, p. 151.

4 Census Report of India 1931 Vol. I.

5 Statesman's Year Book 1934 p. 459.

6 Indian Year Book 1936 p. 288.

7 Ibid.

೩

1 Mysore Census Report 1931 Vol. I.

2 Jathar and Beri: Indian Economics Vol. I p. 159.

3 Royal Commission on Indian Agriculture p. 580, para 507.

4 Indian Year Book 1936 p. 48.

5 K. Subramanyam: 'Visala Bharatha'

6 Indian Census Report 1931 Vol. I, p. 71.

7 Ibid.

8 Sir M. V: Reconstructing India.

୪

1 Sir. M. V.: Planned Economy for India p. 31.
2 Sir. M. V.: Reconstructing India p. 174.
3 King: "Farmers of Forty Centuries"
4 Sir. M. V.: Planned Economy for India.
5 Jathar and Beri Op. cit. p. 191.
6 Sir. M. V.: Reconstructing India p. 174.
7 R. K. Das: The Industrial efficiency of India p. 29.
8 Howard: Crop production in India.
9 Report of the Royal Commission on Indian Agriculture Vol. I. chapter IV.
0 Howard: Op. cit. p. 35.
1 Dr. Coleman: Note on the Report of the Royal Commission on Agriculture in India.
2 Howard: Op. cit.
3 Brayne: Remaking of village India p. 13.
4 Ibid p. 14.
5 Ibid
6 Howard: Op. cit. p. 39.
7 Brayne: Op. cit.
8 Indian Year Book 1936. p. 317.
9 Report of the Department of Commercial Intelligence: Simla. Vide Hindu May 27, 1936
0 India in 1930 p. 228.
1 Report of the Department of Commercial Intelligence. Ibid.

22 Sir Mirza M. Ismail: Dewan's Address to the Representative Assembly. Birth Day session 1936. p. 5.

23 Royal Commission on Indian Agriculture Vol. I, Chapter X.

24 Ibid. Chapter IV.

25 Sir M. V: Planned Economy for India.

26 Vide Chapter on Holdings.

27 Dr. Coleman: Op. cit p. 15.

28 Darling: The Punjab Peasant in Prosperity and Debt III Ed. 1932, p. 31.

29 Ibid.

30 Jathar and Beri. Op. cit p. 242.

31 Brayne: Remaking of Village India, p 7.

೫

1 Census Report: Mys. 1921, Vol. I, p. 244.

2 D. V. Gundappa: Op. cit, p. 86.

3 Mysore Gazette Nov. 28, 1935.

4 B. G. Sapre: Essentials of Indian Economics 1927, p. 126

5 Keatinge: Rural Economy in the Bombay Deccan. pp. 52-53.

6 Harold Mann: Land and Labour in a Deccan Village.

7 Report of the Committee on Consolidation of Holdings in Baroda p. 31-33.

8 Indian Year Book 1936, p. 48.
9 Darling: Op cit p. 268.
10 Darling: Op cit p. 266.
11 Darling: Op cit p. 259.
12 Darling: Op cit p. 29.
13 Kale: Indian Economics 1922 IV Ed. p. 168.
14 Mysore Gazette: Nov. 28. 1935.
15 Jathar and Beri Op. cit p. 198.
16 Darling: Op. cit p. 252.
17 Darling: Op. cit p. 266.

೬

1 Calvert: Wealth and Welfare of the Punjab p. 245.
2 Slater: Some South Indian Villages p. 17.
3 E. V. Lucas: Economic Life of a Punjab Village.
4 R. K. Das: Wastage of India's Man Power. Modern India Apr. 1927.
5 Jack: Economic Life of a Bengal District.
6 Census Report. Mysore 1931 Vol. I, Paras 53 and 283.
7 Gregg: Economics of Khaddar pp. 18-25.
8 Darling: Op. cit. p111.
9 Census Report Mysore: Ibid para 285.
10 Report of the Committee to enquire into the needs of Pre-University Education in Mysore.

11 Sir Mirza Ismail: Dewan's Address to the R. Assembly June 1936.
12 Gregg: Op. cit p. 170.
13 R. C. A. Chapter XVI.
14 Sir. M. V.: Planned Economy.

೭

1 R. K Mukerji: A History of Indian Shipping and Maritime Activity.
2 Indian Year Book 1936.
3 Ibid.
4 Ibid p. 291.
5 Spencer Hatch: Up From Poverty.
6 Roosevelt: Country Life Commission 1901. quoted by Hibbard in his "Marketing of Agricultural products."
7 Hibbard: Marketing of Agri. products.
8 D. K. and V. R. Gadgils: A Survey of the Marketing of Fruit in Poona
9 Yegnya Narayana Ayyar: Mysore Economic Journal Vol. 19: No. 12 pp. 760-761.
10 Punjab Banking Equiry Committee Report Chapter VII.
11 Yegnya Narayana Ayyar: Op. cit. p. 759-60.
12 R. C. A: Evidence Vol. VII.
13 Punjab Banking Enquiry Committee Report.
14 Mysore Economic Journal Apr. 1934.

15 Govt. of India Resolution No. F. 16 (1)-f/34 dated 5th May 1936.
16 R. C. A: Evidence Vol. II p. 15.
17 Henry Wolff: Cooperation in Agriculture.
18 Vide Chapter on Cooperation
19 Henry Wolff: Op. cit.
20 Henry Wolff: Op cit. p. 62-63.



1 See chapter on Marketing.
2 Theodore Morison: Economic Transition in India. Reprinted 1914.
3 (*a*) Statesman's Year Book 1934.
(*b*) India in 1930-31.
(*c*) Dewan's Address to the Mysore Representative Assembly June 1935 p. 12.
4 Indian Year Book 1935-36. p 691
5 Morison, Op. cit.
6 Indian Year Book 1936. Statesman's Year Book 1934.
7 Sir. M. V.: Planned Economy p. 113.
8 Op. cit.
9 National Child Labour Committee U. S. A. "Rural child welfare" 1922 p. 41.
10 Indian Year Book 1935-36. Statesman's Year Book 1934.

11 Sir M. V. Op. cit. p. 110.

12 The Indian Economic Conference Hand-book : Mysore 1929 pp. 60-61.

13. " Rural Child Welfare" Op. cit. p. 41.

౬

1 Minority Report of the Central Banking Enquiry Committee.

2 Deccan Riots Commission.

3 Report of the Famine Commissions.

4 Report of the Central Banking Committee 1930.

5 Punjab Peasant in Prosperity and Debt III Ed. 1931.

6 Ibid p. 19.

7 Ibid p. 5.

8 Bombay Banking Committee Report pp. 42 and 46.

9 C. B. E. Vol. I p. 89.

10 Report of Bihar Banking Committe p. 55.

11 Report of the U. P. Banking Enquiry Committee p. 84.

12 Darling Op. cit. p. 20.

13 Statistical statements relating to the Co-operative Movement in India 1928-29

14 Royal Commission on Indian Agriculture p. 446.

## ೧೦

1 Brayne: Socrates persists in India p. 28.

2 R. C. A. Vol. I p. 436.

3 Darling: Op. cit.

4 Bombay Co-operative Quarterly Sept. 1935.

5 Henry Wolff: Peoples Banks. p. 9.

6 Ibid p. 11.

7 India in 1930-31 p. 591.

8 Majority Report of the Central Banking Committee. Chapter IX.

9 R. C. A. p. 446 para 372.

10 Darling: Op. cit. p. 241.

11 Darling Op. cit. p. 249.

12 R. C. A. p. 446.

13 A. Krishna Rao: Presidential Adress delivered before the Mysore Provincial Co-operative Conference. Op. cit. June 22nd 1935.

14 Report on the Co-operative Societies in Mysore 1931-32 p. 13.

15 Ibid.

16 The Indian Year Book 1935-36 p. 394.

17 Report on the Co-operative Societies in Mysore 1934-35.

18 Indian Co-operative Review Vol. I. No. 4 p. 566.

19 Ibid.

20 Miss: Margaret Digby, Secretary, Horace Plunkett Foundation: London. (in the Indian Co-operative Review Vol. I part IV.)

21 Vide Chapter on marketing.

22 Indian Year Book 1935-36. p. 396.

23 Vide chapter on (ಜಮೀನು ಹಂಚುವಿಕೆ).

24 International Labour Review July 1935 Health Co-operative Societies in Yugoslavia.

25 Indian Co-operative Review Vol. I, No. 4, p. 566

26 Indian Year Book 1935-36 p. 400.

27 Darling: Op. cit p p. 252-254.

28 Ibid p. 255.

29 R. C. A. P. 450.

## ೧೧

1 Arthur Shadwell: Industrial Efficiency.

2 Darling Op. cit p. 66.

3 R. C. A. Ch XIV.

4 See " ಓಲಿಕಾಪ್ರಕರಣ "

5 Statistical Year Book of the League of Nations 1934.

6 Ibid.

7 Census. India 1931 Vol. I.

8 Annual Report of the Public Health Commissioner with the Government of India for the year 1932, Vol. 1, p 19.

9 Census. Mysore 1931, Vol. I.

10 Public Health Commissioner. Ibid p. 21.

11 Sir John Megaw: Vide Census. India 1931, Vol. I, p. 97.

12 Jathar and Beri: Op. cit p. 54.

13 Public Health Commissioner Ibid p. 29.

14 Annual Report of the Department of Public Health, Mysore 1932.

15 League of Nations. Nutrition and Public Health 4 Volumes.

16 Sir Robert McCarrison: Vide Report of the Public Health Commissioner. Op. cit p. 4.

17 Sir John Megaw · Op. cit p. 323.

18 Olcott: Village Schools in India p. 49.

19 McKee: Developing a project curriculum for village schools in India, p. 210.

20 India in 1930-31, p. 417.

21 Public Health Commissioner: Op. cit p. 57.

22 Viceroy's Address to the Central Legislature on 21-9-36.

23 Vide Mysore Economic Journal Sep. 1936, Paris Correspondent,

24 Dewan's Address to the Representative Assembly October 1934, p. 12.

೧೨

1 Sir Charles Metcalfe's minute 1830.
2 Report of the Royal Commission on centralisation in India 1909.
3 Report of the Seal Committee on Constitutional Reforms in Mysore.
4 The Mysore Village Panchayat Regulation 1926· (amended from time to time)
5 Reconstructing India p. 84.
6 Dewan's Address to R. A. Oct. 1934.
7 Govt. Review of the working of Village Panchayats in Mysore during the year 1934-35.
8 Kautilya : Arthashastra.
9 Dewan's Address. Op. cit.
10 Sir M. V. Recontructing India.

೧೩

1 Vera Anste : Op cit pp. 266, 267, 268.
2 Wadia and Joshi : Wealth of India p. 127.
3 Mcdougall : National Welfare ane National Decay 1921 pp. 155-56.
4 Vide : Chapter on ಜಮಿಾನು ಹಂಚುವಿಕೆ,

5 Sreenivasa: ಜನತೆಯ ಸಂಸ್ಕೃತಿ. p. 20.

6 The Gayekwar: Industrial Conference 1908.

7 Darling: Rusticus Loquiture 1929.

8 De Kempis: Imitation of Christ.

## ೧೪

1 Dr. Siddalingiah: Reconstructing Elementary Education in Mysore p. 14.

2 Ibid.

3 Progress of Education in India 1927-32, Vol: I, p. 138.

4 Progress of Education in Mysore: 1922-1932, p. 29.

5 D. V. Gundappa: All about Mysore p. 107.

6 Sir M. V: Planned Economy p. 414.

7 Ibid p. 34.

8 Progress of Education in Mysore: Op cit pp. 31-32.

9 Hartog Committee Report: p. 345.

10 Progress of Education in India Op cit p. 140.

11 Ibid p. 137.

12 Ibid p. 142.

13 Ibid p. 173.

14 Progress of Education: Mysore Op. cit

15 Arthur Waugh : Fortnightly Review Aug. 1934 p. 177.

16 National Child Labour Committee Report. Op. cit.

17 N. S. Subba Rao: Education week, Hassan.

18 Joseph Kennedy : Rural Life and the Rural School p. 114.

19 Ibid pp. 36, 37, 114.

10 "The House of the people"—An account of Mexico's New School by Katherine K. Cook 1935.

21 Ibid.

೧೫

1 Sir M V. Planned Economy p. 85.



# ತಿದ್ದುಪಡಿ

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 22 | 10 | 1250 | 1370 |
| 93 | 5 | ವಿಷಯಲ್ಲಿ | ವಿಷಯದಲ್ಲಿ |
| 107 | 16 | 42,953·34 | 2,60,438 |
| 108 | 1 | 12 | 13.7 |
| 179 | 8-9 | ಇದನ್ನೇ........ಕರೆಯುವರು. | ಬಿಟ್ಟುಬಿಡುವುದು. |
| 183 | 14 | ಸ್ಪಷ್ಟವಾ | ಸೃಷ್ಟಿಯಾ |

